# ಸಂಗೊಳ್ಳಿ ರಾಯನಾಯಕ

ಐತಿಹಾಸಿಕ ಕಾದಂಬರಿ

ಬರೆದವರು :

ಬಸವರಾಜ ಕಟ್ಟೀಮನಿ



ಪ್ರಕಾಶಕರು :

ಶ್ರೀ ಸಾಯಿ ಪಬ್ಲಿಷಿಂಗ್ ಹೌಸ್

ವಿಜಯ ರೋಡ, ಧಾರವಾಡ

# ಸಂಗೊಳ್ಳಿ ರಾಯಣ್ಣನಾಯಕ

ಐತಿಹಾಸಿಕ ಕಾದಂಬರಿ

ಬರೆದವರು :

ಬಸವರಾಜ ಕಟ್ಟೀಮನಿ

ಪ್ರಕಾಶಕರು :

ಶ್ರೀ ಸಾಯಿ ಪಬ್ಲಿಷಿಂಗ್ ಹೌಸ್

ವಿಜಯ ರೋಡ, ಧಾರವಾಡ

# ಮುನ್ನುಡಿ

ಉತ್ತರಕರ್ನಾಟಕದ ಪ್ರಖ್ಯಾತ ಸ್ವಾತಂತ್ರ್ಯವೀರ ಸಂಗೊಳ್ಳಿ ರಾಯಣ್ಣ. ಬ್ರಿಟಿಶರ ಅಧಿಕಾರವನ್ನು ಪ್ರತಿಭಟಿಸಿ ಪೌರುಷದಿಂದ ಹೋರಾಡಿ ತನ್ನ ಪ್ರಾಣವನ್ನು ಅರ್ಪಿಸಿದ ಆ ಗಂಡುಗಲಿಯನ್ನು ಕುರಿತು ಜಾನಪದ ಕಥೆಗಳೂ ಲಾವಣೀ ಪದಗಳೂ ಬೈಲಾಟಗಳೂ ರಚಿತವಾಗಿವೆ. ಆದರೆ, ಐತಿಹಾಸಿಕ ಸತ್ಯಾಂಶಗಳನ್ನು ಸಂಗ್ರಹಿಸಿ, ಒಂದು ವ್ಯವಸ್ಥಿತ ರೀತಿಯಲ್ಲಿ ಆತನ ಚರಿತ್ರೆಯನ್ನು ರೂಪಿಸುವ ಕೆಲಸ ಇದುವರೆಗೆ ನಡೆದಿಲ್ಲ. ರಾಯಣ್ಣನ ರೋಮಾಂಚಕಾರಕ ಜೀವನದ ಬಗೆಗೆ ಬಾಲ್ಯದಿಂದಲೂ ಆಕರ್ಷಿತನಾಗಿದ್ದ ನಾನು ಕಳೆದ ಇಪ್ಪತ್ತು ವರ್ಷಗಳಿಂದ ಐತಿಹಾಸಿಕ ಗ್ರಂಥಗಳನ್ನೂ ದಾಖಲೆಗಳನ್ನೂ ತಿರುವಿ ಹಾಕಿ, ಅಂದಿನ ಸರಕಾರದ ಕಡತಗಳನ್ನೂ ನೋಡಿಕೊಂಡು ಇದೀಗ ಈ ಕಾದಂಬರೀರೂಪದ ಚರಿತ್ರೆಯನ್ನು ಬರೆದು ಕನ್ನಡಿಗರಿಗರ್ಪಿಸಿದ್ದೇನೆ. "ಪ್ರಜಾವಾಣಿ"ಯಲ್ಲಿ ಧಾರಾವಾಹಿಯಾಗಿ ಪ್ರಕಟವಾದ ಈ ಕಾದಂಬರಿ ಈಗ ಪುಸ್ತಕ ರೂಪದಲ್ಲಿ ಬೆಳಕು ಕಾಣುತ್ತಿದೆ. ಸಂಗೊಳ್ಳಿ ರಾಯಣ್ಣ ನಾಯಕನು ಸಂಸ್ಥಾನಿಕನಾಗಿರಲಿಲ್ಲ, ಶ್ರೀಮಂತನಾಗಿರಲಿಲ್ಲ. ಜನಸಾಮಾನ್ಯರ ಪ್ರತಿನಿಧಿಯಾಗಿದ್ದ ಆ ಕಡುಗಲಿಯು ಸ್ವಾಭಿಮಾನ, ಸ್ವದೇಶಾಭಿಮಾನ, ಸ್ವಾತಂತ್ರ್ಯಪ್ರೇಮ, ಸೋಲನ್ನರಿಯದ ಅಪ್ರತಿಮ ಪೌರುಷ ಇತ್ಯಾದಿ ಸದ್ಗುಣಗಳಿಂದ ಮೆರೆದು ಇಂದಿಗೂ ಲಕ್ಷಾಂತರ ಜನರ ಆರಾಧ್ಯಮೂರ್ತಿಯಾಗಿ ಉಳಿದಿದ್ದಾನೆ. ಇಂಥ ಮಹಾವೀರನ ಜೀವನದ ಬಗೆಗೆ ಕಾದಂಬರಿ ಬರೆಯುವುದು ನನಗೊಂದು ಅಭಿಮಾನದ ವಿಷಯ. ಇಂದಿನ ಯುವಜನಾಂಗವು ರಾಯಣ್ಣನ ಜೀವನಕಥೆಯಿಂದ ಸಾಕಷ್ಟು ಸ್ಫೂರ್ತಿ ಪಡೆಯಬಹುದಾಗಿದೆ.

ಬಸವರಾಜ ಕಟ್ಟೀಮನಿ

"ಅವಗೇನು ಹೊತ್ತಿಲ್ಲ, ಗೊತ್ತಿಲ್ಲ. ಅಪರಾತ್ರಿಯೊಳಗೂ ಗೆಳೆಯನ ನೆನಪಾಗಿ ಓಡಿಬಂದರೂ ಬಂದನೇ!" ಕೆನ್ನೆಗಳಲ್ಲಿಯೇ ನಗುತ್ತ ಅವ್ವ ಎಂದಳು.

ಚೆನ್ನಬಸೂ ಎಂದರೆ ಬಿಚ್ಚುಗತ್ತಿ ಚೆನ್ನಬಸಪ್ಪ. ನಮ್ಮೂರು ಸಂಗೊಳ್ಳಿಯ ಸಮೀಪದಲ್ಲಿಯೆ ಇರುವ ಅಮಟೂರಿನ ಬಂಟ ಆತ. ನಾವಿಬ್ಬರೂ ಓರಗೆಯವರು, ಬಾಲ್ಯದಿಂದಲೂ ಆಡಿ ಕೂಡಿ ಬೆಳೆದವರು. ಒಂದೇ ಗರಡಿಯಲ್ಲಿ ತಾಲೀಮು ಮಾಡಿದವರು. ಕಿತ್ತೂರ ಚೆನ್ನಮ್ಮ ರಾಣಿಯವರ ಅಂಗರಕ್ಷಕ ಪಡೆಯಲ್ಲಿ ಇಬ್ಬರೂ ಕೂಡಿಕೊಂಡೇ ಸೇವೆ ಸಲ್ಲಿಸಿದವರು. ಕುದುರೆಯನ್ನೇರಿ ರಾಣಿ ಹೊರಟ ರೆಂದರೆ ಅವರ ಬಲಗಡೆಗೆ ನಾನು, ಎಡಗಡೆಗೆ ಚೆನ್ನಬಸಪ್ಪ. ಕತ್ತಿ ತಿರುಗಿಸುವ ವಿದ್ಯೆಯಲ್ಲಿ ಅವನನ್ನು ಮೀರಿಸುವ ವೀರನಿನ್ನೊಬ್ಬನಿಲ್ಲ. ನಮ್ಮ ಕಿತ್ತೂರು ನಾಡಿ ನಲ್ಲಿ. ಅವನ ಕತ್ತಿಗೆ ಒರೆಯ ಅವಶ್ಯಕತೆಯೂ ಇಲ್ಲ. ಬಿಚ್ಚುಗತ್ತಿಯನ್ನು ಆತ ಯಾವಾಗಲೂ ಸೊಂಟಕ್ಕೆ ಬಿಗಿದುಕೊಂಡಿರುವುದರಿಂದ ಅವನ ಮನೆಯ ಹೆಸರೂ ಮರೆಯಾಗಿ ಬಿಚ್ಚುಗತ್ತಿಯ ಚೆನ್ನಬಸಪ್ಪ ಎಂಬ ಹೆಸರೇ ಅವನಿಗೆ ರೂಢಿಯಾಗಿದೆ. ನನ್ನ ಬಗೆಗೆ ಬಹಳ ಬಹಳ ಪ್ರೀತಿ ಚೆನ್ನಬಸೂಗೆ. ನನಗಾಗಿ ಪ್ರಾಣ ಅರ್ಪಿಸಲೂ ಹಿಂದು ಮುಂದು ನೋಡುವವನಲ್ಲ ಆತ. ಅವನ ಬಗೆಗೆ ನನಗೂ ಅಂಥದೇ ಪ್ರೇಮ. ನಮ್ಮ ಈ ಗೆಳೆತನವನ್ನು ಕಂಡವರೆಲ್ಲ ನಮ್ಮನ್ನು ರಾಮ ಲಕ್ಷ್ಮಣರೆಂದು ಕರೆಯುತ್ತಾರೆ. ನಮ್ಮ ಸ್ನೇಹ ಹಾಗೆ ಇರುವುದೂ ನಿಜವೇ.

ಅವ್ವ ಹೇಳಿದ ಮಾತು ಸುಳ್ಳಲ್ಲ. ನನ್ನ ನೆನಪಾದಾಗಲೆಲ್ಲ ಹೊತ್ತು ಗಿತ್ತನ್ನು ಗಮನಿಸದೆ ಸಂಗೊಳ್ಳಿಗೆ ಧಾವಿಸಿ ಬರುವುದು ಚೆನ್ನಬಸಪ್ಪನ ಪದ್ಧತಿಯೇ ಆಗಿತ್ತು.

ಪ್ರೀತಿಯ ಗೆಳೆಯನನ್ನು ಬರಮಾಡಿಕೊಳ್ಳುವ ತವಕದಿಂದಲೇ ಹೋಗಿ, ಬಾಗಿಲು ತೆರೆದು ನೋಡಿದರೆ ನಮ್ಮ ಮನೆಯೆದುರಿನ ಬೇವಿನ ಗಿಡದ ಬುಡದಲ್ಲಿ ಗೊಂಗಡಿಯಲ್ಲಿ ಶರೀರ ಮರೆಸಿಕೊಂಡು ನಿಂತಿದ್ದ ಆಕೃತಿಯೊಂದು ಕಾಣಿಸಿತು. ಬಂದಿದ್ದವನು ಚೆನ್ನಬಸಪ್ಪನಂತೂ ಆಗಿರಲಿಲ್ಲ. ಭಯಂಕರವಾಗಿ ಬೊಗಳುತ್ತ ಲಿದ್ದ ಹುಲಿಯನ್ನು ಸಮಾಧಾನಗೊಳಿಸುತ್ತ ನಾನು ಕೇಳಿದೆ.

"ಯಾರಪಾ ಅವರು? ಯಾರ ಹತ್ತರ ಬಂದೀರಿ ?"

ಆಕಾಶದಲಿ ಅಷ್ಟಮಿಯ ಚಂದ್ರ ಬೆಳಗುತ್ತಿದ್ದ. ಆದರೂ ಆ ಮಂದ

ಪ್ರಕಾಶದಲ್ಲಿ ಆಗಂತುಕನ ಮುಖ ಸ್ಪಷ್ಟವಾಗಿ ಕಾಣಿಸುವಂತಿರಲಿಲ್ಲ.

ಆತ ಅತ್ತಿತ್ತ ಹೊರಳಿ ನೋಡುತ್ತ, ಓಣಿಯಲ್ಲಿ ಜೇರಾರ ಸುಳಿವೂ ಇಲ್ಲದಿದ್ದುದನ್ನು ಮನವರಿಕೆ ಮಾಡಿಕೊಳ್ಳುತ್ತ ಹತ್ತಿರ ಬಂದು, ಗೊಂಗಡಿಯ ಮುಸುಕು ತೆಗೆದು ಮಾತನಾಡಿದ :

"ಬಿದನೂರಿನ ಗಂಗಾಧರನ ನೆನಪಿರಬೇಕಲ್ಲ ರಾಯಣ್ಣಾ ?"

ಬಿದನೂರಿನ ಗಂಗಾಧರ ! ಸರದಾರ್ ಗಂಗಾಧರ ! ಚೆನ್ನಮ್ಮರಾಣಿಯವರ ಕುದುರೆ ಸವಾರರ ಮೇಲಾಧಿಕಾರಿಯಾಗಿದ್ದುಕೊಂಡು ಕೆಂಪು ಮೋರೆಯವರಿಗೆ ಮಣ್ಣು ತಿನ್ನಿಸಿದ ಗಂಡುಗಲಿ ಗಂಗಾಧರ ! ಕಿತ್ತೂರಿನಲ್ಲಿದ್ದಷ್ಟು ಕಾಲವೂ ನಮ್ಮಿಬ್ಬರಿಗೂ ಬಹಳ ವಿಶ್ವಾಸ. ನನ್ನ ಕತ್ತಿವರಸೆಯೆಂದರೆ ಗಂಗಾಧರನಿಗೂ ಆತನ ಕುದುರೆ ಸವಾರಿಯೆಂದರೆ ನನಗೂ ತುಂಬ ಮೆಚ್ಚುಗೆ. ಮನೆ ಮುರುಕರು ಮಾಡಿದ ಪಿತೂರಿಯಿಂದ ಕಿತ್ತೂರಿನ ಲಢಾಯಿಯಲ್ಲಿ ಕುಂಪಣಿಯವರ ಕೈ ಮೇಲಾಗಿ ನಾವೆಲ್ಲ ಅತ್ತಿತ್ತ ಚದುರಿದಾಗ ಗಂಗಾಧರನೂ ಎತ್ತಲೋ ಮಾಯವಾಗಿದ್ದ. ಐದು ವರ್ಷದ ಮೇಲೆಯೇ ಆಗಿರಬೇಕು ಆ ಮಾತಿಗೆ. ಈಗ, ಇಂಥ ರಾತ್ರಿಯಲ್ಲಿ ಆಕಾಶದಿಂದ ಇಳಿದು ಬರುವಂತೆ ಆಕಸ್ಮಾತ್ತಾಗಿ ಬಂದಿದಾನೆ ಗಂಗಾಧರ ! ಐದು ವರ್ಷಗಳ ಅವಧಿಯಲ್ಲಿ ಆತನ ರೂಪಿನಲ್ಲಿ ಅಂಥ ಬದಲಾವಣೆಯೇನೂ ಆದಂತೆ ಕಾಣುವುದಿಲ್ಲ. ಆರಡಿ ಎತ್ತರದ ಉಕ್ಕಿನಂಥ ಬಿರುಸಾದ ಮೈ, ಹುರಿಗೊಳಿಸಿ ತಿರುವಿದ ಮೀಸೆ, ತುಟಿಗಳ ಮೇಲೆ ಯಾವಾಗಲೂ ನಲಿಯುತ್ತಿರುವ ಮುಗುಳುನಗೆ....

ನಾನು ಥಟ್ಟನೆ ಮುಂದೆ ಹೋಗಿ ಆತನನ್ನು ಬಿಗಿಯಾಗಿ ಅಪ್ಪಿಕೊಂಡೆ.

"ಬರ್ರಿ ಬರ್ರಿ ಸರದಾರ್ ಸಾಹೇಬರೆ, ಒಳಗೆ ಬರ್ರಿ."

ಬೊಗಳುವುದನ್ನು ನಿಲ್ಲಿಸಿ, ನಮ್ಮಿಬ್ಬರನ್ನೂ ಕುತೂಹಲದಿಂದ ದೃಷ್ಟಿಸುತ್ತಲಿದ್ದಿತು ಹುಲಿ.

ಗಂಗಾಧರ ನಗುನಗುತ್ತ ಮಾತನಾಡಿದ :

"ನಾಯಿಯೂ ನಿನಗೆ ತಕ್ಕ ಹಾಗೇ ಇದೆಯಪ್ಪಾ ರಾಯಣ್ಣಾ. ನಾನೂ ನೂರಾರು ನಾಯಿಗಳನ್ನು ನೋಡಿದ್ದೀನಿ, ಆದರೆ ಇಂಥ ಪ್ರಚಂಡ ನಾಯಿಯನ್ನ ಮಾತ್ರ, ಎಲ್ಲೂ ನೋಡಿರಲಿಲ್ಲ. ನಾಲ್ಕು ಜನ ಕಾವಲುಗಾರರು

ಇರೋದೂ ಒಂದೇ ! ಇದೊಂದೇ ನಾಯಿ ಇರೋದೂ ಒಂದೇ. ಬಾಗಿಲಿನ ಸಮೀಪಕ್ಕೆ ಬರಗೊಟ್ಟರೆ ಹೇಳು !"

ಅಕ್ಕರೆಯಿಂದ ಹುಲಿಯ ತಲೆ ನೇವರಿಸುತ್ತ ನಾನೆಂದೆ.

"ನೀವನ್ನುವುದೂ ಖರೆ ಸರದಾರ ಸಾಹೇಬ್ ! ಅಂಥಾ ಬಂಟನೇ ಇದಾನೆ ನಮ್ಮ ಹುಲಿಯಣ್ಣ ! ಬರ್ರಿ, ಬರ್ರಿ, ಒಳಗೆ ಬರ್ರಿ."

ಅಪರಿಚಿತ ಸ್ವರವನ್ನಾಲಿಸಿ ಅವ್ವನೂ ಎದ್ದು ಬಾಗಿಲಿಗೆ ಬಂದಿದ್ದಳು.

"ಹಳೆಯ ಗೆಳೆಯರೇನಪ್ಪಾ ರಾಯಣ್ಣಾ ?"

ಸ್ವಲ್ಪದರಲ್ಲಿಯೇ ಗಂಗಾಧರನ ಪರಿಚಯ ಮಾಡಿಕೊಟ್ಟು, ಮತ್ತೆ ಬಾಗಿಲು ಮುಚ್ಚಿ ಅಗುಳಿ ಹಾಕಿ ಆತನನ್ನು ನನ್ನ ಕೊಠಡಿಗೆ ಕರೆದುಕೊಂಡು ಬಂದೆ. ಅವ್ವ ಅವಸರದಿಂದ ಒಳಗೆ ಹೋಗಿ ನೀರಿನ ತಂಬಿಗೆ ತೆಗೆದುಕೊಂಡು ಬಂದಳು. "ಏಳಪಾ. ಊಟಾ ಮಾಡೇಳ."

"ಇಂಥಾ ಅಡ್ಡ ಹೊತ್ತಿನಲ್ಲಿ ಏನು ಊಟ ಬಿಡು ತಾಯಿ !" ಎಂದ ಗಂಗಾಧರ.

"ಅಯ್ ನನ್ನ ಮಗನs ! ಯಾವಾಗ ಉಂಡೀಯೋ ಏನೋ, ಎಷ್ಟು ದೂರದಿಂದ ಬಂದೀಯೋ ಏನೋ ! ಏಳಪ್ಪಾ, ಮಾರಿ ತೊಳಕೊಂಡು ಬಾ. ಅಷ್ಟರಾಗ ಊಟದ ತಯಾರೀ ಮಾಡಿರ್ತೀನಿ." ಎಂದಳು ಅವ್ವ. ಒಂದು ನಿಮಿಷ ಬಿಟ್ಟು ಆಕೆ ಮತ್ತೆ ಕೇಳಿದಳು : "ನಮ್ಮಲ್ಲಿ ಊಟ ನಡೀತೈತ್ಯೋ ಇಲ್ಲೋ ಮತ್ತ ?"

"ಸರದಾರ್ ಸಾಹೇಬರು ಅಂಥಾ ಮಡೀಮೈಲಿಗೆ ಮಾಡುವವರಲ್ಲ ಅವ್ವಾ. ಕಿತ್ತೂರಿನಾಗಿರುವತನಕ ಇವರೂ ನಾನೂ ಒಂದೇ ಪಂಕ್ತಿಯೊಳಗೆ ಊಟ ಮಾಡ್ತಿದ್ದಿವಿ" ಎಂದು ನಾನು ಹೇಳಿದೆ.

ಕೈಕಾಲು ಮುಖ ತೊಳೆದುಕೊಂಡು ಸ್ವಲ್ಪ ನೀರು ಕುಡಿಯುತ್ತಲೂ ಮೊದಲೇ ಪೂರ್ಣ ಆರೋಗ್ಯದಿಂದ ಅರಳಿಕೊಂಡಿದ್ದ ಗಂಗಾಧರನ ಮುಖ ಮತ್ತಷ್ಟು ಕಳೆಗೊಂಡಿತು.

"ಈಗೇನು ಊಟ ಬೇಡಪ್ಪಾ ರಾಯಣ್ಣಾ. ತಾಯಿಯವರಿಗೆ ಹೇಳಿ ಬಿಡು. ಒಂದಿಷ್ಟು ಹಾಲು ಕೊಟ್ಟರೆ ಸಾಕು. ನನಗೆ ಹಸಿವೆಯೂ ಇಲ್ಲ," ಎಂದ ಗಂಗಾಧರ.

"ಹಸಿವಿಲ್ಲಂದರ ಯಾರು ನಂಬುತಾರ ಸರದಾರ್ ಸಾಹೇಬ್ ? ನೀವು ಬಂದದ್ದಾದರೂ ಎಲ್ಲಿಂದ, ಹೇಳಿರಲ್ಲ ?"

"ನಾನೊಂದು ಗುಪ್ತ ಕೆಲಸ ಇಟ್ಟುಕೊಂಡು ಬಂದೀನಿ ರಾಯಣ್ಣಾ." ಗಂಗಾಧರ ಮೆಲುದನಿಯಲ್ಲಿ ಮಾತನಾಡಿದ: "ಅಕ್ಕ ಪಕ್ಕದಲ್ಲಿ ಯಾರ ಕಿವಿಗೂ ಬೀಳದಂತಿದ್ದರೆ ಉತ್ತಮ. ಅಷ್ಟೇ ಅಲ್ಲ, ನಾನಿಲ್ಲಿಗೆ ಬಂದದ್ದೂ ಸಹ ಯಾರಿಗೂ ಗೊತ್ತಾಗಬಾರದು. ಅದಕ್ಕಂತಲೇ ನಾನು ಇಂಥಾ ಸರಿ ರಾತ್ರಿಯಲ್ಲಿ ಬಂದದ್ದು. ನಾಯಿ ಬೊಗಳಿದಾಗ ಓಣಿಯಲ್ಲಿ ಯಾರಾದರೂ ಬಂದು ನನ್ನ ನೋಡಿರಲಿಕ್ಕಿಲ್ಲವಷ್ಟೆ ?"

"ನೋಡಿದರೂ ಚಿಂತಿಲ್ಲ ಬಿಡಿರಿ. ನಮ್ಮ ಗೆಳೆಯ ಚೆನ್ನಬಸೂ ಹೀಂಗೆ ರಾತ್ರಿ ಅಪರಾತ್ರ್ಯಾಗ ಮ್ಯಾಲಿಂದ ಮ್ಯಾಲ ಬರ್ತಿರ್ತಾನ ಅನ್ನೋದು ಓಣಿಯವರಿಗೆಲ್ಲಾ ಗೊತ್ತೈತಿ. ಈಗೂ ಯಾರ್ಯಾರ ನೋಡಿದ್ದರೆ ಅವನೇ ಬಂದಿರಬೇಕಂತ ತಿಳುಕೊಂತಾರ."

"ಚೆನ್ನಬಸೂ ಅಂದರೆ ಬಿಚ್ಚುಗತ್ತಿಯ ಬಹದ್ದೂರ ಅಲ್ವೇ ?"

"ಹೌದೌದು. ಅವನೇ."

"ಸಂತೋಷ. ಬಹಳ ಸಂತೋಷ. ನಾವು ಒಂದೇ ವರ ಕೇಳಿದರೆ ದೇವರು ಎರಡು ವರ ಕೊಟ್ಟಂತಾಯ್ತು" ಎಂದು ನಗುತ್ತ ನುಡಿದ ಗಂಗಾಧರ. ಒಡಪಿನಂಥ ಆ ಮಾತು ಅರ್ಥವಾಗದೆ ನಾನು ಕೇಳಿದೆ.

"ಏನೋ ಒಗಟಿನಂತೆ ಆಡ್ತೀರಲ್ರೀ ಸರದಾರ್ ಸಾಹೇಬರೇ?"

"ಶ್ಯೂ ಶ್ಯೂ ! ಮೊದಲು ಈ ಸರದಾರ್ ಗಿರದಾರ್ ಅನ್ನೋ ಭಾಷೆ ಬಿಟ್ಟುಬಿಡು ರಾಯಣ್ಣಾ. ಗೋಡೆಗೂ ಕಿವಿ ಇರ್ತಾವೆ. ಪಕ್ಕದ ಮನೆಯವರಿಗೆ ಆಕಸ್ಮಾತ್ತಾಗಿ ಕೇಳಿಸಿದರೆ ಇದೆಲ್ಲಿಯ ಸರದಾರ ಬಂದ? ಏನು ಮಸಲತ್ತು ನಡೆದಿದೆಯೋ? ಅಂತ ಸಂಶಯ ಬರೋದು ಸ್ವಾಭಾವಿಕ. ಅದೂ ಅಲ್ಲದೆ, ನಾನೀಗ ಸರದಾರನೂ ಅಲ್ಲ, ನೀನು ಸಿಪಾಯಿಯೂ ಅಲ್ಲ. ಕಿತ್ತೂರು ನಮ್ಮ ಕೈಬಿಟ್ಟಾಗಲೇ ಹೋಯಿತು ಅದೆಲ್ಲಾ. ಈಗ ನಾವಿಬ್ಬರೂ ಸಮಾನಸ್ಕಂಧರಾದ ಗೆಳೆಯರು. ನನ್ನ ಬಹುವಚನದಲ್ಲಿ ಕರೆಯೋದೂ ಬೇಡ. ಗೊತ್ತಾಯಿತೆ?"

"ಆಗಲಿ ಗಂಗಾಧರಣ್ಣ !" ಎಂದು ನಾನು ಹೇಳುತ್ತಿದ್ದಂತೆ ಬಾಗಿಲಲ್ಲಿ ತಾಯಿಯ ಮುಖ ಕಾಣಿಸಿಕೊಂಡಿತು.

"ಏಳಪ್ಪಾ ತಮ್ಮಾ, ಊಟಾ ಮಾಡೇಳು."

ಮತ್ತೆ ಗಂಗಾಧರ ಸಂಕೋಚಪಟ್ಟುಕೊಳ್ಳಲಿಲ್ಲ. ಹೊಟ್ಟೆ ತುಂಬುವ ವರೆಗೂ ರೊಟ್ಟಿ ಅನ್ನ ಉಂಡು, ಬೆಲ್ಲ ಬೆರಸಿ ಕಾಸಿದ ಹಾಲು ಕುಡಿದು, ತೃಪ್ತಿ ಯಿಂದ ತೇಗುತ್ತ ಆತನೆಂದ :

"ಇಂಥಾ ಅಪರಾತ್ರಿಯಲ್ಲಿ ಇದೆಲ್ಲಾ ಎಲ್ಲಿಂದ ಬಂತು ತಾಯಿ? ನಿಮ್ಮ ಮನೆಯಲ್ಲೇನೋ ಜಾದೂ ಇದ್ದಂತೆ ಕಾಣುತ್ತಲ್ಲ?"

"ಎಲ್ಲಿಯ ಜಾದೂ ಬಿಡಪಾ. ಹರ್ಯಾಗೆದ್ದ ಕೂಡಲೇ ಹೊಲಾ ಹರಗ ಲಿಕ್ಕೆ ಹೋಗತಾರಲ್ಲ ಮಕ್ಕಳು? ಅವರ ನ್ಯಾಹರೇಕ್ಕಂತ ಹತ್ತಿಪ್ಪತ್ತು ರೊಟ್ಟಿ ಹೆಚ್ಚಿಗೆ ಮಾಡಿರತೀವಿ. ಮನ್ಯಾಗ ಹೈನಕ್ಕೂ ಕಮ್ಮಿಯಿಲ್ಲ. ಹತ್ತು ಆಡು ಅದಾವ, ಯಾವಾಗ ಬೇಕಾದರೂ ಹಿಂಡಿಕೋಬಹುದು. ಇನ್ನಷ್ಟು ಹಾಲು ತಗೋಳಪ್ಪಾ." ಎಂದು ಹೇಳಿ ಮತ್ತೊಂದು ಬಟ್ಟಲು ತಂದು ಇಟ್ಟಳು ಅವ್ವ.

ಗಂಗಾಧರ ಬೇಡವೆನ್ನಲಿಲ್ಲ. ಆ ಬಟ್ಟಲನ್ನೂ ಬರಿದಾಗಿಸಿ ತಾಯಿಯನ್ನು ಕೃತಜ್ಞತೆಯಿಂದ ದೃಷ್ಟಿಸುತ್ತ ಆತನೆಂದ :

"ನಿಮ್ಮನ್ನ ನೋಡಿದರೆ ನನ್ನ ತಾಯಿಯ ನೆನಪು ಬರುತ್ತೆ ಅಮ್ಮ. ಆಕೆ ಯದೂ ನಿಮ್ಮಂತೆಯೇ ಬಲು ಉದಾರವಾದ ಮನಸ್ಸು. ಬಹಳ ದೊಡ್ಡ ಹಸ್ತ."

"ಎಲ್ಲಿದಾರಪಾ ನಿಮ್ಮ ಅವ್ವ ?"

"ಆಕೆ ತೀರಿಕೊಂಡು ಬಹಳ ವರ್ಷ ಆಯ್ತು ಅಮ್ಮ. ಈಗ ನಿಮ್ಮಂಥ ವರೇ ನಮ್ಮ ತಾಯಿ."

"ಅಪ್ಪ ?"

"ಅವರೂ ತೀರಿಕೊಂಡರು."

"ಹೆಂಡಿರು ಮಕ್ಕಳು ?"

ಗಂಗಾಧರ ಗಟ್ಟಿಯಾಗಿ ನಕ್ಕ. "ಪುಣ್ಯಕ್ಕೆ ಅದೆಲ್ಲಾ ಇನ್ನೂ ಗಂಟು ಬಿದ್ದಿಲ್ಲ ಅಮ್ಮ."

ನನಗೂ ಸಹ ಅದೊಂದು ಅಚ್ಚರಿಯ ವಿಷಯವಾಗಿಯೇ ಕಾಣಿಸಿತು. "ಇನ್ನೂ ಮದುವೆಯಾಗಿಲ್ಲೇನು ಗಂಗಾಧರಣ್ಣ?" ಎಂದು ವಿಚಾರಿಸಿದೆ.

"ಪುರಸತ್ತು ಸಿಕ್ಕರಲ್ವೇನು ಅಂಥಾದ್ದಕ್ಕೆಲ್ಲ ?" ಎಂದು ನಗುತ್ತಲೇ ನುಡಿದು ಮಣೆಯಿಂದೆದ್ದ ಗಂಗಾಧರ. ಅತ್ತಿತ್ತ ದೃಷ್ಟಿ ಹೊರಳಿಸುತ್ತ ಆತ ಕೇಳಿದ :

"ನನ್ನಂತೆಯೇ ನೀನೂ ಬ್ರಹ್ಮಚಾರಿ ಆಗಿಯೇ ಇದೀಯಾ? ಅಥವಾ ?"

"ಇವನ್ಯಾಕೆ ಬ್ರಹ್ಮಚಾರಿಯಾದಾನಪಾ ಗಂಗಪ್ಪಣ್ಣಾ ? ಇವನಿನ್ನೂ ಸಣ್ಣವನಾಗಿದ್ದಾಗಲೇ ಮದುವೀ ಮಾಡಿದ್ದಿವಿ. ಲಥಾಯಿ ಮುಗದ ವ್ಯಾಲ ಸೊಸಿಯೂ ಮನೆಗೆ ಬಂಡಾಳ. ಈಗೇನೋ ಜಾತ್ರಿಗಂತ ತವರುಮನಿಗೆ ಹೋಗ್ಯಾಳ–ಬೆಳವಡೀಗೆ" ಎಂದಳು ಅವ್ವ.

"ಮಕ್ಕಳೂ ಆಗಿರಬೇಕಲ್ಲ ಅಮ್ಮ ?"

"ಇಲ್ಲಪಾ. ದೇವರು ಇನ್ನೂ ಮನಸು ಮಾಡಿಲ್ಲ."

"ನೀ ಮಲಗಿಕೊಂಡು ಬಿಡವ್ವಾ" ಎಂದು ತಾಯಿಗೆ ಹೇಳಿ ಮತ್ತೆ ಕೊಠಡಿಗೆ ಬಂದೆವು. ಹೊರಸಿನ ಮೇಲಿನ ನನ್ನ ಹಾಸಿಗೆಯನ್ನೇ ಗಂಗಾಧರನಿಗೆ ಅಣಿಗೊಳಿಸಿ ಕೊಟ್ಟು, ನಾನು ನನಗಾಗಿ ನೆಲದ ಮೇಲೆ ಗೊಂಗಡಿ ಪಸರಿಸುತ್ತಿದ್ದಂತೆ ಆತನೆಂದ :

"ಈಗೇನು ಮಲಗುವಂತಿಲ್ಲ ಏನಿಲ್ಲ. ಅದನ್ಯಾಕೆ ಹಾಸೋದು ಬಿಡು ರಾಯಣ್ಣಾ."

"ಬಹಳ ದೂರದಿಂದ ನಡೆದುಬಂದು ದಣಿದಿರಬೇಕಲ್ಲ ? ಒಂದೆರಡು ತಾಸು ನಿದ್ದೀ ಮಾಡಿದರೆ ಆರಾಮಾದೀತು !" ಎಂದೆ ನಾನು.

"ಉಹುಂ. ಅದಕ್ಕೆಲ್ಲಾ ಸಮಯ ಇಲ್ಲ. ಬೆಳಕು ಹರಿಯೋದರೊಳಗಾಗಿ ನಾನು ಇಲ್ಲಿಂದ ಹೊರಡಬೇಕು–ನೀನೂ ಕೂಡ."

"ನಾನೂ?"

"ಹೌದು. ನೀನೂ ಹೊರಡಬೇಕು. ನಿನ್ನ ಕರಕೊಂಡು ಹೋಗೋದಕ್ಕಾಗಿಯೇ ಇಷ್ಟು ದೂರದಿಂದ ಬಂದೀನಿ," ಎಂದು ಗಂಗಾಧರ ಪಿಸುದನಿಯಲ್ಲಿ ಹೇಳಿದ; "ಸರದಾರ ವೀರಪ್ಪನವರು ಹೇಳಿ ಕಳಿಸಿದಾರೆ ರಾಯಣ್ಣಾ."

ಆ ಹೆಸರು ಆಲಿಸುತ್ತಲೂ ಮೈಯಲ್ಲೆಲ್ಲ ಮಿಂಚಿನ ಸಂಚಾರವಾದಂತೆ ಆಯಿತು.

"ಯಾರು ? ಸರದಾರ್ ಅವರಾದಿ ವೀರಪ್ಪನವರೇ ?"

"ಹೌದೌದು. ಅವರೇ."

"ಎಲ್ಲಿದ್ದಾರೆ ಸರದಾರ್ ಸಾಹೇಬರು ?"

"ಎಲ್ಲೋ ಇದಾರಂತ ಇಟ್ಕೊ. ಅದನ್ನ ತಿಳಿಸಲು ನನಗೆ ಅಪ್ಪಣೆಯಿಲ್ಲ. ಒಂದು ಗುಪ್ತ ಕೆಲಸಕ್ಕಾಗಿ, ಜರೂರು ಕೆಲಸಕ್ಕಾಗಿ ನಿನ್ನ ಕರಕೊಂಡು ಬರಬೇಕೂಂತ ಹೇಳಿ ನನ್ನ ಕಳಿಸಿದಾರೆ. ನನ್ನ ಮೇಲೆ ಪೂರಾ ನಂಬುಗೆಯಿದ್ದರೆ ಮಾತ್ರ ನೀನು ಬರಬಹುದು."

"ನಿನ್ನ ಮ್ಯಾಲ ನಂಬಿಗೆಯಿಲ್ಲಂದರೆ ಏನು? ನೀನು ನನ್ನ ಹಿರಿಯಣ್ಣ ಇದ್ಧಂಗೆ."

"ಕಾಲಮಾನ ಒಳ್ಳೆಯದಿಲ್ಲ ರಾಯಣ್ಣಾ. ಸುತ್ತಲೂ ವೈರಿಗಳು ಹೊಂಚು ಹಾಕಿ ಕುಳಿತಿದಾರೆ. ಹಣದಾಸೆಗಾಗಿ, ವತನದ ಭೂಮಿಯ ಆಸೆಗಾಗಿ ಅಣ್ಣ ತಮ್ಮಂದಿರನ್ನೇ ಹಿಡಿದುಕೊಡಲು ಮುಂದಾಗುವವರಿಗೂ ಕೊರತೆಯಿಲ್ಲ. ಎಂತಲೇ ಯಾರನ್ನೇ ಆದರೂ ಒಮ್ಮೆಲೇ ನಂಬುವಂತಿಲ್ಲ."

"ಅದೇನೋ ಖರೆ. ನಾನೂ ಹಂಗ ಆವರಿವರನ್ನ ನಂಬೂದಿಲ್ಲ. ಆದರೆ, ಕಿತ್ತೂರ ನಾಡಿನ ವಿಶ್ವಾಸದ ಸರದಾರರಾದ ನಿಮ್ಮ ಮ್ಯಾಲ ಮಾತ್ರ ನನಗೆ ಒಂದೀಟೂ ಸಂಶಯ ಬರುವಂತಿಲ್ಲ. ಸರದಾರ್ ವೀರಪ್ಪನವರು ಹೆಂಗದಾರ?"

"ಚೆನ್ನಾಗಿದ್ದಾರೆ. ಇಷ್ಟು ವರ್ಷ ಗೋವಾದ ಕಡೆ ಇದ್ದೆವು. ಇತ್ತ ಬಂದು ಒಂದು ತಿಂಗಳಾಗಿರಬಹುದು. ಅಂದಿನಿಂದಲೂ ತಯಾರಿ ನಡೆದೇ ಇದೆ."

"ರಾಣೀ ಸಾಹೇಬರ ಭೆಟ್ಟಿಗೆ ಹೋಗಿದ್ದಿರಾ?"

"ಇಲ್ಲ. ಇನ್ನೂ ಹೋಗಿಲ್ಲ. ಹೊಂಗಲದ ಕೋಟೆಯಲ್ಲಿ ಬಲವಾದ ಕಾವಲು ಇದೆಯಂತಲ್ಲ? ಸರದಾರ್ ವೀರಪ್ಪನವರಂತೂ ಸುಪ್ರಸಿದ್ಧರಾದ ವ್ಯಕ್ತಿ. ಸಾವಿರಾರು ಜನರಿಗೆ ಅವರ ಪರಿಚಯ ಇದೆ. ಅವರು ಹಾಗೆಲ್ಲಾ ಹೋಗುವಂತಿಲ್ಲ. ಕುಂಪಣಿ ಸರಕಾರದವರೂ ಅವರನ್ನ ಮರೆತಿಲ್ಲ. ಅದಕ್ಕೇ ಬಹಳ ಹುಷಾರಿಯಿಂದ ವರ್ತಿಸಬೇಕಾಗಿದೆ."

"ಅದೂ ಖರೇನೇ. ಸೇನಾಪತಿ ಗುರುಸಿದ್ದಪ್ಪನವರನ್ನು ಬಿಟ್ಟರ ಸರದಾರ್ ವೀರಪ್ಪನವರ ಮ್ಯಾಲೇ ಕುಂಪಣಿಯವರ ಸಿಟ್ಟು ಬಹಳ" ಎಂದೆ ನಾನು.

"ಸೇನಾಪತಿ ಈಗ ಎಲ್ಲಿರುವರೋ ಯಾರು ಬಲ್ಲರು ? ನಿನಗೇನಾದರೂ ಗೊತ್ತಿದೆಯೇ ರಾಯಣ್ಣಾ ?"

"ನಮ್ಮನ್ನೆಲ್ಲಾ ಹಿಡಿದು ಧಾರವಾಡದ ಕಿಲ್ಲೇದಲ್ಲಿಟ್ಟಾಗ ಸೇನಾಪತಿಯವರನ್ನ ಬೆಳಗಾವಿಯೊಳಗ ಇಟ್ಟಿದ್ದರಂತ ಕೇಳಿದ್ದಿವಿ. ಆಮ್ಯಾಲ ಆವರಿಗೆ ಫಾಸೀ ಶಿಕ್ಷೆ ಕೊಟ್ಟರಂತಲೂ ಸುದ್ದಿಯಿತ್ತು. ಅದೇನು ಖರೇನೋ ಸುಳ್ಳೋ ಗೊತ್ತಾಗಲಿಲ್ಲ. ಕಿತ್ತೂರ ನಾಡಿನ ಸಮೀಪದಾಗ ಅವರನ್ನಿಡೂದು ಚಲೋ ಅಲ್ಲಂತ ದೂರ ಪುಣೇದ ಕಡೆ ಒಯ್ದು ಯಾವದೋ ಕಿಲ್ಲೇದಾಗ ಇಟ್ಟಾರಂತಲೂ ಸುದ್ದಿಯಿತ್ತು. ಆಮ್ಯಾಲ ಸೇನಾಪತಿಯವರು ಅಲ್ಲಿಂದಲೂ ತಪ್ಪಿಸಿಕೊಂಡು ಕಾಶಿಯ ಕಡೆ ಹೊರಟು ಹೋಗ್ಯಾರಂತಲೂ ಮಂದಿ ಮಾತಾಡತಿದ್ರು. ಖರೇ ಸುಳ್ಳು ದೇವರಿಗೇ ಗೊತ್ತು !" ಎಂದು ಹೇಳುತ್ತಿದ್ದಂತೆ ನನ್ನ ಬಾಯಿಯಿಂದ ನಿಟ್ಟುಸಿರೊಂದು ಹೊರಹೊರಟಿತು. ಎಂಥ ವೀರ ಧೀರ ಸೇನಾನಾಯಕನಿಗೆ ಎಂಥ ಅವಸ್ಥೆ ಬಂದಿತಲ್ಲ !

"ನೋಡೋಣ. ಸರದಾರ್ ವೀರಪ್ಪನವರು ಪ್ರಯತ್ನಪಟ್ಟು ಸೇನಾಪತಿಯವರ ನಿಜವಾದ ಸಮಾಚಾರ ತಿಳಿದುಕೊಂಡಾರು. ನಾವೀಗ ಹೊರಡೋಣವೇ ರಾಯಣ್ಣಾ ?"

ಸೊಂಟದ ಪಟ್ಟಿಗೆ ಕಠಾರಿ ಸಿಕ್ಕಿಸಿಕೊಂಡು, ತಲೆಗೆ ರುಮ್ಮಾಲು ಬಿಗಿದು, ಗೊಂಗಡಿ ಮುಸುಕು ಹಾಕಿಕೊಂಡು ನಾನು ತಯಾರಾದೆ. ತನ್ನ ಕಂಬಳಿಯನ್ನು ಮೈತುಂಬ ಹೊದೆದುಕೊಂಡು ಗಂಗಾಧರನೂ ಎದ್ದು ನಿಂತ.

"ಊರಿಗೆ ಹೋಗಿ ಬರ್ತೀನವ್ವ. ನಾಳೆ ಒಂದು ದಿನ ಸಿದ್ದಣ್ಣಾನೇ ನೇಗಿಲು ಹೊಡೀಲಿ. ಬಹಳ ಮಾಡಿ ನಾಳೆ ರಾತ್ರಿ ನಾ ಹೊರಳಿ ಬರಬಹುದು" ಎಂದು ತಾಯಿಗೆ ಹೇಳಿದಾಗ ಆಕೆ ಕತ್ತು ಅಲ್ಲಾಡಿಸಿ ಒಪ್ಪಿಗೆ ಸೂಚಿಸಿದಳು. ನನ್ನ ಪದ್ಧತಿಯಂತೆ ನಾನು ಆಕೆಯ ಪಾದಮುಟ್ಟಿ ನಮಸ್ಕರಿಸಿ ಬೀಳ್ಕೊಳ್ಳುತ್ತಿದ್ದಂತೆ ಗಂಗಾಧರನೂ ಬಾಗಿ ನನ್ನಂತೆಯೇ ಆಕೆಯ ಕಾಲು ಸ್ಪರ್ಶಿಸಿ ವಂದಿಸಿದ. ಇಬ್ಬರ ಶಿರಗಳ ಮೇಲೂ ಒಂದೊಂದು ಹಸ್ತವಿರಿಸಿ ಆಶೀರ್ವದಿಸಿದಳು ನನ್ನ ಹಡೆದವ್ವ.

# ೨ ಗಂಗಾಧರ

ಸಂಗೊಳ್ಳಿಯಿಂದ ಹೊರಟವರು ನಡುವೆ ಎಲ್ಲಿಯೂ ನಿಲ್ಲದೆ ಒತ್ತರದಿಂದ ನಡೆಯುತ್ತ ನಾವು ಕೊಳ್ಳದ ಮೇಲಿನ ಗುಡ್ಡಕ್ಕೆ ಬಂದಾಗ ಅದೇ ತಾನೆ ಬೆಳಗಾಗುತ್ತಲಿತ್ತು. ಆದರೆ ದಟ್ಟವಾದ ಅರಣ್ಯದ ಮಧ್ಯೆ ಅವಿತುಕೊಂಡಿದ್ದ ಆ ಕೊಳ್ಳದಲ್ಲಿ ಮಾತ್ರ ಇನ್ನೂ ಮಬ್ಬುಗತ್ತಲು ಪಸರಿಸಿತ್ತು.

"ಚಲೋ ಜಾಗ ನೋಡಿಕೊಂಡೇ ಬಿಡಾರ ಮಾಡೀರಲ್ಲ ?" ಎಂದ ರಾಯಣ್ಣ.

"ಈಗೊಂದು ತಿಂಗಳ ಹಿಂದೆ ಇಲ್ಲಿಂದ ಹತ್ತು ಹರದಾರಿ ದೂರ ಇರುವ ಮತ್ತೊಂದು ಗುಡ್ಡದಲ್ಲಿದ್ದೆವು. ಆದರೆ, ಅಲ್ಲಿ ಸುತ್ತಮುತ್ತ ಹಳ್ಳಿ ಇವೆ. ದನ ಕಾಯಲು ಜನ ಬರ್ತಿರ್‍ತಾರೆ. ಆದರಿಂದಾಗಿ ಗುಪ್ತ ಸ್ಥಳ ಕುಂಪಣಿಯವರಿಗೆ ತಿಳಿಯಬಹುದಂತ ಸಂಶಯ ಬಂದು ಅದನ್ನು ಬಿಟ್ಟು ಇಲ್ಲಿಗೆ ಬಂದೆವು."

"ಸರದಾರ್ ಸಾಹೇಬರು ಚಲೋ ಆಯಕಟ್ಟಿನ ಜಾಗ ಹುಡುಕಿದಾರ. ಅತ್ತಿತ್ತ ಹಳ್ಳಿಗಳೂ ಇಲ್ಲ. ಐದಾರು ಗುಡ್ಡ ಹತ್ತಿ ಇಳಿದು ಇಲ್ಲಿಗೆ ಬರಬೇಕಾಗ ತೈತಿ. ಅರಣ್ಯದಾಗ ಹುಲಿ ಚಿರ್ಚಿ ಇದಾವಂತ ಯಾರೂ ಇತ್ತ ಸುಳಿಯೂದಿಲ್ಲ. ನಿಮಗೂ ಭೆಟ್ಟಿಯಾಗಿರಬೇಕಲ್ಲ ಹುಲಿ ?"

"ನಮ್ಮಷ್ಟಕ್ಕೆ ನಾವಿದ್ದರೆ ಅವು ನಮ್ಮ ತಂಟೆಗೇ ಬರೋದಿಲ್ಲ. ಒಂದೆರಡು ಸಲ ನಮ್ಮ ದೇವಸ್ಥಾನದ ಹತ್ತಿರ ಇರುವ ಝುರಿಗೆ ನೀರು ಕುಡಿಯೋದಕ್ಕೆ ಬಂದಿದ್ದವು. ಮನುಷ್ಯರ ವಾಸನೆ ತಿಳಿದ ಮೇಲೆ ಅವು ಅತ್ತ ಸುಳಿದಿಲ್ಲ. ನೀರು ಕುಡಿಯುವ ಸ್ಥಳವನ್ನೂ ಬದಲಾಯಿಸಿಕೊಂಡಿರಬೇಕು."

"ಬಾಪೂ ಸಾಹೇಬ್ ದೊರೆಗಳಿದ್ದಾಗ ಅವರ ಸಂಗಡ ಒಂದೆರಡು ಸಲ ಬ್ಯಾಟೀ ಆಡೋದಕ್ಕ ನಾನೂ ಬಂದಿದ್ದಿನಿ ಈ ಗುಡ್ಡಕ್ಕ. ಇಲ್ಲೇ ಸಮೀಪದಾಗ ದೊಡ್ಡದೊಂದು ಹೆಣ್ಣು ಹುಲಿ ಹೊಡೆದಿದ್ದರು ದೊರೆಗಳು," ಎಂದ ರಾಯಣ್ಣ.

ಕೊಳ್ಳದ ಪೂರ್ವದಿಕ್ಕಿನ ನೆತ್ತಿಯ ಮೇಲೆ ನಿಂತು ನಾನು ಎರಡು ಬಾರಿ ಸಿಳ್ಳು ಹಾಕಿದೆ. ಒಡನೆಯೆ ಕಣಿವೆಗಳಲ್ಲೆಲ್ಲ ಆ ಸಿಳ್ಳಿನ ಪ್ರತಿಧ್ವನಿಯ ಅಲೆಗಳೆ

ದ್ದವು. ಒಂದು ನಿಮಿಷ ಬಿಟ್ಟು ನಾನು ಮತ್ತೊಂದು ಬಾರಿ ಸಿಳ್ಳು ಹಾಕಿದೆ. ಎರಡು ನಿಮಿಷಗಳ ತರುವಾಯ ಕೊಳ್ಳದ ತಳದಿಂದಲೂ ಆದೇ ರೀತಿಯಾಗಿ ಮೂರು ಬಾರಿ ಸಿಳ್ಳು ಕೇಳಬಂದಿತು.

"ಕೆಳಗಿಳಿಯಲು ಅಪ್ಪಣೆ ಸಿಕ್ಕಂತಾಯಿತು ರಾಯಣ್ಣ. ಇನ್ನೇನು ಚಿಂತೆ ಯಿಲ್ಲ" ಎಂದು ಹೇಳಿ, ಕಾಲುದಾರಿಯಲ್ಲಿ ಅಡ್ಡ ಬರುವ ಗಿಡಗಂಟೆಗಳನ್ನು ಅತ್ತ ಸರಿಸುತ್ತ ನಾನು ಗುಡ್ಡ ಇಳಿಯತೊಡಗಿದೆ.

ರಹಸ್ಯ ಚಟುವಟಿಕೆಯ ಈ ಎಚ್ಚರದ ಕ್ರಮಗಳೆಲ್ಲ ರಾಯಣ್ಣನಿಗೆ ಅಪ ರಿಚಿತವಾಗಿರಲು ಸಾಕು. ಅವನ ಮುಖದ ಮೇಲೆ ಸೋಜಿಗದ ಭಾವನೆ ಲಾಸ್ಯ ವಾಡುತ್ತಿತ್ತು. ಆದರೆ ಆತ ಆ ವಿಚಾರವಾಗಿ ಪ್ರಶ್ನೆಯೇನನ್ನೂ ಕೇಳಲಿಲ್ಲ. ಮೂರು ಬಾರಿಯ ಸಿಳ್ಳಿನ ಸಂಕೇತವನ್ನು ಆತ ಆಗಲೇ ಅರ್ಥ ಮಾಡಿ ಕೊಂಡಂತಿತ್ತು.

ಮತ್ತೆ ಹದಿನೈದು ನಿಮಿಷಗಳಲ್ಲಿಯೆ ನಾವು ಕೊಳ್ಳದ ಕೆಳ ಭಾಗಕ್ಕೆ ಬಂದು ಮುಟ್ಟಿದೆವು. ಅಲ್ಲಿ ನೂರಿನ್ನೂರು ಅಡಿಗಳಷ್ಟು ಉದ್ದವೂ ಅಷ್ಟೇ ಅಗಲವೂ ಆಗಿದ್ದ ಪುಟ್ಟ ದಿಣ್ಣೆಯೊಂದರ ಮೇಲೆ ಪುರಾತನ ಕಾಲದ ದೇವಸ್ಥಾನವೊಂದು ತಲೆಯೆತ್ತಿ ನಿಂತಿತ್ತು. ಅದರ ಗೋಡೆಗಳೆಲ್ಲ ಶಿಥಿಲವಾಗಿ ದ್ದುವಾದರೂ ಒಳಗಿನ ಪಡಸಾಲೆಯೂ ಗರ್ಭಗುಡಿಯೂ ತಕ್ಕಮಟ್ಟಿಗೆ ಸುಸ್ಥಿತಿ ಯಲ್ಲಿದ್ದುದರಿಂದ ಹತ್ತಿಪ್ಪತ್ತು ಜನರು ಅಲ್ಲಿ ಆಶ್ರಯ ಪಡೆಯಲು ಅನುಕೂಲ ವಾಗಿತ್ತು. ಹಿಂಭಾಗದಲ್ಲಿ ಎರಡು ಬಿಲ್ವ ವೃಕ್ಷಗಳೂ, ದಾಸವಾಳ ಹೂವಿನ ಗಿಡಗಳೂ ಬೆಳೆದಿದ್ದವು. ದೇವಸ್ಥಾನ ನಿರ್ಮಾಣವಾದ ಕಾಲಕ್ಕೆ ಅಲ್ಲಿ ಯಾವ ದೇವತೆಯನ್ನು ಪ್ರತಿಷ್ಠಾಪಿಸಲಾಗಿದ್ದಿತೋ ತಿಳಿಯದು, ಮೂಲದೇವತೆಯ ವಿಗ್ರಹ ಮಾತ್ರ ಆಗ ಅಲ್ಲಿರಲಿಲ್ಲ. ಅದರ ಬದಲು ಅರ್ಧ ಅಡಿ ಎತ್ತರದ ಶಿಲೆ ಯೊಂದನ್ನು ನಿಲ್ಲಿಸಿ ಅದಕ್ಕೆ ಎಣ್ಣೆ ಬಳಿದು ಪೂಜಾ ವಿಗ್ರಹವಾಗಿ ಮಾಡ ಲಾಗಿತ್ತು. ನಸುಕಿನಲ್ಲೆದ್ದು ಝರಿಯಲ್ಲಿ ಮಿಂದು ಬಂದು ಆ ವಿಗ್ರಹದ ಹತ್ತಿರ ಪದ್ಮಾಸನ ಹಾಕಿ ಕುಳಿತು ಶಿವಪೂಜೆ ಮಾಡುವುದು ಸರದಾರ್ ವೀರಪ್ಪ ನವರ ನಿತ್ಯ ನೇಮವಾಗಿತ್ತು. ಅವರ ಹಾಗೆ ದಿನವೂ ತಪ್ಪದೆ ಪೂಜೆ ಮಾಡು ವುದು ನನ್ನಿಂದ ಆಗುತ್ತಿರಲಿಲ್ಲ. ಸೋಮವಾರಕ್ಕೊಮ್ಮೆ ದೇವರಿಗೆ ಹೂವು ಏರಿಸುತ್ತಿದ್ದೆನಷ್ಟೆ.

ಗೋವಾ ಸೀಮೆಯಿಂದ ಹಿಂತಿರುಗಿ ಬಂದಾಗ ನಮ್ಮೊಡನೆ ಇಪ್ಪತ್ತು ಜನರ ವರೆಗೂ ಪರಿವಾರವಿತ್ತು. ಈಚೆಗೆ ಅವರಲ್ಲಿ ಅನೇಕರು ತಮ್ಮ ತಮ್ಮ ಮನೆಗಳಿಗೆ ಹೊರಟು ಹೋಗಿದ್ದರು. ನನಗಂತೂ ನನ್ನದಾದ ಮನೆಯೇ ಇರಲಿಲ್ಲ. ನನ್ನಂತೆಯೇ ನಿಚ್ಚಣಿಕೆಯ ಕರವೀರನೂ ಒಬ್ಬೊಂಟಿಯಾಗಿದ್ದ. ಸರದಾರ್ ವೀರಪ್ಪನವರೂ ಸದ್ಯಕ್ಕೆ ತಮ್ಮ ಮನೆಗೆ ಹೋಗುವಂತಿರಲಿಲ್ಲ. ಎಂತಲೇ, ಕೊಳ್ಳದಲ್ಲಿನ ಆ ಗುಡಿಯಲ್ಲಿ ಉಳಿದಿದ್ದವರೆಂದರೆ ನಾವು ಮೂವರೇ. ಕೆಲಸದ ನಿಮಿತ್ತವಾಗಿ ನಾನು ಅತ್ತಿತ್ತ ಹೋದಾಗ ಕರವೀರ ಅಲ್ಲಿಯೇ ಇದ್ದು ಕೊಂಡು ಅಡುಗೆ ಮಾಡುತ್ತಿದ್ದುದಲ್ಲದೆ ಸರದಾರರ ಇತರ ಅವಶ್ಯಕತೆಗಳಿಗೂ ಗಮನವೀಯುತ್ತಿದ್ದ. ಎರಡು ಮೂರು ತಿಂಗಳಿಗೆ ಸಾಕಾಗುವಷ್ಟು ಆಹಾರ ಧಾನ್ಯಗಳನ್ನೂ ಮತ್ತಿತರ ವಸ್ತುಗಳನ್ನೂ ಮೊದಲೇ ಸಂಗ್ರಹಿಸಿಟ್ಟುಕೊಂಡಿದ್ದೆ ವಾದುದರಿಂದ ಅವುಗಳಿಗಾಗಿ ಮತ್ತೆ ಮತ್ತೆ ಪೇಟೆಗೆ ಅಲೆಯುವ ಅಗತ್ಯ ವಿರಲಿಲ್ಲ. ಹಾಲು-ಬೆಣ್ಣೆಗಳನ್ನುಳಿದು ಬೇರಾವುದರ ಕೊರತೆಯೂ ನಮಗಿರಲಿಲ್ಲ. ಆ ವನವಾಸದಲ್ಲಿ ಹಾಲು ಬೆಣ್ಣೆಗಳ ಅವಶ್ಯಕತೆಯೂ ಇರಲಿಲ್ಲ. ಸುತ್ತಲೂ ಅರಣ್ಯದ ಹಣ್ಣುಗಳು ಯಥೇಚ್ಛವಾಗಿ ಸಿಕ್ಕುತ್ತಿದ್ದವು. ಜೇನಿಗೂ ಕೊರತೆ ಯಿರಲಿಲ್ಲ.

ಗುಡಿಯ ಎಡಗಡೆಗಿದ್ದ ಗಿಡದ ಬುಡದಲ್ಲಿ ಅಡಿಗೆ ಮಾಡುತ್ತ ಕುಳಿತಿದ್ದ ಕರವೀರ ನಮ್ಮನ್ನು ನೋಡುತ್ತಲೂ ನಗುನಗುತ್ತ ಎದ್ದು ಬಂದ. ರಾಯಣ್ಣ ಒಡನೆಯೆ ಮುಂದಾಗಿ ಹೋಗಿ ಸೈನಿಕರ ಪದ್ಧತಿಯಂತೆ ಕರವೀರನನ್ನು ಅಪ್ಪಿ ಕೊಂಡ. ಅವರು ಕ್ಷೇಮ ಸಮಾಚಾರದ ಮಾತು ಆಡುತ್ತಿದ್ದಂತೆಯೇ ದೇವಾ ಲಯದ ಪಡಸಾಲೆಯಲ್ಲಿ ವೀರಪ್ಪನವರ ಆಕೃತಿ ಕಾಣಿಸಿಕೊಂಡಿತು. ಆದೇ ತಾನೆ ಪೂಜೆ ಮುಗಿಸಿ ಬಂದಿದ್ದ ವೀರಪ್ಪನವರು ಶುಭ್ರವಾದ ಧೋತರ ಉಟ್ಟು, ಮೈ ಮೇಲೆ ಬಿಳಿಯ ಉತ್ತರೀಯ ಹೊದೆದುಕೊಂಡಿದ್ದರು. ಅವರ ಕೊರಳಲ್ಲಿ ಗಂಧದ ಕರಡಿಗೆಯೂ, ಹಣೆಯ ಮೇಲೆ ವಿಭೂತಿಯ ಪಟ್ಟಿಗಳೂ ಶೋಭಿಸು ತ್ತಿದ್ದುವು.

"ಬಂದಿಯಾ ರಾಯನಾಯಕ !" ಸಂತೋಷ ಬೆರೆತ ಗಂಭೀರವಾಣಿ ಯಲ್ಲಿ ವೀರಪ್ಪನವರು ಆ ಮಾತು ಆಡುತ್ತಿದ್ದಂತೆಯೇ ರಾಯಣ್ಣ ವೀರಾಸನ ದಲ್ಲಿ ಕುಳಿತು ಅವರಿಗೆ ವಂದನೆ ಸಲ್ಲಿಸಿದ. ಪ್ರೀತಿಯಿಂದ ಅತನನ್ನು ಹಿಡಿದೆತ್ತಿ ಎದೆಗೊತ್ತಿಕೊಳ್ಳುತ್ತ ವೀರಪ್ಪನವರೆಂದರು :

"ಐದಾರು ತಾಸು ಒಂದೇ ಸವನೆ ನಡೆದು ಬಹಳ ದಣಿವಾಗಿರಬೇಕು. ಮೊದಲು ಜಳಕ ಮುಗಿಸಿಕೊಂಡು ಬಾ. ಅಷ್ಟರೊಳಗಾಗಿ ಗಂಜೀ ಮಾಡಿರ್ತಾನೆ ಕರವೀರ. ಅದನ್ನಷ್ಟು ಉಂಡರೆ ಆರಾಮ ಆಗತೈತಿ. ಆ ವ್ಯಾಲ ಕುಂತು ಮಾತಾಡೋಣ."

ಝರಿಯಲ್ಲಿ ಸ್ನಾನವಮಾಡುತ್ತಿದ್ದಂತೆ ರಾಯಣ್ಣ ವಿಷಾದಪೂರ್ಣ ಸ್ವರ ದಲ್ಲಿ ಹೇಳಿದ :

"ಎಷ್ಟು ಸೊರಗ್ಯಾರ ನಮ್ಮ ಸರದಾರ ಸಾಹೇಬರು ? ಐದು ವರ್ಷದ ಹಿಂದ ಒಂದು ಆನಿ ಇದ್ದಂಗಿದ್ದವರು ಈಗ ಅರ್ಧಕ್ಕರ್ಧ ಇಳಿದುಹೋಗ್ಯಾರ- ಆ ಗೋವಾ ಸೀಮೆಯೊಳಗ ನಮ್ಮ ಕಡೆಯ ಊಟ ಸಿಗೋದಿಲ್ಲೋ ಏನೋ?"

"ನಮ್ಮ ಕಡೇದು ಅಂದರೆ ?"

"ರೊಟ್ಟಿ, ಅಂಬಲಿ ?"

"ಎಲ್ಲಿಯ ರೊಟ್ಟಿ ? ಎಲ್ಲಿಯ ಅಂಬಲಿ ? ಅಕ್ಕಿಯ ಅನ್ನ ಸಿಕ್ಕರೆ ಬಹಳ ಆಯ್ತು. ಹಾಲು ಹೈನವೂ ಕಮ್ಮಿಯೇ. ಅಲ್ಲಿಯ ಜನರು ಹೆಚ್ಚಾಗಿ ತಿನ್ನೋದು ಎಂದರೆ ಮೀನ. ಯಾವ ಊರಿಗೆ ಹೋದರೂ ಅದೊಂದು ಮೀನ ಸುಡುವ ವಾಸನೆ. ಅದರೊಡನೆ ಹುಳಿಹುಳಿಯಾದ ಹೆಂಡ....ನಿನಗೇನೋ ನಡೆದೀತು ಅದೆಲ್ಲಾ. ಸರದಾರಿಗಾಗಲಿ ನನಗಾಗಲಿ ಹ್ಯಾಗೆ ನಡೀಬೇಕು ? ಪಾಪ, ಅವ ರಂತೂ ಜೋಳದ ರೊಟ್ಟಿ ತಿಂದು ಬೆಳೆದವರು. ಅಲ್ಲಿಯ ಸಪ್ಪೆ ಅನ್ನ ಉಂಡು ಉಂಡು ಹೀಗೆ ಇಳಿದು ಹೋದರು....!"

"ನೀ ಮಾತ್ರ ಆಗಿದ್ದಂತೇ ಇದೀಯಪ್ಪಾ ಗಂಗಾಧರಣ್ಣಾ !" ಎಂದ ರಾಯಣ್ಣ.

"ಏನೂ ಚಿಂತೆಯಿಲ್ಲದೆ ಉಂಡು ತಿಂದು ಇದ್ದರೆ ಗುಂಡುಕಲ್ಲಿನ ಹಾಗೇ ಇರಬಹುದಲ್ಲ ? ಸರದಾರ ಸಾಹೇಬರಿಗಾದರೋ ನೂರೆಂಟು ಚಿಂತೆ. ನನಗೇನು ಹೇಳು ? ಹೇಳಿ ಕೇಳಿ ಗುಂಡುಗೋವಿ. ಹಿಂದಿಲ್ಲ ಮುಂದಿಲ್ಲ. ಮನೆಯವರ ಯೋಚನೆಯಿಲ್ಲ, ಏನೂ ಇಲ್ಲ...."

"ಗೋವಾದ ಹೆಣ್ಣುಗಳು ಬಹಳ ಚಂದ ಅಂತಲ್ಲ ಗಂಗಾಧರಣ್ಣಾ ? ನಿನಗೆ ಯಾವಾಕಿಯೂ ಗಂಟು ಬೀಳಲಿಲ್ಲ ಅಂತೀಯಾ ?" ಎಂದು ಚೇಷ್ಟೆಯ ಸ್ವರ ದಲ್ಲಿ ಕೇಳಿದ ರಾಯಣ್ಣ.

"ಗಂಟುಬಿದ್ದರೂ ನಾನು ಹಾಗೆಲ್ಲ ಅವರ ಕೈಯಲ್ಲಿ ಸಿಗುವವನಲ್ಲ- ನಾಲ್ಕಾರು ಹೆಣ್ಣು ಭೆಟ್ಟಿಯಾದವು, ಹೋದವು, ಅಷ್ಟೆ. ಅದಕ್ಕೆ ಅಂಥಾ ಮಹತ್ವವನ್ನ ನಾನೆಂದೂ ಕೊಟ್ಟಿಲ್ಲ. ನಿನಗೂ ಗೊತ್ತೇ ಇರಬೇಕು...." ಎಂದು ನಾನೆಂದೆ. ಆ ಮಾತು ಆಡುತ್ತಿದ್ದಂತೆ ಕಿತ್ತೂರಿನ ಪಾರ್ವತಿಯ ನೆನಪು ಬಂದು ನನ್ನೆದೆಯಲ್ಲಿ ಪುಟ್ಟ ಬಿರುಗಾಳಿ ಬೀಸಿದಂತಾಯಿತು. ಶಿಲೇದಾರ್ ಗುರುಪಾದಪ್ಪನವರ ಮಗಳು ಪಾರ್ವತಿಯನ್ನು ನಾನು ಮೆಚ್ಚಿಕೊಂಡಿದ್ದ ವಿಷಯ ರಾಯಣ್ಣನಿಗೂ ಚೆನ್ನಾಗಿ ಗೊತ್ತಿದ್ದಿತು. ಕಿತ್ತೂರಿನ ಮೇಲಿನ ಸಂಕಟದ ನಿವಾರಣೆಯಾಗಿ ಪರಿಸ್ಥಿತಿ ಶಾಂತವಾಗುತ್ತಲೂ ನಮ್ಮಿರ್ವರ ವಿವಾಹ ನಡೆಯಬೇಕೆಂದು ನಿಶ್ಚಿತವಾಗಿತ್ತು. ಆದರೆ ದುರದೃಷ್ಟದಿಂದ ಕಿತ್ತೂರ ರಾಜ್ಯವೇ ಮುಳುಗಿ ಹೋಗಿ ನಾವೆಲ್ಲರೂ ಒಬ್ಬೊಬ್ಬರು ಒಂದೊಂದು ಕಡೆ ಚದುರಿ ಹೋಗಬೇಕಾಯಿತು. ಅಂದಿನಿಂದ ಪಾರ್ವತಿಯ ದರ್ಶನವಿರಲಿಲ್ಲ.

ನನ್ನ ಕಣ್ಣಿನಲ್ಲಿ ಮೂಡಿದ ತೇಲು ನೋಟವನ್ನು ಗಮನಿಸಿ ರಾಯಣ್ಣನಿಗೆ ಏನನ್ನಿಸಿತೋ ಏನೋ, ಕಿರುನಗೆ ಬೀರುತ್ತ ಆತ ಕೇಳಿದ :

"ಪಾರ್ವತಿಯ ನೆನಪು ಬಂತೇನಪಾ ಗಂಗಾಧರಣ್ಣ ?"

"ಬರದೆ ಇರ್‍ತದೇನು ? ಈಗ ಆಕೆ ಎಲ್ಲಿದಾಳೆ ರಾಯಣ್ಣ ? ನಿನಗೇನಾದರೂ ಗೊತ್ತೇ ?"

"ಗೊತ್ತೈತಲ್ಲ ?"

"ಹೌದೇ ? ಎಲ್ಲಿದಾಳೆ ಹೇಳಲ್ಲ ಹಾಗಾದರೆ ?" ನಾನು ಕಾತರನಾಗಿ ಕೇಳಿದೆ.

"ಊಹೂಂ. ಹಂಗೆಲ್ಲಾ ಪುಕಟ ಹೇಳುವ ಹಂಗಿಲ್ಲ. ಏನಾರೆ ಇನಾಂ ಕೊಡ್ತೀನಂದರ ಹೇಳ್ತೇನಿ."

"ಸದ್ಯಕ್ಕಂತೂ ಈ ಜೀವ ಒಂದು ಬಿಟ್ಟರೆ ನನ್ನ ಹತ್ತರ ಇನ್ನೇನೂ ಇಲ್ಲ. ನಿನಗಾಗಿ ನಾನು ಜೀವ ಕೊಡಬಲ್ಲೆ ಅನ್ನೋದು ನಿನಗೆ ಗೊತ್ತೇ ಇದೆ. ಹೇಳಲ್ಲ ರಾಯಣ್ಣಾ ? ಪಾರ್ವತಿ ಕಿತ್ತೂರಲ್ಲೇ ಇದಾಳೆಯೋ ಈಗಲೂ ?"

"ಮತ್ತೆಲ್ಲಿ ಹೋಗತಾಳ? ಈ ಐದು ವರ್ಷದಾಗ ನೀ ಒಮ್ಮೆಯೂ ಹೋಗಿ ಬಂದಿಲ್ಲೇನ ಕಿತ್ತೂರಿಗೆ ? ನಿನ್ನ ಗೆಳತಿಯ ಭೆಟ್ಟಿಗಾಗಿ ?"

"ಎರಡುಮೂರು ಸಲ ಹೋಗಿದ್ದೆನಲ್ಲ ? ಅವರ ಮನೆಯಲ್ಲಂತೂ ಈಗ

ಯಾರೂ ಇಲ್ಲ. ಲಢಾಯಿಯ ಗದ್ದಲದಲ್ಲಿ ಸಾವಿರಾರು ಜನರು ಊರು ಬಿಟ್ಟು ಗುಳೇ ಹೋದರಲ್ಲ ? ಅವರ ಹಾಗೇ ಗುರುಪಾದಪ್ಪನವರೂ ಸಂಸಾರ ಸಮೇತರಾಗಿ ಎಲ್ಲಿಗೋ ಹೋದರಂತೆ. ಜನ ಹೇಳಿದರು."

ಅದುವರೆಗೂ ಚೇಷ್ಟೆ ಮಾಡಿ ನಗುತ್ತಿದ್ದ ರಾಯನಾಯಕ ಒಮ್ಮೆಲೇ ಗಂಭೀರನಾದ, ತಡೆ ತಡೆಯುತ್ತ ಆತನೆಂದ.

"ಗುರುಪಾದಪ್ಪನವರು ಎಲ್ಲಿಗೂ ಹೋಗಲಿಲ್ಲ ಗಂಗಾಧರಣ್ಣ. ಅವರು ತೀರಿಕೊಂಡರು ಆಗಲೇ."

"ತೀರಿಕೊಂಡರೇ ? ಹ್ಯಾಗೆ ? ಯುದ್ಧದಲ್ಲಂತೂ ಅವರಿಗೆ ಗಾಯಗೀಯ ಆಗಿರಲಿಲ್ಲ ಅನ್ನೋದನ್ನ ನಾನೇ ಬಲ್ಲೆ."

"ಲಢಾಯಿ ಮುಗಿದ ಮ್ಯಾಲ ವೈರಿಗಳು ಮನೀಮನೀ ತಿರುಗಿ ಲೂಟಾ ಲೂಟಿ ನಡಸಿದ್ದರಲ್ಲ ? ಶಿಲೇದಾರರ ಮನಿಯಾಗಂತೂ ಒಬ್ಬಳೇ ಹರೇದ ಹೆಣ್ಣುಮಗಳು. ಗುರುಪಾದಪ್ಪನವರು ಬಾಗಿಲಕ್ಕ ಅಡ್ಡ ನಿಂತವರು ಪ್ರಾಣ ಹೋಗುವ ತನಕ ಸರಿಯಲಿಲ್ಲ. ಎಂಟುಮಂದಿ ವೈರಿಗಳನ್ನ ಅವರೊಬ್ಬರೇ ಕೊಂದು ಕಡೆಗೆ ಪ್ರಾಣಬಿಟ್ಟರು. ಅಷ್ಟರೊಳಗಾಗಿ ಪಾರ್ವತಿ ಹೋಗಿ ರಾಣೀ ಸಾಹೇಬರ ಬಿಡಾರ ಸೇರಿಕೊಂಡಿದ್ದಳು."

ಉಸಿರು ಬಿಗಿ ಹಿಡಿದು ನಾನು ಕೇಳಿದೆ. "ಅಂತೂ ಆಕೆಗೇನೂ ಆಗ ಲಿಲ್ಲಲ್ಲ ? ದೇವರು ದೊಡ್ಡವ. ಈಗೆಲ್ಲಿದ್ದಾಳೆ ಪಾರ್ವತಿ, ರಾಯಣ್ಣಾ ?"

"ತಂದೀನ್ನ ಕಳಕೊಂಡು ಪರದೇಶಿ ಆದ ಹೆಣ್ಣುಮಗಳನ್ನ ನಡು ನೀರಾಗ ಕೈ ಬಿಡುವಂಥವರಲ್ಲ ನಮ್ಮ ರಾಣೀಸಾಹೇಬರು. ನಾಲ್ಕೈದು ಮಂದೀನ್ನ ಕಳಿಸಿ ನಿನ್ನ ಹುಡುಕಿಸಿದ್ರು, ನೀ ಆಗ ಸಿಕ್ಕಿದ್ದರೆ ನಿಮ್ಮಿಬ್ಬರ ತಲಿಯಮ್ಯಾಲ ಅಕ್ಕೀಕಾಳು ಹಾಕಿ, ಪಾರ್ವತಿಯನ್ನ ನಿನ್ನ ವಶಕ್ಕ ಕೊಡಬೇ ಕಂತ ಅವ್ವನವರ ವಿಚಾರ ಇತ್ತು. ನೀನಂತೂ ಸಿಗಲಿಲ್ಲ. ಅದಕ್ಕ ಹೊಂಗಲಕ ಹೋಗುವಾಗ ಪಾರ್ವತಿಯನ್ನೂ ಸಂಗಡ ಕರಕೊಂಡು ಹೋದ್ರು...."

"ಆಮೇಲೆ ? ಆಮೇಲೆ ?"

"ಆಮ್ಯಾಲ ಏನೈತಿ ? ಅವ್ವನವರ ಸಂಗಡ ಹೊಂಗಲದಾಗs ಅದಾಳ ಪಾರ್ವತಿ."

"ಮದುವೆ ಗಿದುವೆ ಆಗಲೇ ಇಲ್ಲ ?"

"ಇಲ್ಲ. ಅಪ್ಪನವರೂ ಹೇಳಿ ನೋಡಿದ್ರು. ನಾಕೈದು ಮಂದಿ ಆಕೀನ ಮಾಡಿಕೊಳ್ಳಾಕೂ ಮುಂದ ಬಂದಿದ್ರು. ಆದರ ಅದೊಂದು ಹಠಮಾರಿ ಹೆಣ್ಣಪಾ. ಕಿತ್ತೂರು ಸಂಸ್ಥಾನ ಮತ್ತ ಸ್ವತಂತ್ರ ಆದಮ್ಯಾಲೇ ಮದುವೆ ವಿಚಾರ ಅಂತ ಅಂತಾಳ !"

ಸಂತೋಷದಿಂದಲೂ ಅಭಿಮಾನದಿಂದಲೂ ನನ್ನ ಎದೆ ಬಿರಿಯುವ ಹಾಗಾಯಿತು. ಆಕೆಗಾಗಿ ಕಾಯುತ್ತಾ ನಾನು ಒಂಟಿಯಾಗಿರುವಂತೆಯೇ ನನಗಾಗಿ ಕಾಯುತ್ತ ಆಕೆಯೂ ಅವಿವಾಹಿತೆಯಾಗಿಯೇ ಉಳಿದಿರಬೇಕು. ತನ್ನ ಪ್ರೀತಿಯ ಕಿತ್ತೂರನಾಡು ಪಾರತಂತ್ರ್ಯದಲ್ಲಿರುವಾಗ, ವಿವಾಹವಾಗಿ ಸಂಸಾರ ಸುಖ ಸವಿಯುವುದಕ್ಕೂ ಆಕೆಗೆ ಇಷ್ಟವಿಲ್ಲ! ಪಾರ್ವತಿಯ ಇಂಥ ಗುಣಗಳಿಗೆ ಮಾರು ಹೋಗಿಯೇ ಅಲ್ಲವೇ ನಾನು ಆಕೆಯನ್ನು ಪ್ರೀತಿಸಿದ್ದು ?

"ಈಗ ಹ್ಯಾಗಿದಾಳಪ್ಪ ಪಾರ್ವತಿ ? ಬಹಳ ಇಳಿದು ಹೋಗಿಲ್ಲವಷ್ಟೇ?" ಎಂದು ಕೇಳಿದೆ.

"ಎರಡು ತಿಂಗಳ ಹಿಂದೆ ಅಪ್ಪನವರ ಭೆಟ್ಟಿಗೆ ಹೋಗಿದ್ದಾಗ ನೋಡಿದ್ದಿನಿ. ಸೊರಗ್ಯಾಳ ಅನ್ನಲಿಕ್ಕೇನೂ ಬರೂದಿಲ್ಲ, ಆದರೂ ಜೀವಕ್ಕ ಸಮಾಧಾನ ಇಲ್ಲದಾಗ ಹುರುಪೂ ಇರೂದಿಲ್ಲ. 'ಏನಣ್ಣಾ, ಆರಾಮ ಅದೀಯಾ ?' ಅಂತ ಕೇಳಿದಳು. ಊಟಕ್ಕೂ ತಾನೇ ನೀಡಿದಳು. ಮೊದಲಿನ ಹಂಗs ಈಗೂ ಎರಡು ಹೊತ್ತು ಶಿವಪೂಜೆ. ಸಂಜೀ ಕಡೆ ಊಟವೂ ಇಲ್ಲಂತೆ. ರಾಣೀ ಸಾಹೇಬರೂ ಊಣ್ಣೂದಿಲ್ಲಲ್ಲ ಸಂಜೀಕ ?"

"ಎಷ್ಟು ತಳಮಳ ಆಗ್ತಿರಬಹುದೋ ರಾಣೀ ಸಾಹೇಬರ ಮನಸ್ಸಿಗೆ ?"

"ಆಗದಿರತೈತೇನಪಾ ? ಎಂಥಾ ದೊಡ್ಡ ರಾಜ್ಯದ ರಾಣಿಯಾಗಿ ಮೆರೆದವರಿಗೆ ಎಂಥಾ ಸ್ಥಿತಿ ಬಂತಲ್ಲ ! ಅಪ್ಪನವರಿಗೂ ಅದೇ ಕಳವಳ, ಪಾರ್ವತಿಗೂ ಅದೇ ಚಿಂತೆ...." ಎಂದು ರಾಯಣ್ಣ ಹೇಳುತ್ತಿದ್ದಂತೆ ಗುಡಿಯ ಕಡೆಯಿಂದ ಕರವೀರನ ಧ್ವನಿ ಕೇಳಬಂದಿತು :

"ಗಂಜಿ ಆರಿ ಹೋಗತೈತ್ರೆಪೋ. ಲಗೂ ಲಗೂ ಬರ್ರೆಲಾ !"

# ೩ ರಾಯನಾಯಕ

ಸರದಾರ್ ವೀರಪ್ಪನವರು ಪ್ರೀತಿಯಿಂದ ಒತ್ತಾಯ ಮಾಡಿ ಮಾಡಿ ಮೂರು ಹರಿವಾಣಗಳಷ್ಟು ಗಂಜಿ ಕುಡಿಸಿದರು. ಬಿಸಿ ಬಿಸಿ ಗಂಜಿ ಹೊಟ್ಟೆಗೆ ಸೇರಿದಂತೆಲ್ಲ ಮಾರ್ಗಾಯಾಸ ದೂರವಾಗಿ ಒಲು ಹಿತವೆನಿಸಿತು. ಕರವೀರ ಮಧ್ಯಾಹ್ನದ ಅಡುಗೆಯ ಸಿದ್ಧತೆಗೆ ತೊಡಗಿದ. ದೇವಾಲಯದ ಎದುರಿಗಿದ್ದ ಮಾವಿನ ಮರದ ಕೆಳಗೆ ಕುಳಿತುಕೊಂಡು ನಾವು ಮಾತನಾಡತೊಡಗಿದೆವು.

"ರಾಣೀ ಸಾಹೇಬರು ಹೆಂಗದಾರ ರಾಯಣ್ಣಾ ?" ಎಂದು ಆರಂಭ ಮಾಡಿದರು ವೀರಪ್ಪನವರು.

"ಜೀವಕ್ಕ ಹುರುಪಿಲ್ಲ. ಬಹಳ ಸೊರಗಿ ಹೋಗ್ಯಾರ. ಈಗ ನೀವು ಒಮ್ಮಿಂದೊಮ್ಮೆಲೇ ನೋಡಲಿಕ್ಕೆ ಹೋದರ ಗುರುತು ಕೂಡಾ ಹತ್ತಲಿಕ್ಕಿಲ್ಲ" ಎಂದು ನಾನು ಹೇಳುತ್ತಲೂ "ಹುಮ್ ! ಶಿವನ ಇಚ್ಛಾ !" ಎಂದು ಉದ್ಗಾರ ತೆಗೆದು, ಒಂದು ನಿಟ್ಟುಸಿರು ಬಿಟ್ಟು ವೀರಪ್ಪನವರು :

"ಚಿಕ್ಕ ರಾಣೀ ಸಾಹೇಬರು ?"

"ಅವರಿಗಾದರೂ ಏನು ಸುಖ ಐತಿ ಸರದಾರ್ ಸಾಹೇಬರೇ ? ಕೈಹಿಡಿದ ದೊರೆಗಳು ಹೋದರು, ರಾಜ್ಯ ಹೋಯ್ತು. ಐಶ್ವರ್ಯ ಹೋಯ್ತು. ಪರ ದೇಶಿಗಳ ಬಂದಿಯಾಗಿರುವ ಪ್ರಸಂಗ ಬಂತು ಅವರೂ ಸೊರಗಿ ಸೊರಗಿ ಕಡ್ಡಿಯ ಹಂಗಾಗಿದಾರ."

"ಜಾನಕೀಬಾಯಿ ಸಾಹೇಬರೋ ?"

"ಒಂದೆರಡು ವರ್ಷದಿಂದ ಅವರಿಗೂ ಮೈಯಾಗ ನೆಟ್ಟಗಿಲ್ಲ–ಹಾಸಿಗೀ ಬಿಟ್ಟು ಏಳೂದಕ್ಕಾಗೂದಿಲ್ಲ ನೋಡ್ರಿ. ಅವ್ವನವರಿಗೆ ಅದೂ ಒಂದು ಚಿಂತಿಯೆ."

ಒಂದು ನಿಮಿಷ ಮೌನವಾಗಿದ್ದು ವೀರಪ್ಪನವರು ಮತ್ತೆ ಮಾತನಾಡಿ ದರು :

"ಈ ಸೇವಕರ ನೆನಪೂ ಬರ್ತಿರಬೇಕಲ್ಲ ಅವ್ವನವರಿಗೆ ?"

"ನಾ ಭೆಟ್ಟಿಗೆ ಹೋದಾಗಲೆಲ್ಲಾ ನಿಮ್ಮನ್ನೂ ಸೇನಾಪತಿ ಗುರುಸಿದ್ದಪ್ಪ ನವರನ್ನೂ ನೆನಿಸಿಕೊಂಡು ದುಃಖ ಮಾಡ್ತಾರ. ನೀವು ಎಲ್ಲೆಲ್ಲಿ ಅದೀರಿ

ಅನ್ನುವ ಸುದ್ದೀ ತಿಳಕೊಳ್ಳಲಿಕ್ಕೆ ಪ್ರಯತ್ನ ಮಾಡಿದರು. ಏನೂ ಗೊತ್ತಾಗ ಲಿಲ್ಲ. ಈಗ ನೀವು ಬಂದಿರೂದು ಗೊತ್ತಾದರ ಅವರಿಗೆಷ್ಟು ಆನಂದ ಆಗಬಹು ಡಂತೀರಿ ?"

"ಅವರ ಪಾದಸ್ಪರ್ಶ ಮಾಡಬೇಕಂತ ನನ್ನ ಜೀವಾನೂ ಒಡಕೊಳ್ಳು ತೈತಿ ರಾಯಣ್ಣಾ. ಆದರ ಹಂಗೆಲ್ಲಾ ಧುಡುಂ ಅಂತ ಹೋಗುವಂತಿಲ್ಲ. ಹೊಂಗಲದ ಕಿಲ್ಲೇಕ್ಕ ಕಾವಲು ಜೋರಾಗೈತಿ ಅಂತೀಯಾ ?"

"ಶಿರಸ್ತೇದಾರನ ಹುಕುಂ ಇಲ್ಲದ ಯಾರನ್ನೂ ಒಳಗೆ ಬಿಡೂದಿಲ್ರೀ. ಆದರೂ, ಜೋಗಿ ಜಂಗಮರಿಗೂ ಸಾಧುಗಳಿಗೂ ಅಡ್ಡಿ ಮಾಡೂದಿಲ್ಲ. ನಾನೂ ಜಂಗಮನ ವೇಷಾ ಹಾಕಿಕೊಂಡೇ ಹೋಗಿ ಬರ್ತೀನಿ. ಆದರಃ ನಮ್ಮ ಮ್ಯಾಲೂ ಕಣ್ಣಿಡೂದಕ್ಕಂತ ವಾಡೇದೊಳಗ ಗೂಢಚಾರರನ್ನು ತುಂಬಿದಾರ."

"ಅದನ್ನೆಲ್ಲಾ ನೆಟ್ಟಗ ತಿಳಕೊಳ್ಳೋದಕ್ಕೇ ನಿನಗೆ ಇಷ್ಟು ತ್ರಾಸ ಕೊಟ್ಟು ಇಷ್ಟು ದೂರ ಕರೆಸಿದ್ದು ರಾಯಣ್ಣಾ. ವಾಡೇದಾಗ ಗೂಢಚಾರರಂದರ ಹೆಂಗ ? ಅವ್ವನವರ ಅಂತಃಪುರದಾಗೂ ಅವರು ಇದಾರಂತೀಯಾ?"

"ರಾಣೀ ಸಾಹೇಬರು ಮಲಗುವ ಕೋಣೆಯ ಹತ್ತರ ಗಂಡಸರ್ಯಾರೂ ಬರೂದಿಲ್ರೀ ಸರದಾರ್ ಸಾಹೇಬರೆ. ಆದರ, ವಾಡೇದೊಳಗ ಅಡಿಗಿ, ನೀರು ನಿಡಿ ನೋಡಿಕೊಳ್ಳುವ ಹೆಣ್ಣಾಳುಗಳಿದಾರಲ್ರೀ ? ಅವರಲ್ಲೇ ಯಾರನ್ನಾದರೂ ಒಡಕೊಂಡು, ಅಂತಃಪುರದಾಗ ನಡೆಯುವ ಮಾತುಕತೆಗಳನ್ನ ತಿಳುಕೊಳ್ಳುವ ಕೆಲಸಕ್ಕೆ ಹಚ್ಚಿದ್ದರೂ ಹಚ್ಚಿರಬಹುದಂತ ಸಂಶಯ ಐತಿ."

"ಹೌದಪಾ. ಅದೂ ಶಕ್ಯ ಐತಿ. ಗೋವಿಂದಭಟ್ಟ-ಮಹಾಂತವ್ವ ಈ ಇಬ್ಬರು ಕುದ್ದಲಗೇಡಿಗಳು ಫಿತೂರಾಗಿ ಮದ್ದಿನಾಗ ಸೆಗಣೀ ಕೂಡಿಸಿ ಕಿತ್ತೂರಿಗೆ ಕೇಡು ತಂದರಲ್ಲ-ಆ ಮಹಾಂತಿಯಂಥಾ ಹೆಂಗಸರು ಎಲ್ಲಾ ಕಡೆಗೂ ಇರತಕ್ಕಂತವರೇ. ಕುಂಪಣಿ ಸರಕಾರದವರು ಅವರನ್ನ ಉಪಯೋಗ ಮಾಡಿಕೊಳ್ಳತಕ್ಕವರೇ. ಆದಿರಲಿ. ಶಿರಸ್ತೇದಾರ ಅಂದಿಯಲ್ಲ ? ಅವನ ಹೆಸರೇನು ಗೊತ್ತೈತೇನು ?"

"ರಾಮರಾವ ಅಂತ ಅದಾನ."

"ಅವನೂ ಅಲ್ಲೇ ಹೊಂಗಲದಾಗ ಅದಾನೇನು ?"

"ಇಲ್ರೀ. ಅವ ಇರೂದು ಸಂಪಗಾವಿಯೊಳಗ. ಅದನ್ನೊಂದು ತಾಲ್ಲೂಕ

ಅಂತ ಮಾಡಿ ಅದಕ್ಕ ಕೃಷ್ಣರಾವ್ ಅನ್ನುವ ಒಬ್ಬನನ್ನು ಮಾಮಲೇದಾರ ಅಂತ ನೇಮಿಸ್ಯಾರ. ಅವನ ಕೈ ಕೆಳಗ ರಾಮರಾವ ಅದಾನ."

"ಇವರಿಬ್ಬರೂ ಎಲ್ಲಿಯವರು ? ನಮ್ಮ ನಾಡಿನವರೋ ಏನು?" ಎಂದು ಕೇಳಿದರು ವೀರಪ್ಪನವರು.

"ಅವರೆಲ್ಲಿಯವರನ್ನೂದು ಯಾರಿಗೂ ನೆಟ್ಟಗ ಗೊತ್ತಿಲ್ಲ. ಮಾಮಲೇದಾರ ಕೃಷ್ಣರಾವ್ ಮೊಗಲಾಯಿ ಸೀಮಿಯವ ಅಂತ ಸುದ್ದಿ ಐತಿ. ರಾಮರಾವ ಮೈಸೂರ ಕಡೆಯವನಂತ ಹೇಳ್ತಾರ."

"ಕಿತ್ತೂರ ನಾಡಿನ ಅಭಿಮಾನ ಹಿಡಿದು ರಾಣಿಯವರಿಗೆ ಫಿತೂರಿ ಆಗ ಬಾರದಂತ ಬೇಕಂತಲೇ ದೂರ ದೂರದಿಂದ ತಂದು ನೇಮಿಸಿರಬೇಕು ಈ ಅಧಿಕಾರಿಗಳನ್ನ. ಆದರೂ ನಾವು ಪ್ರಯತ್ನ ಮಾಡೋಣ. ಮಾಮಲೇದಾರ ಹೆಂಗದಾನ ? ಬೆಳ್ಳಿ ಬಂಗಾರಕ್ಕ ಮರುಳಾಗಬಹುದೋ ಹೆಂಗ ?"

"ನನಗೂ ಅಷ್ಟೇನೂ ಚಲೋ ಗುರುತಿಲ್ರೀ ಅವಂದು."

ಅಷ್ಟು ಹೊತ್ತು ಸುಮ್ಮನೆ ಕುಳಿತಿದ್ದು, ನಮ್ಮ ಮಾತು ಕೇಳುತ್ತಿದ್ದ ಗಂಗಾಧರ ಈಗ ನಡುವೆ ಬಾಯಿ ಹಾಕಿ ಮಾತನಾಡಿದ.

"ಸಂಗೊಳ್ಳಿಯ ಹಳಬಕೀ ಮಾಡುವವಗ ಮಾಮಲೇದಾರನ ಗುರುತು ಇರಲೇಬೇಕಲ್ಲಪ್ಪ ?"

"ಹಳಬಕೀ ಮಾಡೂದೇನು ಸುಳ್ಳಲ್ಲ. ಕಾಗದ ಪತ್ರಾ ತಗೊಂಡು ಎಷ್ಟೋ ಸಾರಿ ಸಂಪಗಾವಿಗೂ ಹೋಗಿ ಬಂದೀನಿ. ಆದರೂ, ಹಂಗೆಲ್ಲಾ ನಮಗ ಮಾಮಲೇದಾರನ ಭೆಟ್ಟಿ ಆಗುವಂತಿಲ್ಲ. ಅವರೇನು ಈಗ ತಾಲ್ಲೂಕಿನ ಮಹಾರಾಜರಿದ್ದಂಗ ಅದಾರ. ನಮಗ ಸಂಬಂಧ ಬರೀ ಕಾರಕೂನನ ಸಂಗಡ" ಎಂದು ನಾನು ಹೇಳುತ್ತಲೂ ವೀರಪ್ಪನವರು ಕೇಳಿದರು :

"ಕಾರಕೂನ ಯಾರು ?"

"ಎಂಟು ಹತ್ತು ಮಂದಿ ಅದಾರ್ರೀ. ಗೋವಿಂದ ಭಟ್ಟ ಅನ್ನುವವ ನೊಬ್ಬನೂ ಅದಾನ. ಅವನ ಸಂಗಡಲೇ ನಮ್ಮದು ಹೆಚ್ಚು ಸಂಬಂಧ. ಬಹಳ ಆಸೆಬುರುಕ ಮನುಷ್ಯ. ಟಪಾಲು ತಕೊಂಡು ಹೋದಾಗಲೆಲ್ಲಾ ಅವಗ ಬಾಳೀಹಣ್ಣೋ ಶೇಂಗಾ ಕಾಯೋ ಬೆಣ್ಣೀನೋ ಬೆಲ್ಲಾನೋ ಒಯ್ದು

ಕೊಡಾಕಬೇಕಾಗತೈತಿ. ಇಲ್ಲದಿದ್ದರ ಗೌಡ ಕುಲಕರಣೇರನ್ನ ಬಾಯಿಗೆ ಬಂದಂಗ ಬೈತಾನ."

"ಸಂಗೊಳ್ಳಿಗೆ ಈಗ ಗೌಡ ಯಾರು ರಾಯಣ್ಣಾ ?"

"ಪರುತಗೌಡಂತ ಅದಾನ್ರೀ ಮುದುಕ. ಅವಂದೇನೂ ನಡಿಯೂದಿಲ್ಲ. ಎಲ್ಲಾ ಕುಲಕರಣೀದೇ ಕಾರಬಾರ."

"ಅವನೇ ಹೌದಲ್ಲೋ ಬಾಳಾಸಾಹೇಬ ?"

"ಹೌದ್ರೀ. ಅದೇ ಬಾಳನೇ. ಕಲಭಾವಿ ದೇಶಪಾಂಡೇರ ಬೀಗತನ ಮಾಡೀನಂತ ಬಹಳ ದಿಮಾಕು ಅವಗ. ಕಿತ್ತೂರು ರಾಜರಿಗೂ ಈ ದೇಶ ಪಾಂಡೇರಿಗೂ ಮೊದಲಿಂದಲೂ ವೈರ. ನಿಮುಗೂ ಗೊತ್ತೇ ಐತಲ್ರೀ ? ಕಿತ್ತೂರ ರಾಜ್ಯ ಮುಳುಗಿ ಹೋದದ್ದಕ್ಕ ಹಾಲೂ ಸಕ್ರೀ ಕುಡದಂಗ ಸಂತೋಷ ಆಗೈತಿ ಅವರಿಗೆಲ್ಲಾ. ರಾಣೀ ಸಾಹೇಬರ ಅಪ್ಪಣೀ ಪ್ರಕಾರ ಲಡಾಯಿ ಮಾಡಿದ ನಮ್ಮಂಥವರ ಮ್ಯಾಲೆಲ್ಲಾ ಸೇಡು ತೀರಿಸಿಕೊಂತಿದಾನ ಈ ಕುಲಕರಣಿ."

"ಹಂಗಾದರ ನಿನ್ನೂ ಕಾಡತಿರಬೇಕಲ್ಲ ?"

"ಕಾಡದೆ ಬಿಟ್ಟಾನೇನ್ರಿ ? ಒಂದು ವರ್ಷ ಧಾರವಾಡದಾಗ ಬಂದಿಯಾಗಿ ಇದ್ದು ಬಿಡುಗಡೆ ಹೊಂದಿ ನಾ ಬರೂದರೊಳಗಾಗಿ ನಮ್ಮ ತಂದಿಗೆ ಮಲ್ಲಸರ್ಜ ದೊರೆಗಳು ಬರಕೊಟ್ಟಿದ್ದ ಹತ್ತು ಕೂರಿಗಿ ಹೊಲಾ ಜಪ್ತ ಮಾಡಿಬಿಟ್ಟಿದ್ರು. ಹಂಗ್ಯಾಕ ಮಾಡಿದಿರಿ ಅಂತ ಕೇಳಿದರ ನೀವು ಕುಂಪಣೀ ಸರಕಾರದ ವಿರುದ್ಧ ಬಂಡು ಮಾಡಿದಿರಿ–ನಿಮ್ಮಂಥವರ ಭೂಮಿ ಕಸುಕೋಬೇಕೂಂತ ಮ್ಯಾಲಿನಿಂದ ಹುಕುಂ ಬಂದೈತಂತ ಹೇಳಿದ್ರು."

ವೀರಪ್ಪನವರು ಕಳವಳದ ಧ್ವನಿಯಲ್ಲಿ ಕೇಳಿದರು :

"ಜೀವನಕ್ಕ ಆಧಾರವಾಗಿದ್ದ ಹೊಲಾನೇ ಹೋಯ್ತಂದ ಮ್ಯಾಲ ಬಹಳ ತ್ರಾಸ ಆಗಿರಬೇಕಲ್ಲ ಕುಟುಂಬಕ್ಕ ರಾಯಣ್ಣಾ ?"

"ಅದಷ್ಟು ಉತ್ಪನ್ನ ಹೋಯ್ತು ಖರೆ. ಆದರೂ, ಅಜ್ಜ ಮುತ್ತಜ್ಜರ ಕಾಲದಿಂದ ಬಂದ ವತನೀಭೂಮಿ ಅಷ್ಟು ಉಳಿದೈತಲ್ಲ ಸರದಾರ್ ಸಾಹೇಬರೆ? ಆದರಿಂದ ಅಷ್ಟು ಕಾಳು ಕಡೀ ಬರತೈತಿ. ಮನ್ಯಾಗ ಒಂದಷ್ಟು ಕುರಿ ಆಡು ಆದಾವ. ಅಷ್ಟರ ಮ್ಯಾಲ ಹೇಂಗೋ ನಡೆಸೀವಿ. ಕುಲಕರಣಿ ಮಾತ್ರ ಇನ್ನೂ

ಹೊಟ್ಟೇಕಿಚ್ಚು ಬಿಟ್ಟಿಲ್ಲ. ವತನದ ಹೊಲದ ಮ್ಯಾಲೂ ಅವನ ಕಣ್ಣೈತಿ. ಕಾಲು ಕೆದರಿ ಜಗಳ ತಗದು, ಸರಕಾರಕ್ಕ ಬರದು, ಅದನ್ನಷ್ಟು ಜಪ್ತಿ ಮಾಡಿಸಿದಾಗಲೇ ಅವನ ಜೀವಕ್ಕ ಸಮಾಧಾನ ಆಗತೈತ್ಯೋ ಏನೋ."

"ನಿಮ್ಮ ಅವ್ವ ಅಣ್ಣ ಎಲ್ಲಾ ಹೆಂಗ ಆದಾರ ರಾಯಣ್ಣಾ ?"

"ಅವ್ವ ಅಂತೂ ಮುದುಕಿಯಾದಳು. ಆದರೂ ಇನ್ನೂ ಗಟ್ಟಿ ಮುಟ್ಟಿ ಅದಾಳ ನೋಡ್ರಿ. ತಾನೇ ಹೋಗಿ ಎಮ್ಮಿ ಆಕಳ ಮೇಸಿಕೊಂಡು ಬರ್ತಾಳ. ಸಿದ್ದಣ್ಣ ಹೊಲಾ ನೋಡಿಕೊಂತಾನ. ಅಣ್ಣನ ಮಗ ಹನುಮಗ ಈಗ ಹತ್ತು ವರ್ಷ. ಅವ ಕುರೀ ಆಡು ಮೇಸಿಕೊಂಡು ಬರ್ತಾನ."

"ನಿನಗೂ ಮಕ್ಕಳು ?"

"ಇಲ್ರೀ, ಇನ್ನೂ ಆಗಿಲ್ಲ" ಎಂದು ಸಂಕೋಚದಿಂದಲೇ ನಾನು ಹೇಳಿದೆ.

"ಸಂಸಾರವಾದರೂ ಚಂದಾಗಿ ನಡದಿರಬೇಕಲ್ಲ ?"

"ನಡದೈತ್ರೀ ಹಂಗೇ, " ಎಂದಷ್ಟೇ ಹೇಳಿ ನಾನು ಸುಮ್ಮನಾದೆ. ನನ್ನ ಸಂಸಾರದ ಬಗೆಗೆ ವಿವರಿಸಿ ಹೇಳಲು ಕೊಂಚವೂ ಉತ್ಸಾಹವಿರಲಿಲ್ಲ. ಏಕೆಂದರೆ, ನನ್ನ ಹೆಂಡತಿ ನಿಂಗಿ, ನಮ್ಮ ಮನೆಯಲ್ಲಿರುವುದಕ್ಕಿಂತ ಹೆಚ್ಚು ಕಾಲ ತನ್ನ ತವರಿನಲ್ಲಿಯೇ ಇರುತ್ತಿದ್ದಳು. ನನ್ನ ಮಾವ ಅಪ್ಪಣ್ಣ ಒಬ್ಬ ಹಣ ಪಿಶಾಚಿ. ನನ್ನ ಅತ್ತೆಯೋ ಭಯಂಕರ ಬುದ್ಧಿಗೇಡಿ. ಅವರ ಹಿಡಿತದಲ್ಲಿ ಸಿಕ್ಕಿಕೊಂಡು ನನ್ನ ನಿಂಗಿ ನರಳುತ್ತಿದ್ದಳು.

ಮಧ್ಯಾಹ್ನದ ಊಟವಾದ ನಂತರ ಗಂಗಾಧರನೂ ನಾನೂ ಗುಡಿಯ ಪಡಸಾಲೆಯಲ್ಲಿ ಮಲಗಿಕೊಂಡು ಎರಡು ತಾಸುಗಳವರೆಗೆ ಚೆನ್ನಾಗಿ ನಿದ್ರೆ ಮಾಡಿದೆವು. ಮತ್ತೆ ಸಾಯಂಕಾಲ ಮಾತನಾಡುತ್ತ ಕುಳಿತಿದ್ದಂತೆ ವೀರಪ್ಪನವರೆಂದರು :

"ನಿನ್ನ ಮನಸಿನಾಗೇನೈತಿ ರಾಯಣ್ಣಾ ? ಬ್ಯಾರೆಯವರಂಗ ನೀನೂ ಕಿತ್ತೂರನ್ನ ಮರೆತುಬಿಟ್ಟು, ಕುಂಪಣಿ ಸರಕಾರದ ಹಳಬಕೀ ಮಾಡಿಕೊಂಡು ಆರಾಮ ಇರಬೇಕಂತೀಯೋ ಹೆಂಗ ?"

ವೀರಪ್ಪನವರು ನನ್ನನ್ನು ಪರೀಕ್ಷಿಸುತ್ತಿದ್ದುದು ಸ್ಪಷ್ಟವಾಗಿತ್ತು. ಎಂತಲೇ ನಾನು ಸ್ವಲ್ಪವೂ ಅನುಮಾನ ಮಾಡದೆ ಥಟ್ಟನೆ ಉತ್ತರವಿತ್ತೆ :

"ಕಿತ್ತೂರನ್ನ ನಾ ಎಂದೆಂದೂ ಮರೆತುಬಿಡುವಂತಿಲ್ರಿ ಸರದಾರರೆ. ಆ ಕೆಂಪು ಮೋತಿಯವರ ಸೇವಾನೂ ನನಗ ಬ್ಯಾಡ. ಅವರನ್ನು ಹೊರಗೆ ಹಾಕಿ ಕಿತ್ತೂರ ರಾಜ್ಯವನ್ನ ಮತ್ತೆ ಕಟ್ಟೂವದಕ್ಕ ನೀವೇಸಾರೆ ಪ್ರಯತ್ನ ಮಾಡೂದಿದ್ದರೆ ಮೊದಲನೇ ಸಿಪಾಯಿ ನಾನೇ !"

ಆ ಮಾತು ಕೇಳಿ ನಗುನಗುತ್ತ ಗಂಗಾಧರನೆಂದ :

"ಅಲ್ಲಲ್ಲ. ನೀನು ಎರಡನೇ ಸಿಪಾಯಿ. ನಿನಗಿಂತ ಮೊದಲೇ ನನ್ನ ದಾಖಲ್ ಆಗಿದೆಯಲ್ಲ ಸರದಾರರ ದಂಡಿನಲ್ಲಿ ?"

"ಅದಿರಲಿ ರಾಯಣ್ಣಾ. ನೀನಂತೂ ಈ ಕೆಲಸಕ್ಕೆ ನಿಂತ ಕಾಲ ಮ್ಯಾಲ ತಯಾರದೀ ಅನ್ನೂದು ನನಗೂ ಗೊತ್ತೇ ಇತ್ತು. ನಿನ್ನ ಸಂಗಡ ಎಷ್ಟು ಮಂದಿ ಬರಬಹುದು ?"

"ಬಿಚ್ಚುಗತ್ತಿ ಚನ್ನಬಸಪ್ಪ ಅಂತೂ ನನ್ನ ಬಿಟ್ಟು ಇರೂದಿಲ್ಲ ನೋಡ್ರಿ. ಅಮಟೂರ ಸೈದನವರ ಬಾಳಾಸಾಬ, ಬೆಳವಡಿ ಯಲ್ಲನಾಯಕ, ಒಕ್ಕುಂದದ ರುದ್ರನಾಯಕ, ದೇಗಾಂವಿಯ ಇಮಾಮಸಾಬ–ಬೇಕಾದಷ್ಟು ಮಂದಿ ಬಂಟರಿ ಹಾರ ಸರದಾರರೆ. ನಿಮ್ಮಂಥವರು ಯಾರರೆ ಒಬ್ಬರು ಮುಂದಾಗಿ ಯುದ್ಧದ ಬಾವುಟ ಎತ್ತೂದಷ್ಟೇ ಬೇಕಾಗೈತಿ ಅವರಿಗೆ !"

"ಯುದ್ಧ ಅಂದರೆ ಸುಲಭ ಅಲ್ಲಲ್ಲ ರಾಯಣ್ಣಾ ? ಅದೂ ಅಲ್ಲದೆ ಮೊದಲಿನ ಕಾಲದ ಯುದ್ಧಗಳ ಹಂಗಲ್ಲ ಇದು. ದಿಲ್ಲಿಯಿಂದ ರಾಮೇಶ್ವರದ ತನಕ ಭರತಖಂಡದಾಗೆಲ್ಲಾ ಅಧಿಕಾರ ಹಿಡಕೊಂಡ ಪ್ರಚಂಡ ವೈರಿಯ ವಿರುದ್ಧ ನಾವು ಯುದ್ಧ ಮಾಡಬೇಕಾಗತೈತಿ ಅನ್ನೂದು ಮರೀಬಾರದು."

"ಏನೊ ಅದೆಲ್ಲಾ ನಿಮಗೇ ಗೊತ್ತು. ನಮ್ಮಂಥವರಿಗೆ ಸೂಕ್ಷ್ಮ ರಾಜಕಾರಣ ತಿಳಿಯುವುದಿಲ್ಲ. ಏನಿದ್ದರೂ ನಾವು ಕತ್ತಿಯ ಬಂಟರು. ರಾಣೀ ಸಾಹೇಬರು, ನೀವು ಹೇಳಿದರ ಎಂಥಾ ವೈರಿಯಿದ್ದರೂ ಅಂಜದೆ ಪ್ರಾಣಾನ ಪಣಕ್ಕೆ ಹಚ್ಚಿ ಹೊಡೆದಾಡುವವರು. ಅದರಾಗೇನು ಸಂಶಯ ಇಲ್ಲ."

"ಐದು ವರ್ಷದ ಹಿಂದೆಯೂ ನಾವು ಹೀಗೇ ನಿಶ್ಚಯದಿಂದ ಹೋರಾಡಿದರೂ ನಮಗೆ ಜಯ ಸಿಕ್ಕಲಿಲ್ಲಲ್ಲ ಸರದಾರರೆ ?" ಎಂದ ಗಂಗಾಧರ.

"ಅದಕ್ಕೆ ಅನೇಕ ಕಾರಣ. ಮೊದಲನೇದು ನಮ್ಮ ನಮ್ಮಲ್ಲಿಯ ಒಡಕು. ದತ್ತಕದ ಸಂಬಂಧದಿಂದ ಕಿತ್ತೂರಲ್ಲೇ ಎರಡು ಸಂಗಡ ಆಗಿದ್ದವು.

ಒಬ್ಬರ ಮಾರೀ ನೋಡಿದರೆ ಇನ್ನೊಬ್ಬರಿಗೆ ಆಗ್ತಿರಲಿಲ್ಲ. ಅಂಥಾದ್ದರಲ್ಲಿ ಪಿತೂರಿಯೂ ಆಗೂದೇ. ಅಲ್ಲದೆ, ಆ ಕಾಲಕ್ಕೆ ನಮಗ ಸಹಾಯ ಮಾಡಲಿಕ್ಕೆ ಬರಬೇಕಾಗಿದ್ದ ದಂಡುಗಳೂ ಬರಲಿಲ್ಲ. ಈಗ ಮಾತ್ರ ಪರಿಸ್ಥಿತಿ ಬೇರೆ ಐತಿ" ಎಂದರು ವೀರಪ್ಪನವರು.

"ಈಗ ಯಾರಿಂದಾದರೂ ಸಹಾಯ ಸಿಗಬಹುದಂತೀರಾ?"

"ಕೊಲ್ಲಾಪುರದ ರಾಜಾ ಬಾಬಾಸಾಹೇಬರಿಗೂ ಕುಂಪಣಿಯವರ ಮ್ಯಾಲ ಸಿಟ್ಟು ಐತಿ. ಚಿಕ್ಕೋಡಿ ಮುನವಳ್ಳಿ ಸೀಮಿಗಳನ್ನು ಅವರಿಂದ ಕಸು ಕೊಂಡಿದ್ದಾರಲ್ಲ, ಅದಕ್ಕಾಗಿ. ಪರದೇಶಿಗಳನ್ನ ಓಡಿಸಬೇಕಂತ ಅವರು ಗುಪ್ತ ವಾಗಿ ತಯಾರಿ ನಡಸ್ಯಾರಂತ ಸುದ್ದಿ ಐತಿ. ನಾವಿನ್ನೂ ಗೋವಾದಲ್ಲಿದ್ದಾಗಲೇ ಗೊತ್ತಾಗಿತ್ತು ನಮಗ. ಈಗ ಯಾರಾರೆ ಹೋಗಿ ಬಾಬಾಸಾಹೇಬರನ್ನ ಭೆಟ್ಟಿಯಾಗಿ ಬಂದರ ಅವರಿಂದ ನಮಗೆ ಸ್ವಲ್ಪಸ್ವಲ್ಪ ಸಹಾಯ ಸಿಕ್ಕೇಸಿಗ ಬಹುದು" ಎಂದರು ವೀರಪ್ಪನವರು.

ಕಿತ್ತೂರ ಸಮರದ ಕಾಲಕ್ಕೆ ಸೈನ್ಯಪಡೆಯೊಂದರ ಅಧಿಪತಿಯಾಗಿ ಶೌರ್ಯದಿಂದ ಹೋರಾಡಿದ್ದ ಹಿಮ್ಮತಸಿಂಗ್, ಕುಂಪಣಿಯವರ ಕೈಗೆಸಿಕ್ಕದೆ ತಪ್ಪಿಸಿಕೊಂಡು ಹೋಗಿ ಕೊಲ್ಲಾಪುರದ ಅರಸರ ಆಶ್ರಯದಲ್ಲಿ ನಿಂತ ವಿಷಯ ನನಗೆ ಯಾರಿಂದಲೊ ತಿಳಿದುಬಂದಿತ್ತು. ಆ ಸಮಾಚಾರವನ್ನು ವೀರಪ್ಪ ನವರಿಗೆ ತಿಳಿಸುತ್ತಲೂ ಅವರಿಗೆ ಅತ್ಯಂತ ಸಂತೋಷವಾಯಿತು.

"ಹಂಗಾದರ ಬಹಳ ಚಲೋನೇ ಆಯ್ತಲ್ಲ ರಾಯಣ್ಣಾ? ಹಿಮ್ಮತ ಸಿಂಗನ್ನ ಜೋಡುಮಾಡಿಕೊಂಡೇ ಬಾಬಾಸಾಹೇಬರನ್ನು ಭೆಟ್ಟಿಯಾಗಿ ಬರ ಬಹುದು. ಆದರೆ, ಅದಕ್ಕೆ ಮೊದಲು ನಮ್ಮ ರಾಣೀಸಾಹೇಬರ ಅಪ್ಪಣೆ ಪಡ ಕೊಂಡು, ಕೊಲ್ಲಾಪುರದ ದೊರೆಗೆ ಪತ್ರ ಬರೆಸಿಕೊಂಡು ಬರೋದು ಅಗತ್ಯ. ಅಲ್ಲೇನಪ್ಪಾ ಗಂಗಾಧರ?"

"ಹೌದು ಹೌದು, ನಮ್ಮಂಥವರು ಹೋದರೆ ಯಾರು ಮಾತಾಡಿಸು ತ್ತಾರೆ? ಅದೂ ಅಲ್ಲದೆ, ಬಾಬಾಸಾಹೇಬರು ಸಿಕ್ಕಸಿಕ್ಕವರನ್ನು ನಂಬುವುದೂ ಇಲ್ಲ. ಕಿತ್ತೂರರಾಣಿಯರ ಮುದ್ರೆಯಿರುವ ಕಾಗದ ತಗೊಂಡು ಹೋದರೆ ಮಾತ್ರ ನಮ್ಮ ಸಂಗಡ ಅವರು ಮಾತನಾಡಬಹುದು" ಎಂದ ಗಂಗಾಧರ.

"ಗಂಗಾಧರನೂ ನೀನೂ ಹೋಗಿ ಬಂದೀರಂತೆ ಕೊಲ್ಲಾಪುರಕ್ಕೆ. ನಿನ

ಗೇನು ಅಡಚಣಿಯಾಗೂದಿಲ್ಲ, ಹೌದಿಲ್ಲೋ ?" ಎಂದರು ವೀರಪ್ಪನವರು.

"ಹಳಬಕೀ ಕೆಲಸಕ್ಕ ಹರಕತ್ ಆಗಿ ಕುಲಕರ್ಣಿ ಸಿಟ್ಟಾಗ್ತಾನ. ಆಗ ತೊಲ್ಲನ್ಯಾಕ ?"

"ಊಹೂಂ. ಸದ್ಯಕ್ಕೆ ಅವಗೇನೂ ಸಂಶಯ ಬರದಂಗೇ ನೀ ಕೆಲಸ ಮಾಡಬೇಕಪ್ಪಾ ರಾಯಣ್ಣಾ. ಬಾದಾಮಿಗೋ ರಾಮೇಶ್ವರಕ್ಕೋ ಹೋಗಿ ಬರ್ತೀನಂತ ಹೇಳಿ ಅವನ ಒಪ್ಪಿಗೆ ಪಡಕೊಂಡೇ ಹೊರಡಬೇಕು. ನೀನಿಲ್ಲದಾಗ ನಿನ್ನ ಬದಲು ನಿಮ್ಮಣ್ಣಾ ಹಳಬಕೀ ಮಾಡ್ತಿರಬೇಕು. ಅಂತೂ ಯಾರಿಗೂ ಯಾವ ಸಂಶಯವೂ ಬಂದಿರಬಾರದು. ಗುಪ್ತವಾಗಿ ಎಲ್ಲಾ ತಯಾರೀ ಮಾಡಿ ಕೊಂಡು ಒಮ್ಮಿಂದೊಮ್ಮೆಲೇ ಮಿಂಚಿನಂಗ ದಾಳಿಮಾಡಿ ವೈರಿಗಳನ್ನ ಹೊಡೆದುಹಾಕುವ ಶಿವಾಜಿ ಮಹಾರಾಜರ ಯುದ್ಧತಂತ್ರದಂತೇ ನಾವೂ ಮಾಡಬೇಕಾಗತೈತಿ. ಗೊತ್ತಾಯ್ತು ?"

ಸೋಮವಾರ ಬೆಳಗ್ಗೆ ನಾವು ಮೂವರೂ ಜಂಗಮರ ವೇಷ ಧರಿಸಿ ಬೈಲಹೊಂಗಲದಲ್ಲಿ ಸೇರುವುದೆಂದು ಗೊತ್ತಾಯಿತು.

ರಾತ್ರಿಯ ಊಟ ಮುಗಿಯುತ್ತಲೂ ನಾನು ಹೊರಟುನಿಂತೆ. ಗುಡ್ಡ ಗಳನ್ನು ದಾಟಿಸಿ, ಬಯಲುಸೀಮೆಯವರೆಗೂ ನನ್ನ ಕಳಿಸಲು ಬಂದ ಗಂಗಾ ಧರ ಮಧ್ಯರಾತ್ರಿಯ ಸುಮಾರಿಗೆ ಹಿಂತಿರುಗಿಹೋದ. ಇನ್ನೈದು ದಿನ ಕಳೆ ದರೆ ಸೋಮವಾರ. ತನ್ನ ಪ್ರೇಯಸಿಯನ್ನು ಕಾಣುವ ಸುಯೋಗ ಸಮೀಪಿಸಿ ತೆಂದು ಅವನಿಗೆ ಆನಂದವೂ ಉದ್ರೇಕವೂ ಆಗುವುದು ಸಹಜವಾಗಿತ್ತು. ಆ ಆನಂದದಲ್ಲಿಯೇ ಆತ ಕನಸಿನಲ್ಲಿ ನಡೆಯುವವರಂತೆ ನಡೆದುಹೋದ.

ಪ್ರೀತಿಯ ಹೆಣ್ಣಿನ ಭೆಟ್ಟಿಗಾಗಿ ಗಂಡಸು ಇಷ್ಟು ಕಾತರನಾಗುವುದೂ ಶಕ್ಯವೇ ? ಎಂದು ಯೋಚಿಸುತ್ತಿದ್ದಂತೆ ನನಗೆ ಒಳಗೊಳಗೇ ವಿಸ್ಮಯವೆನಿಸು ತ್ತಿತ್ತು. ಇದ್ದರೂ ಇರಬಹುದು, ನನಗಂತೂ ಅಂಥ ಅನುಭವ ಅಪರಿಚಿತ ವಾಗಿತ್ತು.

# ೪ ಕೆಂಚವ್ವ

ನಾಳೆ ರಾತ್ರಿಯ ಹೊತ್ತಿಗೆ ಹೊರಳಿ ಬರುವದಾಗಿ ಹೇಳಿ ರಾಯಣ್ಣ ಹೊರಟು ಹೋದ, ತನ್ನ ಮಿತ್ರನ ಜೊತೆಗೆ. ಎಲ್ಲಿಗೆ ಹೋದನೋ ಯಾರು ಬಲ್ಲರು? "ಊರಿಗೆ ಹೋಗಿ ಬರ್ತೀನಿ" ಎಂದಷ್ಟೇ ಹೇಳಿದ ನನ್ನ ಮುಂದೆ. ಯಾವ ಊರೋ? ಯಾವ ಸೀಮೆಯೋ? ಯಾರಿಗೆ ಗೊತ್ತು? ಇನ್ನೂ ಮೂರು ತಾಸು ರಾತ್ರಿಯುಳಿದಿತ್ತು. ಆದರೆ ನನಗೇನೂ ಮತ್ತೆ ನಿದ್ರೆ ಬರಲಿಲ್ಲ. ಬರುವುದಾದರೂ ಹೇಗೆ? ತಲೆಯಲ್ಲೆಲ್ಲ ಬರಿಯ ರಾಯಣ್ಣನ ವಿಚಾರಗಳೇ. ಯಾರು ಕರೆಯಿಸಿರಬಹುದು ಅವನನ್ನು? ಏತಕ್ಕಾಗಿ? ಮತ್ತೇನಾದರೂ ಒಳ ಸಂಚು ನಡೆದಿರಲಿಕ್ಕಿಲ್ಲವಷ್ಟೇ?

ಕಿತ್ತೂರ ರಾಣಿ ಚೆನ್ನಮ್ಮನಲ್ಲಿ ನಮ್ಮ ರಾಯಣ್ಣನಿಗೆ ಬಹಳ ಭಕ್ತಿ. ನಮ್ಮ ಕುಟುಂಬಕ್ಕೇ ತಾಯಿಯಂತಿದ್ದಾಳೆ ಆ ಮಹಾರಾಯಿತಿ. ನಮ್ಮ ರಾಯಣ್ಣ ಅಂದರೆ ಆಕೆಗೂ ಬಹಳ ಪ್ರೀತಿ. ಎಂತಲೇ, ಇವನನ್ನು ತನ್ನ ಖಾಸಾ ಮೈಗಾವಲು ಪಡೆಯ ದಳವಾಯಿಯನ್ನಾಗಿ ನೇಮಿಸಿಕೊಂಡಿದ್ದಳು. ಲಢಾಯಿ ಮುಗಿದು, ಸಿಪಾಯಿಗಳೆಲ್ಲ ಅತ್ತಿತ್ತ ಚದುರಿಹೋದರೂ ನಮ್ಮ ರಾಯಣ್ಣನನ್ನೇನು ಮರೆಯಲಿಲ್ಲ, ರಾಣಿ. ಈಗಲೂ, ತಿಂಗಳಿಗೊಂದು ಸಾರಿ ಯಾದರೂ ಆಕೆಯನ್ನು ನೋಡದಿದ್ದರೆ ಸಮಾಧಾನವಿರುವುದಿಲ್ಲ ನಮ್ಮ ಹುಡು ಗನಿಗೆ. ಕೆಂಪು ಮೋರೆಯವರನ್ನ ಓಡಿಸಿ, ಕಿತ್ತೂರ ರಾಜ್ಯ ಮತ್ತೆ ಕಟ್ಟಲು ರಾಣಿ ತಯಾರಿ ನಡೆಸಿರುವಳೆಂದೂ ಸುದ್ದಿಯಿತ್ತು. ಆ ಗಂಗಪ್ಪ ಬಂದದ್ದು ಅದಕ್ಕಾಗಿಯೇ ಏನೋ ಯಾರು ಬಲ್ಲರು? ಅವರಿಬ್ಬರೂ ಕೂಡಿ ಹೊಂಗಲಕ್ಕೆ ಹೋದರೋ? ಅಥವಾ ಬೇರೆ ಯಾವ ಊರಿಗೆ ಹೋದರೋ?

ದಿನವೂ ಏಳುವ ಪದ್ಧತಿಯಂತೆ ನಸುಕಿನಲ್ಲೆದ್ದು, ಮುಖ ತೊಳೆದು ಕೊಳ್ಳಲು ಬಂದ ಸಿದ್ದಣ್ಣನಿಗೆ ಇರುಳಿನ ಘಟನೆಯೊಂದೂ ಗೊತ್ತಿದ್ದಂತೆ ಕಾಣ ಲಿಲ್ಲ. ಹಗಲೆಲ್ಲಾ ಹೊಲದಲ್ಲಿ ದುಡಿದು ಬಂದವರಿಗೆ ರಾತ್ರಿ ಎಚ್ಚರವಾಗು ವುದೂ ಕಠಿಣವೇ. ಸೊಸೆ ಸಂಗವ್ವನಂತೂ ಆರಿವುಗೇಡಿಯೇ. ತಿಂದು ಹಾಸಿಗೆ ಹಿಡಿದು ಬಿದ್ದಳೆಂದರೆ ಮನೆಯಲ್ಲಿ ತುಡುಗರು ನುಗ್ಗಿದರೂ ಎಚ್ಚರವಾಗುವು ದಿಲ್ಲ ಆಕೆಗೆ.

"ರಾಯಣ್ಣ ಎದ್ದನೇನವ್ವಾ? ತಂಬಿಗೆ ತಗೊಂಡು ಹೋದನೊ ಏನು?" ಎಂದು ವಿಚಾರಿಸಿದ ಸಿದ್ದಣ್ಣ.

"ಇಲ್ಲಪ್ಪಾ. ರಾತ್ರಿ ಯಾಕೋ ಚನಬಸೂ ಬಂದಿದ್ದ. ಏನು ಕೆಲಸವೋ ಏನೋ-ಬೆಳವಡಿಗೆ ಕರಕೊಂಡು ಹೋಗ್ಯಾನ. ಇವತ್ತು ನೀನೊಬ್ಬನೇ ನೇಗಿಲಾ ಹೊಡೀಬೇಕಂತ!"

"ಆರು ಎತ್ತಿನ ನೇಗಿಲಾ ಒಬ್ಬನೇ ಹೊಡಿಯೂದು ಹೆಂಗದು? ನೇಗಿಲು ಹಿಡಿಯುವವರಾರು? ಎತ್ತು ನೋಡಿಕೊಳ್ಳುವವರಾರು?"

"ಇವತ್ತೊಂದು ದಿವಸ ಒಂದು ಆಳು ತಗೊಳ್ಳಲ್ಲ ಸಿದ್ದಣ್ಣಾ?"

"ಹುಂ! ಆಳು ತಗೋತೀನಿ! ಆಳಿಗೆ ಕೊಡಲಿಕ್ಕೆ ರೊಕ್ಕ ಎಲ್ಲ್ಯದಾವ? ರಾಯಗ ಏನೇನೂ ಬುದ್ಧಿಯಿಲ್ಲ. ಆ ಚನಬಸೂ ಒಬ್ಬಾಂವ ಗಂಟುಬಿದ್ದಾನ ದೆವ್ವದಂಗ. ಹೊತ್ತಿಲ್ಲ. ಗೊತ್ತಿಲ್ಲ. ಯಾವಾಗ ಬೇಕಾದರೂ ಬಂದು ಕರ ಕೊಂಡು ಹೋಗತಾನ. ವಾರದಾಗ ನಾಕು ದಿನಾ ಹಿಂಗ ಅತ್ತಿತ್ತ ತಿರುಗಿ ಕೊಂತ ನಡೆದರೆ ಹೊಲಾಮನೀ ಕೆಲಸದ ಗತಿಯೇನು?"

ಸಿದ್ದಣ್ಣ ಹೇಳುತ್ತಿದ್ದುದೂ ನ್ಯಾಯವಾಗಿಯೇ ಇತ್ತು. ಬಡವರಾದ ನಾವು ನಮ್ಮ ಕೆಲಸಬಿಟ್ಟು ತಿರುಗುವುದು ಜಾಣತನವೆನಿಸುವಂತಿರಲಿಲ್ಲ. ಆದರೆ, ರಾಯಣ್ಣನಿಗೆ ತಿಳಿಯಬೇಕಲ್ಲ? ಅವನಿಗಂತೂ ಮನೆಯ ಕಡೆಗೆ ಸ್ವಲ್ಪವೂ ಲಕ್ಷ್ಯವಿರಲಿಲ್ಲ. ಗರಡಿಯ ಮನೆ, ಕತ್ತಿವರಸೆ, ಕುದುರೆ ಸವಾರಿ, ಲಥಾಯಿ ಇವುಗಳ ನಾದವೇ ಯಾವಾಗಲೂ. ಅವನಿಗೆ ಹದಿನೇಳು ವರ್ಷ ವಯಸ್ಸಾ ದಾಗಿನಿಂದಲೂ ಹೀಗೆಯೇ. ಹೊಲಬಕಿಯ ಕೆಲಸ, ಹೊಲಮನೆಯ ಕೆಲಸ ಎರಡನ್ನೂ ಸಿದ್ದಣ್ಣನೊಬ್ಬನೇ ಹೇಗೋ ತೂಗಿಸುತ್ತ ಬಂದಿದ್ದಾನೆ.

"ಸಂಸಾರದ ಜವಾಬ್ದಾರಿ ಇನ್ನೂ ತಿಳಿದಿಲ್ಲ ರಾಯಣ್ಣಗ. ನೀ ಸ್ವಲ್ಪ ಸಮಾಧಾನ ಮಾಡಿಕೊಂಡು ಹೋಗಬೇಕಪಾ ಸಿದ್ದಣ್ಣಾ."

"ಇನ್ನೂ ತಿಳಿಯುವುದು ಯಾವಾಗ ಅವಗ? ಅವನೇನ ಮೊಲೀ ಕುಡಿ ಯುವ ಕೂಸೇನ?" ಎಂದ ಸಿದ್ದಣ್ಣ.

"ಅವನ ಹೇಣತಿಯರೆ ನೆಟ್ಟಗೆ ಮನ್ಯಾಗ ಇದ್ದಿದ್ದರ, ರಾಯಣ್ಣನೂ ಹಾದಿಗೆ ಹತ್ತತಿದ್ದ. ಅಪ್ಪಣ್ಣಗೂ ತಿಳಿಯೂದಿಲ್ಲ, ವ್ಯಾಲಿಂದ ವ್ಯಾಲೆ ಬಂದು ಹುಡಗೀನ ಕರಕೊಂಡು ಹೋಗಿ ತಿಂಗ್ಯಾನ್‌ತಿಂಗ್ಳ ಮನ್ಯಾಗ್

ಇಟ್ಕೊಂತಾನೆ." ಎಂದೆ ನಾನು.

ಮೊಸರು ಕಡೆಯುತ್ತಿದ್ದ ಸಂಗವ್ವ ನಡುವೆ ಬಾಯಿ ಹಾಕಿ ನುಡಿದಳು :

"ಅಪ್ಪಣ್ಣ ಪಾಪ ಏನ ಮಾಡ್ಯಾನು ? ಮೊದಲು ನಿಂಗಿಗೇ ಬೇಕಾಗಿಲ್ಲ ಬಾಳೇವು !"

"ನೀ ಸುಮ್ಮನ ಬಾಯಿ ಹೊಲಕೊಂಡು ಕುಂದ್ರೇ, ನಿನಗ್ಯಾಕೆ ಬೇಕು ಅದೆಲ್ಲಾ !" ಎಂದು ಹೆಂಡತಿಯನ್ನು ಗದರಿಸಿ ಸಿದ್ದಣ್ಣ ತಂಬಿಗೆ ತೆಗೆದು ಕೊಂಡು ಹೊರಗೆ ಹೋದ.

ದನದ ಕೊಟ್ಟಗೆಯಲ್ಲಿನ ಸಗಣಿ ಮೂತ್ರ ಬಳಿದು ತಿಪ್ಪೆಗೆ ಹಾಕಿ, ಎಮ್ಮೆಗಳಿಗೆ ಹತ್ತೀಕಾಳು-ಹಿಂಡಿ ತಿನ್ನಿಸಿ, ಹಾಲು ಹಿಂಡಿಕೊಂಡು ಬರುತ್ತಿದ್ದಂತೆ ಮೊಮ್ಮಗ ಹನುಮ ಎದ್ದು ಬಂದ. ಅವನಿಗೆ ಹಾಲುಕೊಡುತ್ತಿದ್ದಂತೆ ಮತ್ತೆ ರಾಯಣ್ಣನ ನೆನಪಾಯಿತು. ಮನೆಯಲ್ಲಿದ್ದಾಗಲೆಲ್ಲ ಪ್ರತಿದಿನವೂ ಬೆಳಗ್ಗೆ ಮತ್ತು ರಾತ್ರಿ ಒಂದೊಂದು ತಂಬಿಗೆ ಹಾಲನ್ನು ಅವನೇ ಕುಡಿಯುತ್ತಿದ್ದ. ನಮ್ಮ ಮನೆಯಲ್ಲಿ ಬೇರೆ ಯಾವುದರ ಕೊರತೆಯಿದ್ದರೂ ಹಾಲು ಹೈನಕ್ಕೆ ಮಾತ್ರ ಎಂದೂ ಕೊರತೆಯಿರಲಿಲ್ಲ. ಸಣ್ಣ ಹುಡುಗನಾಗಿದ್ದಂದಿನಿಂದಲೂ ಹಾಲುಕುಡಿದೇ ಬೆಳೆದವನು ರಾಯಣ್ಣ. ಗರಡೀಮನೆಯಲ್ಲಿ ಕಸರತ್ತು ಮಾಡಿ ಬರುವುದು, "ಅವ್ವಾ ಹಾಲು" ಅಂತ ಕೂಗುವುದು. ನೊರೆ ನೊರೆಯಾದ ಹಾಲನ್ನು ಆತ ಗಟಗಟನೆ ಕುಡಿಯುತ್ತಿದ್ದಂತೆ ನನ್ನ ಮನಸ್ಸು ಆನಂದದಿಂದ ತುಂಬಿಬರುವುದು. ರಾಯಣ್ಣನಿಗೆ ಹಾಲು ಕೊಡದಿದ್ದ ದಿನವೆಲ್ಲಾ ನನಗೆ ಬರೀ ಪಳಹಳಿಯೆನಿಸುವುದು. ಸಿದ್ದಣ್ಣನಿಗೆ ಮಾತ್ರ ಹಾಲು ಅಂದರಾಗದು. ಚಿಕ್ಕವಯಸ್ಸಿನಿಂದಲೂ ಆತ ಹಾಗೆಯೇ. ಕೆಲವು ಹುಡುಗರು ಹಾಗೂ ಇರುತ್ತಾರೆ. ರೊಟ್ಟಿ-ಅಂಬಲಿ-ಮೊಸರು ಮಜ್ಜಿಗೆ ಇಷ್ಟಾದರೆ ಸಾಕು ಸಿದ್ದಣ್ಣನಿಗೆ. ಆದರೆ ಹನುಮ ಮಾತ್ರ ತನ್ನಪ್ಪನಂತಿರದೆ ರಾಯಣ್ಣನನ್ನೇ ಹೋಲುತ್ತಾನೆ. ಬೆಳಗ್ಗೆ ಎದ್ದೊಡನೆ ಅವನಿಗೂ ಹಾಲು ಬೇಕು. ಗರಡೀ ಸಾಧನೆಯಲ್ಲಿಯೂ ಅವನಿಗೆ ಪ್ರೀತಿಯಿದೆ. ಆದರೆ ಅದಕ್ಕೆ ಪುರುಸೊತ್ತು ಬೇಕಲ್ಲ ? ಮನೆಯಲ್ಲಿ ಬೇರೆ ಯಾರೂ ಇಲ್ಲವಾದ್ದರಿಂದ ಕುರಿ ಮೇಯಿಸುವ ಕೆಲಸ ಹನುಮನ ಕೊರಳಿಗೇ ಗಂಟು ಬಿದ್ದಿದೆ.

ನ್ಯಾಹರಿ ಮುಗಿಸಿ, ಎತ್ತು ಬಿಟ್ಟುಕೊಂಡು ಸಿದ್ದಣ್ಣ, ಹೊಲಕ್ಕೆ ಹೊರ

ಡಲು ಅಣಿಯಾಗುತ್ತಿದ್ದಂತೆ ಹಳಬ ಫಕೀರ ಓಡಿಬಂದ.

"ಯಾಕೋ ಫಕೀರಾ, ಏನ ಬಂದಿ?" ಎಂದು ನಾನೇ ವಿಚಾರಿಸಿದೆ. ಸಿದ್ದಣ್ಣ ಇಂಥ ಉಸಾಬರಿಗೆಲ್ಲ ಹೋಗುವವನಲ್ಲ. ಬೇರೆಯವರ ಸಂಗಡ ಆತ ಮಾತಾಡುವುದೂ ಕಡಿಮೆಯೇ.

"ರಾಯನ್ನ ಕುಲಕರಣೀರು ಕರ್ರ್ಯಾಕ ಹತ್ತ್ಯಾರ." ಎಂದ ಫಕೀರ.

"ಈಗೇನು ನಮ್ಮ ಪಾಳೀ ಇಲ್ಲಲ್ಲ? ಈಗ್ಯಾಕ ಕರೀತಾರೆ?"

"ಯಾಕೆಂದರ ಏನ ಹೇಳೋದು? ನೀನೇ ಮಾಮಲೇದಾರ ಇದ್ದಂಗೆ ಕೇಳತೀಯಲ್ಲ? ಹಳಬರೆಂದರೆ ನೂರಾಯೆಂಟು ಕೆಲಸ ಇರ್ತಾವ. ಕುಲಕರ ಣೀರು ಕರಿಯುವವರೇ."

ಅವನ ಒರಟು ಮಾತು ಕೇಳಿ ಸಿಟ್ಟುಬಂದರೂ ಅದನ್ನು ವ್ಯಕ್ತಗೊಳಿಸದೆ ಶಾಂತಸ್ವರದಲ್ಲಿಯೆ ಉತ್ತರವಿತ್ತೆ.

"ಈಗ ರಾಯಣ್ಣ ಇಲ್ಲ ಮನ್ಯಾಗ. ಬಂದ್‌ಮ್ಯಾಲ ಕಳಿಸಿ ಕೊಡ್ತೀನಿ."

"ಬಂದ ಮ್ಯಾಲಂದರ ಯಾವಾಗ? ಅಲ್ಲೀತನಕಾ ಅವನ ಹಾದೀ ನೋಡಿಕೊಂತ ಕುಂತಿರಬೇಕೇನ ಕುಲಕರಣೀರು? ಸರ್ಕಾರದ ಕೆಲಸಾ ಮಾಡೋವ್ರು ಯಾರು? ನಿಮ್ಮಪ್ಪ ಬರ್ತಾನೇನ?"

"ನಾಲಗೀ ಸಡಲು ಬಿಡಬ್ಯಾಡೋ ಫಕೀರಾ. ರಾಯಣ್ಣ ಬಂದ ಮ್ಯಾಲ ಕಳಿಸಿಕೊಡ್ತೀನಿ. ಸುಮ್ಮನ ಹೋಗು."

"ರಾಯಾ ಇಲ್ಲದಿದ್ದರೆ ಸಿದ್ದನ್ನ ಕಳಸಲ್ಲ? ಏ ಸಿದ್ದಾ, ಎಲ್ಲಿಗೆ ಹೊಂಟ್ಯೋ? ನಡಿಯಲ್ಲ ಚಾವಡಿಗೆ!" ಎಂದ ಫಕೀರ.

"ಅವಗ ಬರಾಣಾಗೂದಿಲ್ಲ. ಅವ ಗಳೇ ಹೊಡ್ಯಾಕ ಹೊಂಟಾನ. ರಾಯಣ್ಣ ಬಂದ ಮ್ಯಾಲ ಕಳಿಸ್ತೀನಿ. ಕುಲಕರಣಿಗೆ ಹೇಳು."

"ಅಲಲಲ! ಒಳ್ಳೇ ಹುಕುಂ ಕೊಟ್ಟಂಗ ಹೇಳತೀಯಲ್ಲ! ಎಲ್ಲಿ ಹೋಗ್ಯಾನವ ನಿನ್ನ ಬಂಟ ಮಗ, ಕಾಮಣ್ಣನಂಗ ಮೆರೆದಾಡಿಕೊಂತ?" ಎಂದು ಅಣಕದ ಧ್ವನಿಯಲ್ಲಿ ಕೇಳಿದ ಫಕೀರ.

ಸಿಟ್ಟು ತುಂಬಿ ತುಂಬಿ ಬರುತ್ತಿದ್ದಿತಾದರೂ ಅದನ್ನು ತಡೆದುಕೊಳ್ಳದೆ ಬೇರೆ ಉಪಾಯವಿರಲಿಲ್ಲ. ಫಕೀರ ಮೊದಲಿನಿಂದಲೂ ಹಾಗೆಯೆ. ರಾಯಣ್ಣನ ಬಗೆಗೆ ಅವನಿಗೆ ಬಹಳ ಹೊಟ್ಟೆಕಿಚ್ಚು. ಯುದ್ಧದಲ್ಲಿ ಕಾದಾಡಿ, ಬಂಟನೆಂದು

ಕೀರ್ತಿ ದೊರಕಿಸಿ, ಕಿತ್ತೂರ ರಾಣಿಯ ಪ್ರೀತಿಯ ಸಿಪಾಯಿಯೆಂಬ ಹೆಸರುಗಳಿಸಿಕೊಂಡಿದ್ದ ನನ್ನ ಮಗ ರಾಯಣ್ಣನನ್ನು ಕಂಡು ಮತ್ಸರ ವ್ಯಕ್ತಗೊಳಿಸುವವರೆಗೂ ಕೊರತೆಯಿಲ್ಲ, ಈ ಊರಲ್ಲಿ. ಪ್ರತಿಯೊಂದು ಕಡೆಗೂ ಇಂಥ ಜನರು ಇರುವವರೇ. ಇವರ ಕೈಲಿಂದಂತೂ ಏನೂ ಆಗುವಂತಿಲ್ಲ. ಶೂರ-ಧೀರರ ಬಗೆಗೆ ಸುಮ್ಮನೆ ಹೊಟ್ಟೆ ಉರಿ, ಅಷ್ಟೆ. ಫಕೀರನೂ ಅಂಥವರಲ್ಲೊಬ್ಬ.

"ಅವ ಕಾಮಣ್ಣನಂಗ ಮರೆಪರೇನ, ನಿನಗ್ಯಾಕಂತ ಅದೆಲ್ಲಾ ? ನಮ್ಮದಂತೂ ಈಗ ಪಾಳಿ ಇಲ್ಲ. ಕೆಲಸದ ಸರತಿ ಬಂದಾಗ ಬರತೀವಿ. ತಿಳೀತೂ?" ಎಂದು ಹೇಳಿದವಳೆ ಧಡಾರನೆ ಬಾಗಿಲು ಮುಚ್ಚಿಬಿಟ್ಟೆ. ರಸ್ತೆಯ ಮೇಲೆ ಕೋಲು ಅಪ್ಪಳಿಸಿ ತನ್ನ ಹಾದಿ ಹಿಡಿದ ಫಕೀರ. ಸಿದ್ದಣ್ಣನೂ ಹೊಲಕ್ಕೆ ನಡೆದ.

ಈ ಹಳಬಕಿಯ ಚಾಕರಿಯೊಂದು ಸಮಸ್ಯೆಯೇ ಆಗಿದೆ ನಮಗೆ. ಸಿದ್ದಣ್ಣನಿಗೆ ಅದನ್ನು ಮಾಡಲು ಬರುವುದಿಲ್ಲ. ನಮ್ಮ ಹಿರಿಯ ಇರುವವರೆಗೂ ಅವನೇ ಮಾಡುತ್ತಿದ್ದ. ಅವನ ತರುವಾಯ ರಾಯಣ್ಣ ಮಾಡುತ್ತ ಬಂದಿದಾನೆ. ಚನ್ನಮ್ಮರಾಣಿಯ ರಾಜ್ಯ ಇರುವತನಕ ನಮಗೇನೂ ತ್ರಾಸ ಇರಲಿಲ್ಲ. ಕುಂಪಣಿ ಸರಕಾರ ಬಂದಂದಿನಿಂದ ಈ ಕುಲಕರ್ಣಿಯ ಜೋರು ಬಹಳವಾಗಿದೆ. ನಮ್ಮ ಸರದಿ ಇಲ್ಲದಿದ್ದಾಗಲೂ ಕರೆಯಿಸಿ, ಗೋಳಾಡಿಸಬೇಕೆನ್ನುತ್ತಾನೆ. ಇರಲಿರಲಿ, ಎಷ್ಟು ದಿವಸ ನಡೆದೀತು ಇಂಥ ಅತ್ಯಾಚಾರ ?

ಹಾಗೆ ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತ ರೊಟ್ಟಿ ತಿಂದು, ಅಂಬಲಿ ಮಜ್ಜಿಗೆ ಕುಡಿದು, ದನಬಿಟ್ಟುಕೊಂಡು ತುರುಮಂದೆಗೆ ಹೊರಟೆ. ನೆರೆಮನೆಯ ಹುಡುಗನೊಬ್ಬ ತನ್ನ ದನಗಳನ್ನು ಅಟ್ಟಿಕೊಂಡು ನನ್ನ ಜೊತೆಯಲ್ಲಿಯೇ ಬರುತ್ತಿದ್ದ. ದನ ನೋಡಿಕೊಳ್ಳುವ ಕೆಲಸ ಅವನಿಗೆ ಬಿಟ್ಟು, ಗಿಡದ ನೆರಳಿನಲ್ಲಿ ಬೆಳವಡಿಯ ಹಾದಿಯ ಕಡೆಗೇ ದೃಷ್ಟಿಯಿಟ್ಟು ಕುಳಿತಿದ್ದಾಗ, ಯಾವುದೋ ಕೆಲಸಕ್ಕೆಂದು ಸಂಗೊಳ್ಳಿಗೆ ಬರುತ್ತಿದ್ದ ಬೆಳವಡಿಯ ತಂಗೆವ್ವ ಕಾಣಿಸಿಕೊಂಡಳು.

ತಂಗೆವ್ವ ವಿಧವೆ : ಅವರಿವರ ಹೊಲಗಳಲ್ಲಿ ಕೂಲಿನಾಲಿ ಮಾಡಿ ಜೀವಿಸುವ ಹೆಂಗಸು. ನಮ್ಮ ಬೀಗಿತಿ ಕಲ್ಲವ್ವನಿಗೂ ಈಕೆಗೂ ಬಹಳ ಗೆಳೆತನ. ತಂಗೆವ್ವನನ್ನು ವಿಚಾರಿಸಿದರೆ ಬೀಗರ ಮನೆಯ ಸುದ್ದಿಯೆಲ್ಲಾ ತಿಳಿದೀತು— ಎಂದುಕೊಳ್ಳುತ್ತ ಆಕೆಯನ್ನು ಕೂಗಿ ಕರೆದೆ.

ನಾನು ಕರೆಯದಿದ್ದರೂ ಆಕೆ ತಾನಾಗಿಯೇ ಬಂದು ಮಾತಿಗೆ ಕೂಡುತ್ತಿದ್ದಳೋ ಏನೋ. ಕೆಲವು ಹೆಂಗಸರಿರುತ್ತಾರೆ, ಮಾತು ಒಂದಿದ್ದರಾಯಿತು. ಊಟದ ನೆನಪೂ ಇರುವುದಿಲ್ಲ ಅವರಿಗೆ. ತಂಗೆವ್ವನೂ ಅಂಥವರಲ್ಲೊಬ್ಬಳು.

"ಏನ್ ಕೆಂಚವ್ವ, ಎಲ್ಲಾ ಚಲೋನ ?" ಎಂದು ಆರಂಭಿಸಿದಳು, ತಂಗೆವ್ವ.

"ಹಿಂಗ್ ಆದೀನಿ ನೋಡವ್ವ. ಏನ್ ಈ ಕಡೆ ಬಂದೆಲಾ ? ಇಂಥ ಬಿಸ್ಲಾಗ ?"

"ಅಯ್ ಬಿಡ ! ಇದೆಂಥ ಬಿಸ್ಲ ! ಇದಕಿಂತಾ ಕೆಟ್ಟ ಉರಿಬಿಸಿಲಾಗ ಹೊಲದಾಗ ಬೆವರ ಸುರಸ್ತೀವಲ್ಲ ನಾವು ! ಮೊನ್ನೆ ನಿಮ್ಮ ಗೌಡರ ಹೊಲದ ಕೋಲೀ ಆರಿಸಾಕ ಬಂದಿದ್ದರ ಕೂಲೀ ಬರೂದಿತ್ತು. ಇಸುಕೊಂಡು ಹೋಗೂಣಂತ ಬಂದಿವ್ನಿ "ಎಂದಳು ತಂಗೆವ್ವ.

"ಇವತ್ತು ಕೆಲಸಿಲ್ಲ ಅನ್ನು ಹಂಗಾರ."

"ಇಲ್ಲ—ವ್ವಾ. ಈಗ ಹೋಗಿ ದೌಡ ಬಂದಬಿಡ್ತೀನಂತ ಹೇಳಿಕೊಂಡು ಬಂದೀನಿ. ದುಡೀದಿದ್ದರೆ ನಡೆದೀತು ಹೆಂಗ ? ದುಡಿಯಾಕ ಹುಟ್ಟಿ ಬಂದ ಜೀವಾ ?" ಎಂದು ಹೇಳಿ, ಚಂಚಿ ಹೊರತೆಗೆದು ಎಲೆಅಡಕೆ ಹಾಕಿಕೊಂಡು ನನಗೂ ಅಷ್ಟು ಕೊಟ್ಟು ತಂಗೆವ್ವನೆಂದಳು.

"ನಿಮ್ಮ ಸೊಸಿ ಅಲ್ಲೇ ಉಳಿದಳಲ್ಲೇ ಕೆಂಚವ್ವಕ್ಕ ? ಕರಕೊಂಡು ಬರೂಯಿಚಾರ ಇಲ್ಲೇನೆ ?"

"ಯಿಚಾರ ಯಾಕಿಲ್ಲ? ಎರಡು ಸಾರಿ ಬಂದಿದ್ದಿನಲ್ಲ ನಾನೇ ಕರೀಲಾಕ? ಬಂದಾಗೊಮ್ಮೆ ಇಂದು ನಾಳೆ ಅಂತ ಏನಾರ ನೆವಾ ಹೇಳಿ ಬರಿಗೈಲೇ ಕಳಿಸಿ ಬಿಡ್ತಾರೆ. ನಮಗೂ ಸಾಕ್‌ಸಾಕಾಗಿ ಹೋಗ್ಯೆತಿ. ಅವರಿಗೆ ಮನಸಿಗೆ ಬಂದಾಗ ಕಳಿಸಲಿ ಅಂತ ಸುಮ್ಮನಿದ್ದು ಬಿಟ್ಟೇವಿ."

"ಅಯ್ಯ ! ಹಿಂಗ ಮಾಡಿದರೆ ಹೆಂಗs ಕೆಂಚವ್ವಕ್ಕ? ಕೊಟ್ಟ ಹೆಣ್ಣು ಕುಲದ ಹೊರಗೆ. ನಿಮ್ಮ ಸೊಸಿ ನಿಮ್ಮ ಮನಿಯಾಗಿರೂದು ಚಂದ. ತವರು ಎಷ್ಟು ದಿನದ್ದು ಹೇಳು. ಹೆಣ್ಮಕ್ಕಳು ಹಂಗ ಬಾಳಾದಿನಾ ತವರಿನಾಗ ಇರೋದೂ ಚಲೋದಲ್ಲ ನೋಡವ್ವ."

ನನ್ನನ್ನು ಪರೀಕ್ಷೆ ಮಾಡುವುದಕ್ಕಾಗಿಯೇ ತಂಗೆವ್ವ ಅಂಥ ಮಾತ ನ್ನಾಡುತ್ತಿದ್ದುದು ಸ್ಪಷ್ಟವಾಗಿತ್ತು. ನನ್ನ ಬಾಯಿಂದ ಏನು ಬರುವುದೋ ತಿಳಿದುಕೊಂಡು, ಅದಕ್ಕೆ ಇನ್ನಷ್ಟು ಉಪ್ಪುಖಾರ ಹಚ್ಚಿ ಆಕೆ ಕಲ್ಲವ್ವನೆದುರು ವರದಿಯನ್ನೊಪ್ಪಿಸುವುದು ಖಂಡಿತವಾಗಿತ್ತು. ಎಂತಲೇ, ನಾನು ಯೋಚಿಸಿ ಯೋಚಿಸಿ ಬಲು ಎಚ್ಚರಿಕೆಯಿಂದ ಮಾತನಾಡಿದೆ.

"ನೀ ಹೇಳೂದೆಲ್ಲಾ ಖರೆ ತಂಗೆವ್ವಕ್ಕ. ಆದರೆ ನಾವೇನು ಮಾಡೋಣ? ನಮ್ಮ ಕಡೆ ಏನ ತಪ್ಪೈತಿ? ಕರಿಯಾಕ ಹೋದರೂ ಅವರು ಕಳಿಸದಿದ್ದರೆ ನಾವೇನ ಮಾಡೋಣ ?"

"ಮಗಳು ಸಂಸಾರ ಮಾಡೂದು ಅವರಿಗೇನ ಬ್ಯಾಡಾಗೈತೇನ? ಅವರು ಕಳಿಸದಿರಬೇಕಾದರೆ ಏನೋ ಕಾರಣ ಇರಾಕಬೇಕು."

"ಏನ ಕಾರಣನೋ ಮಾದೇವನೇ ಬಲ್ಲ. ನಮಗಂತೂ ತಿಳಿಯೋ ದಿಲ್ಲವ್ವ. ನಿನ್ನ ಮುಂದೆ ಏನಾರ ಆಡಿರಬೇಕಲ್ಲ ಕಲ್ಲವ್ವ ?"

"ಅವಳಿಗಿರೂ ಬುದ್ಧಿ ಎಷ್ಟು ಅನ್ನೂದು ನಿನಗೂ ಗೊತ್ತೇಐತಲ್ಲ ಕೆಂಚ ವ್ವಕ್ಕ ? ನಾ ಹೋದಾಗೆಲ್ಲಾ ಅದೂ ಇದೂ ಇದ್ದದ್ದೊಂದು, ಇಲ್ಲದ್ದೊಂದು ಒದರೇ ಒದರುತಾಳೆ ಮಳೆಗಾಲದ ಕಪ್ಪೆ ಒದರಿದಂಗ. ಅದೊಂದು ಹುಚ್ಚಿ ಅಂತ ನಾನೇನ ಆಕೆಯ ಮಾತು ಲಕ್ಷ್ಯದಾಗ ತಗೊಳ್ಳೂದಿಲ್ಲ. ನಿಮ್ಮ ರಾಯಣ್ಣಗೇನೋ ಸಂಸಾರದಾಗ ಮನಸಿಲ್ಲಂತಲ್ಲ?" ಎಂದು, ತಡೆತಡೆಯುತ್ತ ಮಾತನಾಡಿದಳು ತಂಗೆವ್ವ.

"ಮನಸಿಲ್ಲಂತ ಅಂದರೆ ಅದರರ್ಥ ಏನ ? ಏನಂತ ತಿಳುಕೊಂಡಾಳೆ ಆ ಕಲ್ಲಿ ?" ನಾನು ಸಿಟ್ಟಿನಿಂದಲೇ ಕೇಳಿದೆ

"ನೋಡಿದ್ಯಾ, ನಿನಗೆ ಸಿಟ್ಟು ಬಂತು. ನಾ ನಿನಗೆ ಅದೆಲ್ಲಾ ಹೇಳಿದ್ದೇ ನನ್ನ ತಪ್ಪಾತು...."

"ನಿಂದೇನ ತಪ್ಪು ಇದರಾಗ ? ಕುಂಡ್ರು....ಕುಂಡ್ರು....ರಾಯಣ್ಣಗೆ ಸಂಸಾರದಾಗ ಮನಸಿಲ್ಲಂದರೆ ಕೇಳಿದವ್ರು ನಾಕುಮಂದಿ ಏನಂದಾರು? ನೀನೆ ಯಿಚಾರ ಮಾಡು."

"ರಾಯಣ್ಣ ಮನ್ಯಾಗ ಇರೂದಿಲ್ಲಂತಲ್ಲ?"

"ಇದೊಂದು ಹೊಸಾದೇ ಹುಟ್ಟಿಸ್ಯಾರಂದಂಗಾತು. ಮನ್ಯಾಗಿರದೆ ಎಲ್ಲಿಗೆ ಹೋಗ್ತಾನೆ?"

"ಅದೊಂದು ತಿರುಗಲ ತಿಪ್ಪ ಐತ್ಯಲ್ಲ ಅಮಟೂರಿಂದು? ಹಗಲೂ ರಾತ್ರಿ ಅವನ ಜೋಡೀ ಮಾಡಿಕೊಂಡು ತಿರುಗೇ ತಿರುಗುತಾನಂತೆ?"

"ಏನ್ಯೋ ಜೀವಕ್ಕೆ ಬ್ಯಾಸರಾದಾಗ ಅಡ್ಡ್ಯಾಡತಿದ್ದಾರು. ಹಂಗಂತ ಯಾವಾಗಲೂ ತಿರುಗುತಾಲೇ ಇರತಾರೆಂದರೆ ಮೂರ್ಖರಂದಾರು."

"ಏನೋವ್ವ, ಕಲ್ಲವ್ವ ಅಂತೂ ಹಂಗಂತಾಳೆ. ನನಗಾರೆ ಏನ ಗೊತ್ತು. ಅಂತೂ ಏನರೆ ಮಾಡಿ ಆದಷ್ಟು ಲಗೂ ಸೊಸೀನ್ನ ಕರಕೊಂಡು ಬಂದು ಮನ್ಯಾಗಿಟ್ಕೊಳ್ರಿ. ನಾ ನಡೀತೀನಿ. ಹೊತ್ತಾತು" ಎಂದು ಹೇಳಿ ತಂಗೆವ್ವ ಎದ್ದು ನಿಂತಳು.

"ನೀನೇ ಕೇಳು ಹಂಗಾರೆ ಕಲ್ಲವ್ವನ. ಕಳಿಸಾಕ ತಯಾರಿದ್ದರೆ ಇಂದೇ ಬರ್ತೀನಿ ಕರೀಲಾಕ."

ಹೊರಟಿದ್ದ ತಂಗೆವ್ವ ತಡೆದು ನಿಂತು ಮತ್ತೆ ನನ್ನ ಹತ್ತಿರ ಬಂದು ಹೇಳಿದಳು:

"ಇನ್ನೂ ಒಂದು ಮಾತು ಅಂತಿದ್ದಳು ಕಲ್ಲವ್ವ. ಸೊಸಿಯ ಮೈಮ್ಯಾಲ ಹಾಕಿದ್ದ ವಸ್ತಾವಡವೀ ಈಗ ಇಲ್ಲಂತಲ್ಲ?"

"ಹೌದು, ಲಢಾಯಿಯ ಕಾಲಕ್ಕೆ ಏನೋ ಪ್ರಸಂಗ ಬಂತು, ಮಾರಿದ್ದೆವು. ಮತ್ತೆ ಮಾಡಿಸಾಕಾಗಿಲ್ಲ."

"ಆ ವಸ್ತಾವಡವೀ ತಗೊಂಡು ಬಂದ್ರೇನೇ ಮಗಳ್ನ ಕಳಿಸ್ತಾರಂತೆ ಅವ್ರು, ಗೊತ್ತಾತಾ?"

"ಎಂದೋ ಗೊತ್ತಾಗೈತಿ. ಅವರಂಥಾ ಆಸೆಬುರುಕ ಮಂದಿ ಈ ನಾಡಿನಾಗ ಎಲ್ಲೂ ಇಲ್ಲ. ನಾವು ಹಾಕಿದ ವಡವೀ ನಾವು ಮಾರಿದರೆ ಅವರದೇನು ಗಂಟು ಹೋದಂಗಾತು? ಚಲೋಕಾಲ ಬಂದಾಗ ಮತ್ತೆ ಮಾಡಿಸಿ ಹಾಕತೀವಿ. ಈಗೇನ ಅವರಿಗೆ ಮಗಳ ಬಾಳೇವು ಬೇಕೋ, ವಸ್ತಾವಡವೀನೇ ಬೇಕೋ?"

"ಏನೋವ್ವ, ನಾನೂ ಬಾಳ ಹೇಳಿ ನೋಡಿದ್ನಿ ಕಲ್ಲವ್ವಗೆ. ವಡವಿಗಿಡವಿ ದೊಡ್ಡದಲ್ಲ ಕಲ್ಲೀ! ಬಂಗಾರದಂಥಾ ಅಳಿಯ ಸಿಕ್ಕಾನೆ. ಹುಡುಗೀನ ಮನ್ಯಾಗಿಟ್ಕೊಂಡು ಮಗಳ ಬಾಳೇವು ಹಾಳಮಾಡಬ್ಯಾಡಂತ ಕೈಮುಗಿದು

ಹೇಳಿದ್ನಿ. ಆದರೆ, ಆಕಿಯ ಬುದ್ಧಿ ನಿನಗೂ ಗೊತ್ತೇ ಐತಲ್ಲ ? ಒಂದ್ ಹಿಡ ದಳಂದ್ರೆ ಮುಗೀತ್. ಅದ್ಯ ಆಗಬೇಕು."

"ಆಕಿಯ ಮನಸಿನಾಗಿದ್ದರೆ ಹಂಗೇ ಆಗಲೇಳು. ಯಾವಾಗ ಕಳಿಸ್ತಾಳೊ ಕಳಿಸಲಿ." ಎಂದಿಷ್ಟೇ ಹೇಳಿ ನಾನೂ ಸುಮ್ಮನಾದೆ.

ಸಂಜೆ ಮನೆಗೆ ಹಿಂತಿರುಗಿ ಬರುವಾಗಲೂ ಮನಸ್ಸಿನಲ್ಲಿ ಅದೇ ಯೋಚನೆ ಸುತ್ತುತಿತ್ತು. ದನಗಳನ್ನು ಕೊಟ್ಟಿಗೆಯಲ್ಲಿ ಕಟ್ಟಿ ಅಡಿಗೆಯ ಮನೆಗೆ ಬಂದು, ಒಲೆಯಲ್ಲಿ ಉರಿ ಹೊತ್ತಿಸುತ್ತಿದ್ದ ಸಂಗವ್ವನನ್ನು ವಿಚಾರಿಸಿದೆ.

"ರಾಯಣ್ಣ ಬಂದನೇನೆ ?"

"ಇಲ್ಲ ಅತ್ತಿ. ಇನ್ನೂ ಬಂದಂಗಿಲ್ಲ" ಎಂದು ಬೇಸರದ ಧ್ವನಿಯಲ್ಲಿಯೇ ಉತ್ತರವಿತ್ತಳು ಸಂಗವ್ವ.

"ಹೊಲದಿಂದ ನೀ ಯಾವಾಗ ಬಂದಿ ? ಉರಿ ಹಚ್ಚಾಕ ಇಷ್ಟ್ಯಾಕ್ ತಡಾ ಆತು ? ಇನ್ನು ಅಡಿಗಿ ಆಗೂದು ಯಾವಾಗ? ಗಂಡಸ್ರು ಈಗ ಹಸಿದು ಬರ್ತಾರೆ."

"ನಾನಾರ ಏನ್ಮಾಡಲಿ ಅತ್ತಿ ? ಗಳೇಕ್ಕ ಕರೆದುಕೊಂಡಿದ್ದ ಆಳುಮಗ ಮುಳ್ಳು ತುಳುದು ಕುಂಟ್ಕೊಂತ ಕೂತ. ಇಷ್ಟೊತ್ತು ನಾನೇ ಅದೂ ಕೆಲಸಾ ಮಾಡಿ ಬಂದಿನಿ ನಿಂಗಿಯಾದ್ರೂ ಇದ್ದಿದ್ದರೆ ಮನೀಕೆಲಸ ನೋಡಿಕೋತಿದ್ಲು. ನಾನೊಬ್ಬಾಕೇ ಎಷ್ಟಂತ ದುಡೀಲಿ ?"

ಸಂಗವ್ವ ಹೇಳುವುದೂ ನ್ಯಾಯವಾಗಿಯೇ ಇತ್ತು. ಅವಳ ಮಾತಿನಿಂದಾಗಿ ನನಗೆ ಆಕೆಯ ಬಗೆಗೇನು ಸಿಟ್ಟುಬರಲಿಲ್ಲ. ಸಿಟ್ಟುಬಂದದ್ದು ಕಲ್ಲವ್ವನ ಬಗೆಗೆ. ವಿನಾಕಾರಣ ಮಗಳನ್ನು ಮನೆಯಲ್ಲಿಯೇ ಇಟ್ಟುಕೊಂಡು ನಮಗೆ ತೊಂದರೆ ಕೊಡುತ್ತಿರುವಳಲ್ಲ !

ಬಿರುಬಿಸಿಲಲ್ಲಿ ಹೊಲದಲ್ಲಿ ದುಡಿದು ಬಂದಿದ್ದ ಹಿರಿಯ ಸೊಸೆಯ ಮೇಲೆ ಕನಿಕರ ಉಕ್ಕಿ ಬಂದಿತು.

"ನೀ ಏಳು ಸಂಗವ್ವ. ನಾನೇ ಅಡಿಗೀ ಮಾಡ್ತೀನಿ ಇವತ್ತು. ನೀ ಹೋಗಿ ದನಗಳ ಮೇವು ಮಿಡಿ ನೋಡಿಕೋ."

"ಬಿಸಲಾಗ ಗುಡ್ಡಾಗಿಡ್ಡಾ ತಿರುಗಿ ದಣಿದು ಬಂದಿರ್ತೀ ಅತ್ತೀ ! ಈಗ ಮತ್ತೆ ಒಲೀ ಮುಂದೆ ಏನ್ ಕುಂಡ್ರುತೀ ? ಬ್ಯಾಡ....ಬ್ಯಾಡ" ಎಂದಳು ಸಂಗವ್ವ.

"ಇರಲಿ ಏಳೇ," ಎಂದು ಹೇಳಿ ಬಲವಂತದಿಂದಲೇ ಆಕೆಯನ್ನೆಬ್ಬಿಸಿ ಅಡುಗೆಗೆ ಕುಳಿತುಕೊಂಡೆ. ಕಿರಿಯ ಸೊಸೆಯನ್ನು ಕರೆದುತರುವುದು ಹೇಗೆ? ಎಂಬ ಯೋಚನೆ ಆಗಲೂ ಕೊರೆಯುತ್ತಲೇ ಇತ್ತು ಮನಸ್ಸನ್ನು.

ತಾಯಿಗೆ ತಿಳಿಸಿದ ಪ್ರಕಾರ ರಾತ್ರಿಯೊಳಗಾಗಿ ಸಂಗೊಳ್ಳಿಗೆ ಬಂದು ಸೇರಿಕೊಂಡೆ. ಹಳ್ಳಿಯೆಲ್ಲವೂ ಶಾಂತವಾಗಿ ನಿದ್ರಿಸುತ್ತಿತ್ತು. ನಾಯಿಗಳ ಬಗುಳುವಿಕೆಯನ್ನು ಬಿಟ್ಟರೆ ಬೇರೆ ಸದ್ದಿರಲಿಲ್ಲ. ನಮ್ಮ ಓಣಿಯಲ್ಲಿ ನಾನು ಅಡಿಯಿರಿಸುತ್ತಲೂ ಅಷ್ಟುದೂರದಿಂದಲೂ ನನ್ನ ವಾಸನೆ ಹಿಡಿದು ಸಂಭ್ರಮ ದಿಂದ ಓಡುತ್ತ ಬಂದು ನನ್ನ ಕಾಲು ನೆಕ್ಕತೊಡಗಿತು ಹುಲಿ. ಪ್ರೀತಿಯಿಂದ ಅದರ ಬೆನ್ನು ಚಪ್ಪರಿಸುತ್ತ ನಾನು ಮನೆಯ ಬಳಿ ಬಂದಾಗ, ಎದುರು ಮನೆಯ ಕಟ್ಟೆಯ ಮೇಲೆ ಯಾರೋ ಮಲಗಿಕೊಂಡಿದ್ದುದು ಕಾಣಿಸಿತು. ಅಕ್ಕಣ್ಣನವರ ತಿಮ್ಮನಾಯಕನ ಮನೆ ಅದು. ಕಟ್ಟೆಯ ಮೇಲೆ ಮಲಗುವ ಪದ್ಧತಿಯನ್ನು ಆತನೆಂದೂ ಇಟ್ಟುಕೊಂಡಿರಲಿಲ್ಲ. ನನ್ನ ಹೆಜ್ಜೆಯ ಸಪ್ಪಳ ದಿಂದಾಗಿ ಅಲ್ಲಿ ಮಲಗಿದ್ದವರಿಗೆ ಎಚ್ಚರವಾಗಿರಬೇಕು. ಮಲಗಿದ್ದ ವ್ಯಕ್ತಿ ಮುಸುಕು ತೆಗೆದು, ಕ್ಷಣಮಾತ್ರ ನನ್ನತ್ತ ನೋಡಿ ಮತ್ತೆ ಮುಸುಕೆಳೆದು ಬಿದ್ದು ಕೊಂಡಿತು. ಆತ ತಿಮ್ಮನಾಯಕ ಹೌದೋ ಅಲ್ಲವೋ ಎಂಬುದೇನೂ ಗೊತ್ತಾ ಗಲಿಲ್ಲ.

ನಮ್ಮ ಮನೆಗೆ ಬಂದು ಹೋಗುವ ಜನರು ಯಾರೆಂಬುವನ್ನು ತಿಳಿದು ಕೊಂಡು ವರದಿಯೊಪ್ಪಿಸಲು ಕುಲಕರಣಿಯೇ ಈತನನ್ನು ನೇಮಿಸಿರಲಿಕ್ಕಿಲ್ಲ ವಷ್ಟೆ ? ಎಂದು ಯೋಚಿಸುತ್ತ ನಾನು ಅವ್ವನನ್ನು ಕೂಗುತ್ತಿದ್ದಂತೆ, ಅಷ್ಟು ಹೊತ್ತಿನ ವರೆಗೂ ನನ್ನ ಹಾದಿ ನೋಡುತ್ತ ಎಚ್ಚರವಾಗಿಯೇ ಇದ್ದಂತಿದ್ದ ಅವ್ವ ಥಟ್ಟನೆ ಬಂದು ಬಾಗಿಲು ತೆಗೆದಳು. ಎದುರಿನ ಮನೆಯ ಮುಂದೆ ಮಲಗಿದ್ದ ವ್ಯಕ್ತಿ ಆಕೆಯ ದೃಷ್ಟಿಯನ್ನು ಸೆಳೆದುಕೊಂಡಿರಬೇಕು. ಎಂತಲೇ, ಬಾಗಿಲು ಮುಚ್ಚಿ ಅಗುಳಿ ಹಾಕುತ್ತಲೂ ಅವ್ವನೆಂದಳು :

"ಎಂದೂ ಹೊರಗೆ ಮಲಗದಿದ್ದ ತಿಮ್ಮ ಇವತ್ತೇನ ಬಗೆ ಮಲಗ್ಯಾನೋ ಏನೋ ?"

"ಅವ ತಿಮ್ಮಣ್ಣ ಹೌದೋ ಅಲ್ಲೋ ಯಾರಿಗ್ಗೊತ್ತು ?" ಎಂದೆ ನಾನು. "ನಾನಿಲ್ಲದಾಗ ಏನಾದ ನಡೆದಿತ್ತೇನವ್ವ ?"

"ನಿನ್ನೆ ಮುಂಜಾನೆ ಕುಲಕರಣಿ ಹೇಳಿಕಳಿಸಿದ್ದನಪಾ. ಫಕೀರ ಬಂದು ಬಾಯಿಗೆ ಬಂದಂಗೆ ಮಾತಾಡಿದ. ಅವಗೂ ಬಾಳ ಸೊಕ್ಕು ಬಂದೈತಿ."

"ಕುಲಕರಣಿ ಛೂ ಬಿಟ್ಟಿರಬೇಕು. ಇದು ಬೊಗಳುತ್ತೈತಿ. ಅವನ ಮಾತಿಗೇನು ಲಕ್ಷ್ಯಕೊಡಬೇಕಾಗಿಲ್ಲ ಅವ್ವ. ಏನ ಹೇಳಿ ಕಳಿಸಿದ್ದ ಕುಲಕರಣಿ?"

"ಏನೋ ಕೆಲಸ ಇತ್ತಂತೆ. ನಿನ್ನ ಕರ್‍ಕೊಂಡ್ ಬಾ ಅಂತ ಕಳಿಸಿದ್ದ."

"ಇನ್ನೊಂದು ತಿಂಗಳತನಕಾ ನಮ್ಮ ಕೆಲಸದ ಪಾಳೀ ಇಲ್ಲ. ಆದರೂ ಹಿಂಗ ಕಾಡತಾನ ಕುಲಕರಣಿ. ಅವಗೊಮ್ಮೆ ಬುದ್ಧಿ ಕಲಿಸಾಕಬೇಕು ಅವ್ವ."

"ಏಳಪಾ. ಊಟಾ ಮಾಡೇಳು. ನೀ ಬಂದೇ ಬರುತೀ ಅಂತ ಎಲ್ಲಾ ತಯಾರ ಮಾಡಿಟ್ಟೇನಿ" ಎಂದಳು ಅವ್ವ.

"ಊರಿಂದ ಹೊರಡುವಾಗ ಹೊಟ್ಟೀತುಂಬ ಉಂಡು ಬಂದೀನವ್ವ. ಈಗೇನ ಹಸಿವಿಲ್ಲ. ನಿದ್ದಿ ಬಂದೈತಿ. ಮಲಗಿಕೊಂಡು ಬಿಡ್ತೇನಿ," ಎಂದು ನಾನು ಹೇಳುತ್ತಿದ್ದಂತೆ ಸಿದ್ದಣ್ಣ ಕಣ್ಣುಜ್ಜಿಕೊಳ್ಳುತ್ತ ಎದ್ದು ಬಂದ.

"ಈಗ ಬಂದೇನೋ ರಾಯಾ ?"

"ಹೌದಣ್ಣ. ನೀನ್ಯಾಕೆ ನಿದ್ದೀಬಿಟ್ಟು ಎದ್ದು ಬಂದಿ ?"

"ಎಲ್ಲೀ ನಿದ್ದೀ ? ಏನ್ ಕಥಿ ?" ಎಂದು ಗೊಣಗುತ್ತ ಸಿದ್ದಣ್ಣ ಪಡಸಾಲೆಯಲ್ಲಿ ಗೋಡೆಗೊರಗಿ ಕುಳಿತುಕೊಂಡು ಚಿಲುಮಿಗೆ ತಂಬಾಕು ತುಂಬಿ ಸೇದುತ್ತ ಮಾತನಾಡಿದ :

"ಕಾಲಮಾನ ನೆಟ್ಟಗಿಲ್ಲ ರಾಯಾ. ಹೀಂಗ ರಾತ್ರಿ ಅಪರಾತ್ರಿ ತಿರುಗೋದು ಚಲೋ ಅಲ್ಲ ನೋಡು."

"ನೀ ಹೇಳೂದು ಖರೇ ಅಣ್ಣ. ಆದರ, ಯಾವಾಗಾದರೊಮ್ಮೆ ಏನೋ ಕೆಲಸ ಬರ್‍ತಾವ. ಹೋಗಾಕಬೇಕಾಗತೈತಿ."

"ನಿನಗೇನ ನಾ ಬ್ಯಾಡನ್ನೂದಿಲ್ಲ. ಆದರೆ, ಮನೀಕಡೆ ಒಂದೀಟು ಲಕ್ಷ್ಯ ಇರಲಿ ಅಂತೀನಿ. ಈ ಕಡೆ ಕುಲಕರಣೀದೊಂದು ಕಾಟಾ. ನಾನೊಬ್ಬನೇ ಹೊಲಾ ಮನೀ ಹಳಬಕೀ ಕೆಲಸಾ ಎರಡೂ ಹೆಂಗ ನೋಡಿಕೊಳ್ಳಿ ?"

ಅದೂ ನಿಜವೆ. ಅಣ್ಣನೊಬ್ಬನಿಂದಲೇ ಎಲ್ಲ ಕೆಲಸವೂ ಆಗುವಂತಿರಲಿಲ್ಲ. ಎಂತಲೇ, ನಾನೂ ಅವನೊಡನೆ ವಾದಕ್ಕೆ ನಿಲ್ಲದೆ ಮೌನವಾಗಿದ್ದೆ.

ಅಣ್ಣನೂ ಹೆಚ್ಚಾಗಿ ಮಾತನಾಡಲಿಲ್ಲ. ತಂಬಾಕು ಸೇದಿ ಮುಗಿಸಿ, ಮತ್ತೆ ಮಲಗಿಕೊಳ್ಳಲು ಹೊರಟುಹೋದ.

ನಾನೂ ನನ್ನ ಕೋಣೆಗೆ ಬಂದು ಮಲಗಿ ನಿದ್ರಿಸಲು ಪ್ರಯತ್ನಿಸಿದೆ. ಆದರೆ ವಿಚಾರಗಳ ತಾಕಲಾಟದಿಂದಾಗಿ ಬೇಗ ನಿದ್ರೆ ಬರಲಿಲ್ಲ. ಸರದಾರ ವೀರಪ್ಪನವರು, ಗಂಗಾಧರ, ಕರವೀರ, ಆ ಕೊಳ್ಳ, ಅಲ್ಲಿನ ಝರಿ, ಅಲ್ಲಿನ ಊಟದ ರುಚಿ–ಇದೆಲ್ಲ ನೆನಪಿಗೆ ಬಂದು ಮನಸ್ಸು ಆ ಕಡೆಗೆ ಧಾವಿಸುತ್ತಿತ್ತು. ಸೋಮವಾರ ಚೆನ್ನಮ್ಮ ರಾಣಿಯವರನ್ನು ಕಾಣುವುದಿದೆ. ನಾವು ಅಯ್ಯಗಳ ವೇಷ ಹಾಕಿಕೊಂಡು ಹೋದರೂ ಮೂರು ಜನರನ್ನೂ ಏಕಕಾಲಕ್ಕೆ ಒಳಗೆ ಬಿಡುವರೋ ಇಲ್ಲವೋ ? ಎಂಬ ಅನುಮಾನ ಬೇರೆ.

ರಾತ್ರಿ ನಿದ್ರೆಯಿರಲಿಲ್ಲವಾದುದರಿಂದ ಬೆಳಗ್ಗೆ ಬೇಗ ಏಳಲು ಶಕ್ಯವಾಗ ಲಿಲ್ಲ. ನಾನು ಏಳುವುದರೊಳಗಾಗಿ ಸಿದ್ದಣ್ಣ ಎತ್ತು ಬಿಟ್ಟುಕೊಂಡು ಹೊಲಕ್ಕೆ ಹೋಗಿದ್ದ. ನ್ಯಾಹರೆ ಮುಗಿಸಿಕೊಂಡು ನಾನೂ ಹೊಲಕ್ಕೆ ಹೊರಡಲು ಅಣಿ ಯಾಗುತ್ತಿದ್ದಂತೆ ಬಾಗಿಲಲ್ಲಿ ಫಕೀರನ ಧ್ವನಿ ಕೇಳಿಬಂದಿತು.

"ಅದೀಯೇನೋ ರಾಯಾ" ಎನ್ನುತ್ತಾ ಕೋರಿಬಡಿಗೆಯ ಸಪ್ಪಳ ಮಾಡುತ್ತ ಒಳಗೆ ಬಂದ ಫಕೀರ.

"ಅದೀನಿ, ಬಾ. ನ್ಯಾರೆ ಮಾಡೂಣು."

"ಬ್ಯಾಡ ಮಾರಾಯಾ, ಇದೇ ಈಗ ಉಂಡು ಬಂದೀನಿ. ಗಡಾಣೆ ನ್ಯಾರೇ ಮುಗಿಸಿ ಹೊಂಡಪಾ. ಕುಲಕರಣೇರು ಕರ್‍ಯಾಕ ಹತ್ಯಾರ."

"ಏನ್ ಕೆಲ್ಸ ಫಕೀರಾ ?"

"ಯಾಂಬಲ್ಲ-? ಗಡಾನs ಬಂದು ಭೆಟ್ಟಿಯಾಗಬೇಕಂತ ಹೇಳ್ಯಾರ."

ನಾನು ರಾತ್ರಿ ಮನೆಗೆ ಬಂದ ಸುದ್ದಿಯನ್ನು ಯಾರೋ ತಿಳಿಸಿರಬೇಕು ಕುಲಕರಣಿಗೆ. ಇಲ್ಲವಾದರೆ, ನಾನು ಮನೆಯಲ್ಲಿರುವ ವಿಷಯ ಅವನಿಗೆ ಹೇಗೆ ಗೊತ್ತಾಗುತ್ತದೆ?- ಎಂದು ಯೋಚಿಸುತ್ತ ನ್ಯಾಹರೆ ಮುಗಿಸಿ, ರುಮಾಲು ಸುತ್ತಿಕೊಂಡು ಚಾವಡಿಗೆ ಹೊರಟೆ.

ಗೌಡ-ಕುಲಕರಣಿಯರಿಬ್ಬರೂ ಆ ವೇಳೆಗಾಗಲೆ ಚಾವಡಿಗೆ ಬಂದು, ದಿಂಬುಗಳಿಗೊರಗಿ ಕುಳಿತುಕೊಂಡಿದ್ದರು. ಪರ್ವತಗೌಡ ಮುದುಕ. ಸ್ವಭಾ ವತಃ ಸಂಭಾವಿತ. ಎಂತಲೇ ಊರಿನ ಕಾರಭಾರವನ್ನೆಲ್ಲ ಕುಲಕರಣಿಗೆ ಬಿಟ್ಟು

ಕೊಟ್ಟು ಹರಾ ಶಿವಾ ಎನ್ನುತ್ತ ಸ್ವಸ್ಥವಾಗಿದ್ದ. ಕುಲಕರಣಿ ಬಾಳಪ್ಪ ಮಾತ್ರ ಮೊದಲಿನಿಂದಲೂ ದರ್ಪದ ವೃತ್ತಿಯವನೇ. ಚನ್ನಮ್ಮ ರಾಣಿಯವರ ರಾಜ್ಯ ವಿರುವವರೆಗೂ ಅವನ ಆಟ ನಡೆಯುತ್ತಿರಲಿಲ್ಲ. ಆದರೆ, ಆ ರಾಜ್ಯ ಹೋಗಿ, ಕುಂಪಣಿ ಸರ್ಕಾರ ಬಂದು, ಕೃಷ್ಣರಾವ್, ರಾಮರಾವ್ ಮೊದಲಾದವರ ಕೈಯಲ್ಲಿ ಅಧಿಕಾರ ಬಂದಂದಿನಿಂದ ಕುಲಕರಣಿಯ ದರ್ಪವೂ ದಿನದಿಂದ ದಿನಕ್ಕೆ ಬೆಳೆಯುತ್ತ ಬರುತ್ತಿತ್ತು.

ಪದ್ಧತಿಯ ಪ್ರಕಾರ ನಾನು ಗೌಡ-ಕುಲಕರಣಿಯರಿಗೆ ಮುಜುರೆ ಮಾಡಿ ನಿಲ್ಲುತ್ತಲೂ, ಕೈಯಲ್ಲಿದ್ದ ಲೆಕ್ಕಣಿಕೆಯನ್ನು ಕಿವಿಯ ಮೇಲೇರಿಸಿ ಕೊಂಡು, ಇರಿಯುವ ಹೋರಿಯಂತೆ ನನ್ನನ್ನು ದಿಟ್ಟಿಸಿ ನೋಡುತ್ತ ಕುಲಕರಣಿ ಯೆಂದ :

"ಇಷ್ಟು ದಿವಸ ಎಲ್ಲಿ ಹೋಗಿದ್ದಿಯೋ ರಾಯಾ ?"

"ಒಂದಿಷ್ಟು ಮನೀಕೆಲ್ಸ ಇತ್ತು. ಊರಿಗೆ ಹೋಗಿದ್ನಿ."

"ಯಾವೂರಿಗೆ ?"

"ಇಲ್ಲೇ-ಬೆಳವಡೀಗೆ."

"ಹುಮ್ ! ಬೆಳವಡೀಗೆ ?" ಎಂದು ಹೇಳಿ ಕುಲಕರಣಿ ಒಮ್ಮೆ ಕೆಮ್ಮಿದ, ನನ್ನನ್ನು ಮತ್ತಷ್ಟು ತೀಕ್ಷ್ಣ ದೃಷ್ಟಿಯಿಂದ ನೋಡುತ್ತ ಹೇಳಿದ :

"ಬೆಳವಡೀಗಂತೂ ನೀ ಹೋಗಿರಲಿಲ್ಲ ಅಂಬೂದು ನನಗೆ ಖಾತ್ರಿಯಾ ಗೇದ. ನನ್ನ ಮುಂದ ಸುಳ್ಳು ಹೇಳಿದರೆ ನಡಿಯೋದಿಲ್ಲ. ಗೊತ್ತಾತು? ಎಲ್ಲಿಗೆ ಹೋಗಿದ್ದಿ ? ಖರೇ ಖರೇ ಹೇಳು."

ನನಗೆ ಕೋಪವೇರುತ್ತಿದ್ದರೂ ಅದನ್ನು ತಡೆಹಿಡಿದುಕೊಳ್ಳುತ್ತ ಶಾಂತ ಸ ರದಲ್ಲಿಯೇ ಉತ್ತರವಿತ್ತೆ.

"ನನ್ನ ಮನಿಯ ಕೆಲಸಕ್ಕೆ ನಾ ಎಲ್ಲಿಗೆ ಬೇಕಾದರೂ ಹೋಗಿಬರಬಹುದು. ಅದನ್ನೆಲ್ಲಾ ನಿಮ್ಮ ಮುಂದೆ ವರದೀ ಮಾಡಬೇಕಂತ ಕಾಯದೇ ಏನೂ ಇಲ್ಲ."

ಕುಲಕರಣಿಯ ಸಿಟ್ಟು ನೆತ್ತಿಗೇರಿತು. ಕಿವಿಯ ಮೇಲಿದ್ದ ಲೆಕ್ಕಣಿಕೆ ಯನ್ನು ತೆಗೆದು, ಎದುರಿಗಿದ್ದ ಪೆಟ್ಟಿಗೆಯ ಮೇಲೆ ಕುಟ್ಟುತ್ತ ಆತ ಹಿಂದಿ ಹೊರಳಿ ಕುಳಿತುಕೊಂಡು, ಒಂದು ಸಲ ಗೌಡನನ್ನೂ ಮತ್ತೆ ನನ್ನನ್ನೂ ಕೆಕ್ಕರಿಸಿ ನೋಡಿದ. ಅವನ ಚಡಪಡಾಟವನ್ನು ನೋಡಿದಂತೆಲ್ಲ ನನಗೆ ಒಳ

ಗೊಳಗೇ ನಗೆ ಬರುತ್ತಿತ್ತು. ಕೈಲಾಗದವ ಮೈಯೆಲ್ಲಾ ಪರಿದುಕೊಂಡ ಎನ್ನುವುದಿಲ್ಲವೆ? ನಮ್ಮ ಕುಲಕರಣಿಯ ವಿಷಯವೂ ಹಾಗೆಯೇ. ಅವನಿಗೀಗ ೫೦ ವರ್ಷ ವಯಸ್ಸಿರಬಹುದು. ತೆಳ್ಳಗಿನ ದುರ್ಬಲ ಶರೀರ. ನಾನೊಮ್ಮೆ ಜೋರಾಗಿ ಊದಿದರೆ ಸಾಕು, ಆತ ಹಾರಿ ಹೋಗಬಹುದು. ನಾನು ಸ್ವಲ್ಪ ಧ್ವನಿ ಏರಿಸಿದರೂ ಸಾಕು. ಅವನ ಕಚ್ಚೆಯೆ ಸಡಿಲಾಗುತ್ತದೆ. ಇಂಥ ಅಳು ಬುರುಕ ಮನುಷ್ಯನೊಬ್ಬ ಅಧಿಕಾರದ ಬಲದಿಂದ ದೊಡ್ಡ ಪರಾಕ್ರಮಿಯಂತೆ ನಾಟಕ ಮಾಡುವುದನ್ನು ಕಂಡರೆ ನಗೆ ಬಾರದಿರುತ್ತದೆಯೆ?

"ನನಗ....ನನಗ.... ಊರಿನ ಕುಲಕರಣೀಗೆ .... ಕಾಯ್ದೆ ಕಲಿಸಾಕ ಬರ್ತೀಯೇನೋ ರಾಯಾ?" ಎಂದು ತೊದಲಿದ ಕುಲಕರಣಿ.

"ನೀವು ಕುಲಕರಣಿ ಆಗಿದ್ದರೆ ನಾ ಹಳಬ ಇದೀನಿ. ಕಾಯದೇ ನಿಮ ಗೊಬ್ಬರಿಗೇ ಅಲ್ಲ, ನಮಗೂ ಗೊತ್ತೈತಿ. ದಿನಾಲೂ ಮುಂಜಾನಿಂದ ಸಂಜೀ ತನ್ಕಾ ನಿಮ್ಮ ಕಣ್ಮುಂದೆ ಬಿದ್ದಿರಾಕ ನಾನೇನ ನಿಮ್ಮ ಮನಿಯ ಆಳಲ್ಲ. ಸರ್ಕಾರೀ ಕಾಯದೆಯ ಪ್ರಕಾರ ಎಷ್ಟು ಕೆಲಸ ಮಾಡಬೇಕೋ ಅಷ್ಟು ಮಾಡ್ತೀನಿ. ಈಗಂತೂ ನಮ್ಮ ಪಾಳೀ ಇಲ್ಲ. ಸುಮ್ಮ ಸುಮ್ಮನ ಫಕೀರನ್ನ ಮನಿಗೆ ಕಳಿಸಿ ಮ್ಯಾಲಿಂದ ಮ್ಯಾಲ ಯಾಕ ತ್ರಾಸಕೊಡ್ತೀರಿ? ಇದೇನ ಚಲೋ ಅಲ್ಲ ನೋಡ್ರಿ, ಈಗs ಹೇಳಿರತೀನಿ."

ಆದುವರೆಗೆ ಸುಮ್ಮನೆ ಕುಳಿತಿದ್ದ ಗೌಡ ಆಗ ಧ್ವನಿಯೆತ್ತಿ ಹೇಳಿದ:

"ಸಮಾಧಾನ ರಾಯಾ... ಸಮಾಧಾನ...ನಿನಗೆ ಸುಮ್ಮಸುಮ್ಮನೆ ತ್ರಾಸ ಕೊಡಬೇಕಂತೇನ ಬಾಳಣ್ಣನ ಯಿಚಾರ ಇಲ್ಲ. ನಿನ್ನೆ ಮಾಮಲೇದಾರ ಸಾಹೇಬ್ರು ಹೇಳಿಕಳಿಸಿದ್ರಂತ ನಿನ್ನ ಕರಿದಿರಬೇಕು."

"ಏನ ಹೇಳಿಕಳಿಸ್ಯಾರ?" ಎಂದು ಕೇಳಿದೆ.

"ನೀ ಈಗಿಂದೀಗ ಹೋಗಿ ಸಾಹೇಬ್ರಿಗೆ ಭೆಟ್ಟಿಯಾಗಬೇಕಂತ!" ಎಂದ ಕುಲಕರಣಿ.

"ಖರೇನೋ ಸುಳ್ಳೋ ಯಾಂಬಲ್ಲ? ಲೇಖೀ ಹುಕುಂ ಬಂದರೆ ಹೋಗ್ತೀನಿ."

"ನಿನಗ ತಿಳಿಯೂದಾದ್ರೂ ಏನು ಅದರಲ್ಲಿ? ಓದಾಕ ಬರೂದಿಲ್ಲ, ಬರಿ ಯಾಕ ಬರೂದಿಲ್ಲ!" ಎಂದ ಕುಲಕರಣಿ.

ಉರಿಯುವ ಗಾಯದ ಮೇಲೆ ಉಪ್ಪು ಹಾಕಿದಂತಾಯಿತು, ಕುಲಕರಣಿಯ ಆ ಮಾತಿನಿಂದ. ಅದಕ್ಕೆ ನಾನು ಉತ್ತರ ಕೊಡುವಷ್ಟರಲ್ಲಿಯೇ ಪರ್ವತಗೌಡ ನಗುನಗುತ್ತ ಹೇಳಿದ.

"ಕುರೀ ಕಾಯುವ ಕುರುಬರಿಗ್ಯಾಕೆ ಬೇಕು ವಿದ್ಯಾ? ಅಂತನ್ನುವವರೂ ನೀವೇ. ಈಗ ಸಾಲೀ ಕಲಿತಿಲ್ಲಂತ ರಾಯಣ್ಣನ ಅಣಕಿಸುವವರೂ ನೀವೇ. ನೀವು ಕಲಿಸಿದ್ದರೆ ಅವನೂ ಕಲೀತಿದ್ದ. ಇಂತವರೆಲ್ಲಾ ಓದಾಕ ಬರ್ಯಾಕ ಕಲಿತರ ನಿಮ್ಮ ಗತಿಯೇನು? ಅಂತ ಯಿಚಾರ ಮಾಡಿ ನೀವು ಇವರನ್ನ ಕತ್ತಲಾಗs ಇಟ್ಟೇರಿ, ಹೌದೋ ಅಲ್ಲೋ?"

ಕುಲಕರಣಿಯ ಲೆಕ್ಕಣಿಕೆ ಮತ್ತೆ ಕಿವಿಯ ಮೇಲೇರಿತು. ಅತ ಚಡಪಡಿಸುತ್ತ ಕುಳಿತುಕೊಂಡ. ಗೌಡನ ಬಾಯಿಂದ ಇಂಥ ಮಾತು ಬರಬಹುದೆಂದು ಆತನೂ ನಿರೀಕ್ಷಿಸಿಕೊಂಡಿರಲಿಲ್ಲವೇನೋ? ಗೌಡ ನನ್ನ ಪಕ್ಷ ವಹಿಸಿ ಮಾತನಾಡಿದುದೂ ಸಹಜವೇ ಆಗಿತ್ತು. ನನ್ನಂತೆ ಆತನಿಗೂ ಓದುಬರಹ ತಿಳಿದಿರಲಿಲ್ಲ. ಕುಲಕರಣಿಯ ಅಪಮಾನಕರವಾದ ಮಾತು ನನ್ನಂತೆಯೇ ಗೌಡನನ್ನೂ ಕೆರಳಿಸಿದ್ದುದು ಸ್ಪಷ್ಟವಾಗಿತ್ತು.

"ಆತು. ನಾನೀಗ ಹೋಗ್ತೀನಿ. ಕೆಲಸ ಐತಿ ನನಗೆ ಮನಿಯೊಳಗ!" ಎಂದು ಹೇಳಿದವನೆ ಚಾವಡಿ ತ್ಯಜಿಸಿ ಹೊರಟು ಬಂದೆ. ಅಂಗಡಿ ಬೀದಿಯಲ್ಲಿ ಹಾಯ್ದು ನಾನು ಬರುತ್ತಿದ್ದಂತೆ, ಸೆಟ್ಟಿಯ ಅಂಗಡಿಯೆದುರು ಕುಳಿತಿದ್ದ ಬಿಚ್ಚುಗತ್ತಿ ಚನ್ನಬಸಪ್ಪ ಟಣ್ಣನೆ ಜಿಗಿದು ನನ್ನ ಹತ್ತಿರ ಬಂದ.

"ಎಷ್ಟೊತ್ತಾತು ಚೆನಬಸೂ ಬಂದು?" ಎಂದು ಕೇಳಿದೆ.

"ಒಂದರ್ಧ ತಾಸು ಆಗಿದ್ದೀತು. ನೀ ಚಾವಡಿಗೆ ಹೋದದ್ದು ಮನ್ಯಾಗ ಗೊತ್ತಾತು. ಏನಾಗತೈತೋ ನೋಡೂಣಂತ ಇಲ್ಲಿ ಬಂದು ಕುಂತಿದ್ದೀನಿ. ಕುಲಕರಣಿಯೇನೋ ಜೋರ ಮಾಡಾಕ ಹತ್ತ್ಯಾನಂತಲ್ಲ?"

"ಮೆತ್ತಗಾದರೆ ಜೋರು-ಜೋರಾಗಿದ್ದರೆ ಮೆತ್ತಗೆ! ಅವನ ಗಂಡಸ್ತನ ಎಷ್ಟು ಅನ್ನೂದು ನಿನಗೂ ಗೊತ್ತೈತಲ್ಲ? ಇನ್ನೇನ ಅವ ಕುಂಯಕ್ ಅನ್ನೂದಿಲ್ಲ. ಬಾ. ಮನಿಗೆ ಹೋಗೂಣು." ಎಂದು ಹೇಳಿ ಅವನನ್ನು ಕರೆದುಕೊಂಡು ಬಂದೆ.

ನಾನು ಮನೆಗೆ ಬರುವುದನ್ನೆ ಎದುರು ನೋಡುತ್ತ ಕುಳಿತ ಹಾಗಿತ್ತು ತಾಯಿ.

"ಏನಪಾ ರಾಯಣ್ಣಾ, ಏನಾತು ಚಾವಡ್ಯಾಗ? ಜಗ್ಳಾ ಗಿಗ್ಳಾ ಮಾಡಿ ಬಂದ್ಯೋ ಏನ ಮತ್ತ?"

"ಎಲ್ಲೀ ಜಗಳವ್ವಾ? ಜಗಳಾ ಮಾಡೂದಕ್ಕೊ ಜೋಡಿ ಸಮಾ ಇರ ಬೇಕಾಗತೈತಿ. ಆ ಅಳಬುರುಕ ಕುಲಕರಣೀ ಸಂಗಾತ ನನ್ನಂಥಾವ ಜಗಳಾ ಮಾಡೂದು ಅಂದರ ನನಗೇ ನಾಚಿಕೆ. ಮೊದವೊದಲು ತನ್ನ ಪದ್ಧತೀ ಪ್ರಕಾರ ಬಾಯಿಗೆಬಂದಂಗೆ ಒದರ್ಯಾಡಿದ. ನಾನೂ ಖಡಾಖಡಾ ನಾಕ್ ಮಾತು ಹೇಳಿದಕೂಡಲೇ ಬಾಲಾ ಮುದುಡಿಕೊಂಡು ಸುಮ್ಮನಾದ" ಎಂದು ಹೇಳಿ, ಅವ್ವನನ್ನು ಸಮಾಧಾನಗೊಳಿಸಿ, ಗೆಳೆಯನನ್ನು ಕೊಠಡಿಗೆ ಕರೆದುಕೊಂಡು ಬಂದೆ.

"ನಿನ್ನೆ ಎಲ್ಲೋ ಹೋಗಿದ್ದೆಂತಲ್ಲೋ ರಾಯಣ್ಣ? ಏನ ಸುದ್ದಿ?" ಚನ್ನಬಸಪ್ಪ ಕೇಳಿದ.

"ಇಷ್ಟು ಲಗೂ ಹೆಂಗ ಗೊತ್ತಾತೋ ನಾ ಹೋದದ್ದು?"

"ಹೆಂಗೋ ಗೊತ್ತಾತನ್ನು. ನೀನೆಂದೂ ನನ್ನ ಬಿಟ್ಟು ಹೋಗಾಂವಲ್ಲ. ಎಲ್ಲಿಗೇ ಹೋಗೂದಿದ್ದರೂ ಮೊದಲು ನನಗೆ ಹೇಳಿಕಳಿಸಿ ನನ್ನ ಕರಕೊಂಡೇ ಹೋಗಾಂವಾ. ಈ ಸಲ ಮಾತ್ರ ಹಿಂಗ್ಯಾಕ ಮಾಡಿದ ರಾಯಣ್ಣಾ-ಅಂತ ಇವತ್ತು ಎದ್ದಕೂಡಲೇ ಓಡಿ ಬಂದೀನಿ."

"ನಿನ್ನ ಬಿಟ್ಟು ಹೋಗಾಕ ನನಗೂ ಮನಸ್ಸಿರಲಿಲ್ಲ, ಚನ್ನಬಸೂ. ಆದರೆ, ಅಂಥಾ ಪ್ರಸಂಗನ ಬಂತು. ಥಟ್ಟನೆ ಹೋಗಬೇಕಾಯಿತು. ಒಮ್ಮೊಮ್ಮೆ ಹಿಂಗೂ ಆಗತೈತಪಾ. ನೀಯೇನೂ ತಿಳಕೋಬ್ಯಾಡಾ. ಏಳು, ಹೊಲದ ಕಡೆ ಹೋಗೋಣ. ಹಾದ್ಯಾಗ ಹೇಳತೀನಿ."

ನಾವು ಹೊರಡುತ್ತಿದ್ದಂತೆಯೇ ಶೇಂಗಾಕಾಯಿ-ಬೆಲ್ಲ ಮತ್ತು ಹಾಲಿನ ತಂಬಿಗೆ ತೆಗೆದುಕೊಂಡು ಅವ್ವ ಬಂದಳು.

"ಹಂಗೇ ಹೊರಟಿರೇನ್ರೋ ? ಮೊದಲು ಇದನ್ನಷ್ಟ ತಿನ್ರಿ. ಹೊಳ್ಳಿ ಬರಾಕ ಎಷ್ಟೊತ್ತಾಗತೈತೋ ಏನೋ !"

ನನ್ನ ಪ್ರೀತಿಯ ಗೆಳೆಯನಾದ ಚನ್ನಬಸಪ್ಪನೂ ತನ್ನ ಮಕ್ಕಳಲ್ಲೊಬ್ಬ ನೆಂದೇ ತಿಳಿದು ಅದರಂತೆ ನಡೆಸಿಕೊಂಡು ಬಂದಿದ್ದಳು ಅವ್ವ. ಅವನು ನಮ್ಮ ಮನೆಗೆ ಬಂದಾಗಲೆಲ್ಲ ಏನಾದರೂ ಅಲ್ಪೋಪಹಾರ ಕೊಡದೆ ಹಾಗೆಯೇ ಎಂದೂ ಕಳಿಸುತ್ತಿರಲಿಲ್ಲ. ಕಡೆಯಪಕ್ಷ ಒಂದು ಬಟ್ಟಲು ಹಾಲನ್ನಾದರೂ ಕುಡಿಯಲೇಬೇಕಾಗುತ್ತಿತ್ತು. ಚನ್ನಬಸಪ್ಪನೂ ನಮ್ಮ ಮನೆಯಲ್ಲಿ ಯಾವ ಸಂಕೋಚವನ್ನೂ ಇಟ್ಟುಕೊಳ್ಳದೆ, ಅವ್ವ ಕೊಟ್ಟದ್ದನ್ನೆಲ್ಲ ತಿಂದು ಮುಗಿಸು ತ್ತಿದ್ದ.

ನಾವು ಶೇಂಗಾ ಬೆಲ್ಲ ತಿನ್ನುವುದನ್ನು ನೋಡುತ್ತ ನಮ್ಮೆದುರಿಗೇ ಕುಳಿ ತಿದ್ದ ಅವ್ವ ಹಠಾತ್ತಾಗಿ ಧ್ವನಿಯೆತ್ತಿ ಚನ್ನಬಸಪ್ಪನಿಗೆ ಹೇಳಿದಳು:

"ನೀನಂತೂ ಸಂಸಾರಕ್ಕೆ ಹತ್ತಿ ಚಲೋಮಾಡಿದಿ ಚನ್ನಬಸೂ. ನಮ್ಮ ರಾಯಣ್ಣನಿಗೂ ಒಂದೀಟು ಬುದ್ಧಿ ಹೇಳಲ್ಲ?"

ಚನ್ನಬಸಪ್ಪ ನನ್ನ ಬೆನ್ನಮೇಲೊಂದು ಗುದ್ದುಹಾಕಿ ನಗುನಗುತ್ತ ಹೇಳಿದ :

"ಇವನೇನ ಸನ್ಯಾಸಿಯಾಗಿಲ್ಲಲ್ಲ ಚಿಗವ್ವಾ ? ಬುದ್ಧಿ ಹೇಳೂದರ ಅಗತ್ಯ ಏನೈತಿ?"

"ಅತ್ತ ಅವರೂ ಸೊಸೀನ್ನ ಕಳಿಸದೆ ಮನ್ಯಾಗಿಟ್ಕೊಂಡು ಕುಂತಾರೆ- ಇವ ಹೀಂಗ ಮಾಡೋದಕ್ಕೂ ಅವರು ಹಂಗ ಮಾಡೋದಕ್ಕೂ ಗಂಟು ಬಿದ್ದೈತಿ."

"ತುಂಟ ತುಂಟರಿಗೆ ಗಂಟು ಬಿದ್ದರೆ ಗರದಿ ಆಗತೈತಿ ಗಮ್ಮತ್ತಾ !" ಎಂದು ರಾಗವಾಗಿ ಹೇಳಿ ಮತ್ತೆ ಗಟ್ಟಿಯಾಗಿ ನಕ್ಕ ಚನ್ನಬಸಪ್ಪ.

"ಇದೇನ ನಗಚಾಟಿಕೆಯ ಮಾತಲ್ಲ ಚನ್ನಬಸೂ. ನಾಕ ಮಂದಿ ಕೂಡ ನೆಟ್ಟಗೆ ಯಿಚಾರ ಮಾಡಾಕಬೇಕು. ಸೊಸಿಯನ್ನ ಎಷ್ಟು ದಿವಸಂತ ತವರಿ ನಾಗೆ ಬಿಡೋದು? ಯಾಕೆ ರಾಯಣ್ಣಾ, ಏನಂತೀ?"

"ನಾಯೇನ ಹೇಳಲವ್ವ? ಹಿರೇರದೀರಿ. ಏನ ನಿಮಗೆ ತಿಳಿದಂಗೆ ಮಾಡಿರಿ" ಎಂದು ನಾನು ಬೇಸರದಿಂದಲೇ ಹೇಳಿದೆ.

"ಸಿದ್ದಣ್ಣನಿಗೆ ಕೇಳಿದರೆ ಅವನೂ ನಿನ್ನಂಗs ಅಂತಾನೆ. ನಾನೊಬ್ಬಾಕೆ

ಹೆಣ್‌ಹೆಂಗಸು ಏನ್ಮಾಡ್ಲಿ?" ಎಂದು ನುಡಿದು, ಹಣೆಗೆ ಕೈಯಿಟ್ಟು ಕುಳಿತಳು ಅವ್ವ.

"ಎಲ್ಲಾದಕ್ಕೂ ಅವ್ವ ಅವ್ವ ಅಂದ್ರೆ ಈ ಮುದುಕಿಯೊಬ್ಬಾಕೀ ಏನ ಮಾಡಬೇಕೋ ರಾಯಣ್ಣಾ ? ಬೆಳವಡೀಗಂತೂ ದಿನಾ ಹೋಗೇಹೋಗುತೀ. ಮಾವನ ಮನಿಗಷ್ಟು ಹೋಗಿ ಹೇಣತೀನ್ನ ಕರ್‍ಕೊಂಡು ಬಾರಲಾ!" ಎಂದ ಚೆನ್ನಬಸಪ್ಪ.

ಸಾಮಾನ್ಯವಾಗಿ ನಾನು ದಿನಕ್ಕೊಮ್ಮೆಯಾದರೂ ಬೆಳವಡಿಗೆ ಹೋಗಿ ಬರುತ್ತಿದ್ದುದು ನಿಜವೇ ಆಗಿದ್ದಿತು. ನನ್ನ ಇನ್ನೊಬ್ಬ ಆಪ್ತಮಿತ್ರ ಒಡ್ಡರ ಯಲ್ಲನಾಯಕನನ್ನು ಕಂಡು ಬರಲು ನಾನು ಅಲ್ಲಿಗೆ ಹೋಗುತ್ತಿದ್ದೆ. ನಾನು ಹೋಗದಿದ್ದ ದಿನ ಆತನೇ ಸಂಗೊಳ್ಳಿಗೆ ಬರುತ್ತಿದ್ದ. ಅವನಲ್ಲದೆ ಇನ್ನೂ ಅನೇಕ ಮಿತ್ರರು ಅಲ್ಲಿದ್ದರು. ಕಿತ್ತೂರಿನ ಯುದ್ಧಗಳಲ್ಲಿ ಕಾದಾಡುತ್ತಿದ್ದ ಸಮಯದಲ್ಲಿ ಬೆಳೆದು ಬಂದಿತ್ತು ಆ ಸ್ನೇಹ. ಆ ಗೆಳೆಯರೆಲ್ಲರ ಮನೆಗೆ ಹೋಗಿ ಅವರನ್ನು ಕಂಡು ಬರುತ್ತಿದ್ದೆನಾದರೂ ಅದೇ ಊರಲ್ಲಿದ್ದ ನನ್ನ ಮಾವನ ಮನೆಗೆ ಮಾತ್ರ ನಾನು ಒಂದು ಸಲವೂ ಕಾಲು ಹಾಕಿರಲಿಲ್ಲ. ತಾವು ಶ್ರೀಮಂತರೆಂದು ಅವರಿಗೆ ಜಂಬ. ಅಂಥ ಗರ್ವ ಎಂದರೆ ನನಗಾಗದು. ಎಂತಲೇ, ನಾನು ಅವರ ಮನೆಯಿಂದ ದೂರವೇ ಇದ್ದು ಬಿಟ್ಟಿದ್ದೆ.

"ಅದೊಂದು ಹೇಳಬ್ಯಾಡ ಚನ್ನಬಸೂ. ನಾನಂತೂ ಅವರ ಮನೆಗೆ ಹೋಗೋದಿಲ್ಲ ಅನ್ನೋದು ನಿನಗೂ ಗೊತ್ತೈತಿ. ಬೇಕಾದ್ರೆ ಕಳಿಸ್ತಾರೆ, ಬ್ಯಾಡಾದರೆ ಬಿಡ್ತಾರೆ" ಎಂದಷ್ಟೇ ಹೇಳಿ ನಾನು ಮೇಲಕ್ಕೆದ್ದೆ.

## ೬ ಅನರಾದಿ ವೀರಪ್ಪ

ಮೈಮೇಲೆ ಕಾವಿಬಣ್ಣದ ನಿಲುವಂಗಿ, ಅದೇ ಬಣ್ಣದ, ಗಂಡುಗಚ್ಚೆಯ ಧೋತರ, ಕೊರಳಿನಲ್ಲೂ ಮುಂಗೈಗಳಲ್ಲೂ ರುದ್ರಾಕ್ಷಿಯ ಸರ, ಹಣೆಯ ಮೇಲೆ ವಿಭೂತಿ, ಎಡಭುಜದಿಂದ ಇಳಿದಿದ್ದ ಜೋಳಿಗೆ, ಬಲಗೈಯಲ್ಲಿ ಬಿಚ್ಚಿದ ಕೊಡೆ-ಈ ರೀತಿಯ ವೇಷ ಹಾಕಿಕೊಂಡು ನಾವು ಮೂವರೂ ಮಧ್ಯಾಹ್ನದ ಸಮಯಕ್ಕೆ ಸರಿಯಾಗಿ ಬೈಲಹೊಂಗಲದ ಮಲ್ಲನಾಯಕರ ವಾಡೆಯೆದುರು ಕಾಣಿಸಿಕೊಂಡೆವು. ರಾಣಿಯವರನ್ನು ಆ ವಾಡೆಯಲ್ಲಿಯೇ ಬಂಧನದಲ್ಲಿಡಲಾಗಿದ್ದಿತು. ಪುಟ್ಟದೊಂದು ಕೋಟೆಯಂತೆಯೇ ಇತ್ತು ನಾಯಕರ ಆ ವಾಡೆ. ಸುತ್ತಲೂ ಕಲ್ಲುಗಳಿಂದ ಕಟ್ಟಿದ ಭದ್ರವಾದ ಗೋಡೆಗಳು. ಕೋಟೆಗಿರುವಂಥ ಮಹಾದ್ವಾರ.

ಮುಸಲ್ಮಾನ್ ಸಿಪಾಯಿಗಳಿಬ್ಬರು ಮಹಾದ್ವಾರದೆದುರು ಕಾವಲು ಮಾಡುತ್ತಿದ್ದರು. ನಮ್ಮ ಈ ವೇಷ ಕಂಡು ಅವರಿಗೆ ತಮಾಷೆಯೆನ್ನಿಸಿರಲು ಸಾಕು. ನಮ್ಮನ್ನು ಚೇಷ್ಟೆ ಮಾಡುತ್ತ ಅವರಲ್ಲೊಬ್ಬ ಕೇಳಿದ:

"ಎಲ್ಲಿಂದ ಬಂದಿರೋ ಅಯ್ಯಗೋಳಿರ್ಯಾ? ಕಾಶಿ ರಾಮೇಸೂರದಿಂದಲೇ ಬಂದಿರಬೇಕಲ್ಲ?"

"ಇಲ್ಲ. ನಾವು ಬಂದದ್ದು ವಿಜಾಪುರದಿಂದ."

"ವಿಜಾಪುರಸೆ ಆಯಾ ? ಬಹೋತ್ ಅಚ್ಛಾ. ಹಮಾರೇ ಆದಿಲ್‌ಶಹಾ ಕಾ ಗಾಂವ್ ಹೈ." ಎಂದನೊಬ್ಬ ಸಿಪಾಯಿ.

"ಯಾತಕ್ಕೆ ಬಂದೀರಿ ಇಲ್ಲಿ? ಆ ಛತ್ರಿ ಮುಚ್ಚಿರಲ್ಲ ಮೊದಲು ?" ಎಂದನಿನ್ನೊಬ್ಬ ಸಿಪಾಯಿ.

"ಅದನ್ನು ಮುಚ್ಚುವಂತಿಲ್ಲ. ಅದು ನಮ್ಮ ನೇಮ. ನಾವು ಕಾಲಜ್ಞಾನದ ಜಂಗಮರು."

"ಕಾಲಜ್ಞಾನ ? ಅಂದರೆ ?"

"ಹಿಂದಾದದ್ದು, ಮುಂದಾಗೋದು ಎಲ್ಲಾ ಎಲ್ಲಾ ತಿಳಿಸತಕ್ಕವರು ನಾವು ತ್ರಿಕಾಲ ಜ್ಞಾನಿಗಳು."

"ಐಸೇ ಕ್ಯಾ ? ಆ ಕಡೆ ಬಜಾರದಾಗಾದ್ರೂ ಹೋಗಿರಲ್ಲ? ಯಾರಾದ್ರೂ ಸೆಟ್ರು ಸಾವುಕಾರು, ರೂಪಾಯಿ ಕೊಡತಾರ, ಖಾನೇಕು ಕೊಡತಾರ."

"ನಾವು ರೂಪಾಯಿಗೆ ಬಂದವರಲ್ಲ, ರೊಟ್ಟಿಗೆ ಬಂದವರಲ್ಲ."

"ಮತ್ತೆ ಯಾತಕ್ಕೆ ಬಂದವರು ?"

"ಚೆನ್ನಮ್ಮ ರಾಣಿಯವರನ್ನು ಬೆಟ್ಟಿಯಾಗಿ ಕಾಲಜ್ಞಾನ ಹೇಳಲಿಕ್ಕೆ."

"ಕಾಲಜ್ಞಾನ ಕರಕೆ ಕ್ಯಾ ಕಹತಾಹೈ ? ಜರಾ ಬೋಲೋತೋ ?"

ಗಂಗಾಧರ ಉಚ್ಚಕಂಠದಲ್ಲಿ ಹೇಳತೊಡಗಿದ :

"ಶಿವಸಮಯ ಕೆಟ್ಟೀತು ಭೋ! ಹಿರಿಯತನ ಅಳಿದೀತು! ಭಕ್ತರು ಜಂಗಮರ ಸೇವೆ ಪಡೆದಾರು! ನಿಜಭಕ್ತಿಯಾ ಮರೆತಾರು! ಕ್ರಿಯಂಗಳ ಬಿಟ್ಟಾರು! ಅನ್ಯಾಯಗಳ ಮಾಡ್ಯಾರು! ಪ್ರಸಾದವ ಮರೆತಾರು! ರುಚಿಗಳನುಂಡಾರು, ಪಂಕ್ತಿ ಭೇದ ಮಾಡ್ಯಾರು, ಮಠದ ಹಿರಿಯರ ಮರೆತಾರು, ಕುಲದ ಹಿರಿಯರ ಪೂಜಿಸ್ಯಾರು, ವಿಷಯಗಳಲಿ ಮುಳುಗ್ಯಾರು!"

"ಬೇಟೀಕೇ ಕ್ಯಾ ಕಹತಾ ಹೈ ಕುಛ್ ನಹಿ ಸಮಜತೆ," ಎಂದು ಸಿಪಾಯಿಗಳು ಗೊಣಗುತ್ತಿದ್ದಂತೆ ಮಹಾದ್ವಾರದ ಕೆಳಗಡೆಗಿದ್ದ ಕಿರುಬಾಗಿಲಿನ ಮೇಲೆ ಸದ್ದಾಯಿತು. ನಾವು ಯೋಚಿಸಿಕೊಂಡಿದ್ದಂತೆಯೇ ಎಲ್ಲವೂ ನಡೆಯುತ್ತಿದ್ದುದಕ್ಕೆ ಸಂತೋಷಪಟ್ಟುಕೊಳ್ಳುತ್ತ ನಾವು ನಿಂತಿದ್ದಂತೆ ಒಳಗಿನಿಂದ ಧ್ವನಿ ಕೇಳಿಸಿತು.

"ಈ ಜಂಗಮರಿಗೆ ರಾಣೀಸಾಹೇಬರು ಬಿನ್ನಹ ಮಾಡುತ್ತಿದ್ದಾರೆ. ಅವರನ್ನ ಒಳಗ ಬಿಡ್ರಿ."

"ಮೂರು ಆದಮಿಗಳನ್ನು ಏಕದಂ ಬಿಡಾಕ ಹುಕುಂ ಇಲ್ಲ." ಎಂದ ಸಿಪಾಯಿ.

"ಹತ್ತು ಮಂದಿ ಜಂಗಮರು ಬಂದರೂ ಬಿಡಬೇಕಂತ ಮಾಮಲೇದಾರ ಸಾಹೇಬರ ಹುಕುಂ ಐತಲ್ಲ? ಅದರಲ್ಲಿ ಇದು ಊಟದ ಸಮಯ. ಹಸಿದು ಬಂದ ಜಂಗಮರನ್ನು ಹಂಗೇ ಕಳಿಸಲಿಕ್ಕೆ ಬರೂದಿಲ್ಲ. ಮೂವರನ್ನೂ ಬಿಡಲಿಕ್ಕೇ ಬೇಕು. ಬಿಡದಿದ್ದರೆ ರಾಣೀಸಾಹೇಬರೂ ಊಟ ಬಿಟ್ಟು ಕೂಡುತ್ತಾರ" ಎಂದು ಒಳಗಿನಿಂದ ಕೇಳಬಂದಿತು.

ಸಿಪಾಯಿಗಳು ಆಗಲೂ ಗೊಣಗಿಕೊಳ್ಳುತ್ತಲೇ ನಮ್ಮನ್ನು ಒಳಗೆ

ಬಿಟ್ಟರು. ನಾವು ನಿಜವಾದ ಜಂಗಮರೆಂದು ಅವರು ನಂಬುವಷ್ಟೇ ಪರಿಪೂ
ವಾಗಿತ್ತು ನಮ್ಮ ವೇಷ. ನಮ್ಮ ನಿಲುವಂಗಿಗಳ ಒಳಗೆ ಕಿರುಗತ್ತಿಗಳೂ ಕ
ಗಳೂ ಅವಿತುಕೊಂಡಿದ್ದ ವಿಷಯ ಅವರಿಗಂತೂ ಗೊತ್ತಾಗುವಂತಿರಲಿಲ್

ಮಹಾದ್ವಾರದಿಂದ ಸನಿಯದಲ್ಲಿಯೇ ಇದ್ದ ಚಾವಡಿಯಲ್ಲಿ ಲೆಕ್ಕ
ಯುತ್ತ ಕುಳಿತಿದ್ದ ಕರಣಿಕರು ಒಮ್ಮೆ ತಲೆಯೆತ್ತಿ ನೋಡಿ ಮತ್ತೆ
ಪುಸ್ತಕಗಳಲ್ಲಿ ದೃಷ್ಟಿ ತೊಡಗಿಸಿದರು. ನಮ್ಮನ್ನು ಬರಮಾಡಿಕೊಳ್ಳಲು ಬಂ
ಸೇವಕನು ನಡುವೆ ಎಲ್ಲಿಯೂ ನಿಂತುಕೊಳ್ಳದೆ ನೇರವಾಗಿ ಅಂತಃಪುರಕ್ಕೆ ಕ
ಕೊಂಡು ಬಂದ. ಕಿತ್ತೂರಿನ ಅರಮನೆಯ ವೈಭವವನ್ನೂ ವಿಜೃಂಭಣೆಯ
ಕಂಡಿದ್ದ ನಾವು ಈ ವಾಡೆಯ ಸಾದಾತನವನ್ನು ನೋಡಿ ನಿಟ್ಟುಸಿರುಬಿ
ದಿವಾನಖಾನೆಯಲ್ಲಿ ಕುಳಿತಿದ್ದಂತೆ, ಬಿಳಿಯ ರೇಶಿಮೆ ಸೀರೆಯುಟ್ಟು,
ವಿಭೂತಿ ಧರಿಸಿ, ಕೊರಳಲ್ಲಿ ರುದ್ರಾಕ್ಷಿಯ ಸರವಿರಿಸಿಕೊಂಡು ತಪಸ್ವಿನಿಂ
ಕಾಣುತ್ತಿದ್ದ ಬೆಳ್ಳಿಗೂದಲಿನ ರಾಣಿಯವರು ನಿಧಾನವಾಗಿ ನಡೆದು ಬರು
ದನ್ನು ನೋಡಿ ಥಟ್ಟನೆ ಎದ್ದು ನಿಂತೆವು. ನಮ್ಮ ಅಡಿಗಳಿಗೆರಗಲು ಬರು
ರಾಣಿಯವರನ್ನು ತಡೆದು ನಾವೇ ಅವರ ಪಾದಗಳಿಗೆ ಶಿರವಿಟ್ಟು ನಮಿಸಿ
ಅವ್ವನವರ ವಿಶಾಲ ನೇತ್ರಗಳಲ್ಲಿ ಅಚ್ಚರಿಯ ಭಾವನೆ ತಲೆದೋರುತ್ತಿ
ರಾಯಣ್ಣ ಅವರನ್ನು ಸಮೀಪಿಸಿ ನಮ್ಮ ನಿಜವಾದ ಹೆಸರುಗಳನ್ನು ಅ
ತಿಳಿಸಿದ. ಅದುವರೆಗೂ ಉದಾಸವಾಗಿದ್ದ ಅವ್ವನವರ ಮುಖ ಆ ಮಾತ
ನ್ನಾಲಿಸುತ್ತಲೂ ಥಟ್ಟನೆ ಉಲ್ಲಸಿತವಾಯಿತು. ನಮ್ಮನ್ನು ಆಶೀರ್ವದಿಸ
ಕೈಯೆತ್ತಿ, ಮಧುರ ಮಂದಹಾಸ ಬೀರಿ ಅವರು ಮೆಲುದನಿಯಲ್ಲಿ ಹೇ

"ಮೊದಲು ಊಟವಾಗಲಿ ಅಯ್ಯನವರದು. ಆಮೇಲೆ ಮಾತಾಡೋ

ಅಷ್ಟು ಹೇಳಿ ಅವರು ನಮ್ಮನ್ನು ಊಟದ ಮನೆಯತ್ತ ಕರೆದೊಂ
ಕಿತ್ತೂರಿನ ಅರಮನೆಯಲ್ಲಿ ಅನೇಕ ವರ್ಷಗಳಿಂದ ಸೇವೆ ಸಲ್ಲಿಸುತ್ತ ಬ
ವೃದ್ಧ ಪರಿಚಾರಕ ಮಲ್ಲಜ್ಜನನ್ನು ಅಲ್ಲಿ ಕಂಡು ನಮ್ಮೆಲ್ಲರಿಗೂ ಸಂ
ವಾಯಿತು. ಅರ್ಥಾತ್ ಮಲ್ಲಜ್ಜ ನಮ್ಮನ್ನು ಗುರುತಿಸಲಿಲ್ಲ.

ಗಂಗಾಧರನ ದೃಷ್ಟಿ ಮಿಂಚಿನಂತೆ ಅತ್ತಿತ್ತ ಸಂಚರಿಸುತ್ತಿತ್ತು. ರಾ

ಏಕೋ ತುಟಿಗಳಲ್ಲಿಯೇ ನಗುತ್ತಿದ್ದ. ಅವನ ನಗೆಗೆ ಕಾರಣವೇನೆಂಬುದು ನನಗಾಗ ಗೊತ್ತಿರಲಿಲ್ಲ. ಹಿಂದಿನಿಂದ ಗೊತ್ತಾಯಿತು ಆ ಗುಟ್ಟು.

ಮಲ್ಲಜ್ಜನ ವಶಕ್ಕೆ ನಮ್ಮನ್ನು ಒಪ್ಪಿಸಿ ರಾಣಿಯವರು ನಿಧಾನವಾಗಿ ಹೊರಟುಹೋದರು. ಸ್ನಾನ-ಶಿವಪೂಜೆ-ಊಟ ಮುಗಿಸಿಕೊಂಡು ತಾಂಬೂಲ ಮೆಲ್ಲುತ್ತ ನಾವು ದಿವಾನಖಾನೆಗೆ ಬಂದು ಕುಳಿತಿದ್ದಂತೆ ಮಲ್ಲಜ್ಜ ಬಂದು ರಾಣಿಯವರು ನನ್ನನ್ನು ಕರೆಯುತ್ತಿರುವುದಾಗಿ ತಿಳಿಸಿದ. ನಾವು ಮೂವರೂ ಒಟ್ಟಿಗೇ ಅವರ ಕೊಠಡಿಯಲ್ಲಿ ಪ್ರವೇಶಿಸಿ ಮಾತನಾಡುತ್ತ ಕುಳಿತರೆ ಅನುಮಾನಕ್ಕೆ ಕಾರಣವಾಗಬಹುದೆಂದು ಯೋಚಿಸಿಯೇ ಅವರು ನನ್ನೊಬ್ಬನನ್ನೇ ತಮ್ಮ ಕೊಠಡಿಗೆ ಕರೆಯಿಸಿದ್ದುದು ಸ್ಪಷ್ಟವಾಗಿತ್ತು.

ರಾಣಿಯವರು ಅದೇ ತಾನೆ ಊಟಮಾಡಿ ಬಂದಂತೆ ತೋರುತ್ತಿತ್ತು. ಮಂಚದ ತಲೆಯ ಮೇಲೆ, ಗೋಡೆಗೆ ನೇತಾಡುತ್ತಿದ್ದ ಮಲ್ಲಸರ್ಜ ದೊರೆಗಳ ತೈಲಚಿತ್ರವನ್ನು ದಿಟ್ಟಿಸುತ್ತ ಕುಳಿತಿದ್ದ ರಾಣಿಯವರು ಮುಗುಳುನಗೆಯೊಡನೆ ನನ್ನನ್ನು ಸ್ವಾಗತಿಸಿ ಕುಳಿತುಕೊಂಡಿರಲು ಸೂಚಿಸಿದರು.

“ಬಾಗಿಲಲ್ಲೇ ಇರು ಮಲ್ಲಜ್ಜಾ, ಇತ್ತ ಯಾರನ್ನೂ ಬಿಡಬೇಡ,” ಎಂದು ಅಪ್ಪಣೆಮಾಡಿ, ಒಮ್ಮೆ ಕ್ಷೀಣವಾಗಿ ನಕ್ಕು ನನ್ನೆಡೆಗೆ ಹೊರಳಿ ಅವರೆಂದರು :

“ನನ್ನ ರಾಜ್ಯದಲ್ಲೇ ನಾನು ಬಂದಿಯಾಗಿರುವ ಪ್ರಸಂಗಬಂತು. ದೇವರ ಇಚ್ಛೆ. ಉಪಾಯವಿಲ್ಲ.”

“ಅವ್ವನವರು ನಿರಾಶರಾಗಬಾರದು.”

“ಇಲ್ಲ, ನಾನೇನು ನಿರಾಶಳಾಗಿಲ್ಲ. ನಿಮ್ಮಂಥಾ ಹಿತಚಿಂತಕರು ಈಗಲೂ ನಮಗಾಗಿ ಸಾಹಸ ಮಾಡುತ್ತಿದ್ದೀರಲ್ಲ? ಸರ್ಪಕಾವಲನ್ನೂ ಭೇದಿಸಿಕೊಂಡು ನೀವು ಇಲ್ಲಿಯತನಕ ಬಂದದ್ದು ಸಣ್ಣಮಾತಲ್ಲ. ಕುಂಪಣಿಯವರು ಈಗಲೂ ನಿಮ್ಮನ್ನು ಹುಡುಕುತ್ತಲೇ ಇದ್ದಾರಂತೆ. ಇಷ್ಟು ದಿವಸ ಎಲ್ಲಿದ್ದಿರಿ ? ಏನು ಕಥೆ ? ಮನೆಯವರೆಲ್ಲಾ ಎಲ್ಲಿದ್ದಾರೆ?”

ಐದು ವರ್ಷಗಳಕಾಲ ಗೋವಾದಲ್ಲಿ ತಲೆಮರೆಸಿಕೊಂಡಿದ್ದ ಬಗೆಗೆ ಸ್ವಲ್ಪದರಲ್ಲಿಯೇ ತಿಳಿಸಿ ನಾನೆಂದೆ :

“ನಮ್ಮ ಮನೆಯವರು ಕಿತ್ತೂರನ್ನೇ ಬಿಟ್ಟು ಬೆಳಗಾವಿಯಲ್ಲಿದ್ದಾರಂತೆ. ಸುದ್ದಿಯಿದೆ, ಅವ್ವನವರೆ.”

"ಭೆಟ್ಟಿಯಾಗಿದ್ದಿರಾ ಅವರಿಗೆಲ್ಲ ?"

"ಇನ್ನೂ ಹೋಗಿಲ್ಲ ತಾಯೀ. ಸರಿಯಾದ ಸಮಯ ನೋಡಿಕೊಂಡು ಹೋಗಿ ಬರಬೇಕು."

"ಅಲ್ಲಿ ಕಾವಲು ಬಹಳ ಇದೆಯಂತೆ. ನಿಮ್ಮ ಮನೆಯವರಿರುವ ಜಾಗದ ಮೇಲೂ ಕುಂಪಣಿಯವರು ಕಣ್ಣಿಟ್ಟಿರಲೇಬೇಕು. ನೀವು ಒಂದಿಲ್ಲೊಂದು ದಿನ ಬಂದೇ ಬರುವಿರೆಂಬ ಭರವಸೆಯೂ ಅವರಿಗಿರಬೇಕು. ಅದಿರಲಿ. ಸೇನಾಪತಿಯವರ ಸುದ್ದಿಯೇನಾದರೂ ಗೊತ್ತಾಗಿದೆಯೇ ನಿಮಗೆ ?"

"ಇಲ್ಲ ಅಪ್ಪನವರೆ. ಅವರೆಲ್ಲಿದಾರನ್ನೋದನ್ನ ತಿಳಿದುಕೊಳ್ಳಲು ಬಹಳ ಪ್ರಯತ್ನ ಮಾಡಿದೆ. ಯಾರಿಗೂ ಸರಿಯಾಗಿ ಗೊತ್ತಿಲ್ಲ. ಅವರನ್ನು ಪುಣೆಯ ಕಡೆಗೆ ಕರಕೊಂಡು ಹೋಗಿ ಯಾವುದೋ ಕಿಲ್ಲೆಯಲ್ಲಿಟ್ಟಾರೆಂತಲೂ ಸುದ್ದಿ ಕೇಳೀನಿ. ಖರೇನೋ ಸುಳ್ಳೋ ಗೊತ್ತಾಗುವಂತಿಲ್ಲ."

"ನೀವಂತೂ ಸುರಕ್ಷಿತವಾಗಿದೀರಿ. ದೇವರ ದಯದಿಂದ ಗುರುಸಿದ್ದಪ್ಪನವರೂ ಪಾರಾಗಿ ಬಂದು ನಿಮ್ಮನ್ನ ಕೂಡಿಕೊಂಡರೆ ಮತ್ತೆ ನಮಗೆ ಒಳ್ಳೆಯ ಕಾಲ ಬರಬಹುದು."

"ಅದಕ್ಕಾಗಿ ಪ್ರಯತ್ನ ಮಾಡೋಣವೆಂತಲೇ ನಾವೀಗ ತಮ್ಮ ಭೆಟ್ಟಿಗೆ ಬಂದದ್ದು ಅಪ್ಪನವರೆ."

ಮತ್ತೆ ರಾಣಿಯವರ ದೃಷ್ಟಿ ದೊರೆಗಳ ತೈಲಚಿತ್ರದ ಮೇಲೆ ಸ್ಥಿರವಾಯಿತು. ಮಲ್ಲಸರ್ಜ ರಾಜರ ಕಾಲದಲ್ಲಿ ವೈಭವದಿಂದ ಮೆರೆದ ಕಿತ್ತೂರಿನ ಚಿತ್ರ ಅವರ ಕಣ್ಣೆದುರು ಮೂಡುತ್ತಿದ್ದಿರಬೇಕು. ರಾಣಿಯವರ ಮುಖದಲ್ಲಿ ಅಪೂರ್ವವಾದ ತೇಜಸ್ಸು ಮಿನುಗಿತು. ಸೊಂಟದಲ್ಲಿದ್ದ ಕಿರುಗತ್ತಿಯನ್ನು ತೋರಿಸುತ್ತ ಅವರೆಂದರು.

"ನೋಡಿದಿರಾ ? ಇದೊಂದನ್ನ ನಾನು ಯಾವಾಗಲೂ ಬಿಟ್ಟಿರುವುದಿಲ್ಲ. ಪ್ರಸಂಗ ಬಂದರೆ ಉಪಯೋಗವಾಗಲೀಂತ ಇಟ್ಟುಕೊಂಡಿದೀನಿ. ನಿಮ್ಮ ಪ್ರಯತ್ನ ಯಶಸ್ವಿಯಾದೀತು ಅಂತ ಅನಿಸ್ತದೇನು ?"

"ಸರಿಯಾಗಿ ತಯಾರೀ ಮಾಡಿಕೊಂಡು ಮಾಡಿದರೆ ನಮಗೆ ಗೆಲವು ಸಿಕ್ಕಬಹುದು ತಾಯಿ. ಪರದೇಶಿಗಳನ್ನೋಡಿಸಬೇಕೊಂತ ನಿಮ್ಮ ಪ್ರಜೆಗಳೂ ಕಾದಿದ್ದಾರೆ. ಈ ಸಲ ಕೊಲ್ಲಾಪುರದ ರಾಜರೂ ನಮಗೆ ಖಂಡಿತವಾಗಿ

ಸಹಾಯ ಮಾಡಬಹುದು. ಕುಂಪಣಿಯವರೆಂದರೆ ಸಿಟ್ಟು ಬೆಂಕಿಯಾಗಿದಾರೆ ಬಾಬಾಸಾಹೇಬರು. ಆದರೆ ನಮ್ಮಂಥಾ ಸೇವಕರು ಬರಿಗೈಯಲ್ಲಿ ಅವರ ಹತ್ತರ ಹೋದರೆ ಕೆಲಸವಾಗುವಂತಿಲ್ಲ. ನಿಮ್ಮ ಸಹಿ ಇರುವ ಪತ್ರ ತಕ್ಕೊಂಡು ಹೋದರೆ ಅವರು ಮನಸ್ಸು ಬಿಚ್ಚಿ ಮಾತಾಡಬಹುದೋ ಏನೋ ?"

"ಆಗಲಿ. ಪತ್ರ ಬರೆದುಕೊಡ್ತೀನಿ. ನೀವೇ ಹೋಗ್ತೀರಾ ಕೊಲ್ಲಾಪುರಕ್ಕೆ?"

"ಗಂಗಾಧರ ಹೋಗ್ತಾನೆ. ಅವನ ಸಂಗಡ ರಾಯಣ್ಣಾನನ್ನೂ ಕಳಿಸ ಬಹುದು. ನಮ್ಮ ಹಿಮ್ಮತ್‌ಸಿಂಗ್ ಅಂತೂ ಈಗ ಬಾಬಾಸಾಹೇಬರ ಆಶ್ರಯ ದಲ್ಲೇ ಇದಾನೆ."

"ಅದೊಂದು ಅನುಕೂಲವಾದಂತಾಯ್ತು ಹಾಗಾದರೆ! ಬಾಬಾಸಾಹೇಬ ರಿಂದ ಸಹಾಯ ಸಿಕ್ಕರೆ ನಮ್ಮ ಪ್ರಯತ್ನಕ್ಕೆ ಯಶಸ್ಸು ದೊರೆಯಬಹುದು. ಆದರೆ, ಬರೀ ಅವರ ಭರವಸೆ ಇಟ್ಟುಕೊಂಡರೆ ಸಾಲುವಂತಿಲ್ಲ. ಗೋವೆಯ ಪರದೇಶಿಗಳ ಸಹಾಯ ಸಿಕ್ಕರೂ ಉತ್ತಮವೇ. ಅಲ್ಲಿದ್ದಾಗ ನಿಮಗೂ ಅವರಿಗೂ ಸ್ನೇಹ ಬೆಳೆದಿರಬೇಕಲ್ಲ?"

"ಕೆಲವು ಅಧಿಕಾರಿಗಳ ಪರಿಚಯವೇನೋ ಆಗಿತ್ತು ಅವ್ವನವರೆ. ಅವ ರಿಂದ ನಮಗೆ ಸಹಾಯ ಸಿಕ್ಕುವ ಬಗ್ಗೆ ನಾನು ಅಲ್ಲಿದ್ದಾಗಲೇ ಪ್ರಯತ್ನ ಮಾಡಿದೆ. ಆದರೆ ಆ ಜನರು ಬಹಳ ಸ್ವಾರ್ಥಿಗಳು. ಕೋಟಿಗಟ್ಟಲೆ ಹಣ ಸಿಕ್ಕರೆ ಮಾತ್ರ ಏನೋ ಸ್ವಲ್ಪ ನೆರವಾಗಬಹುದಂತ ಕಾಣಿಸಿತು. ಅಲ್ಲದೆ ಈ ಕುಂಪಣಿಯವರನ್ನು ಕೆಣಕಲು ಅವರಿಗೆ ಮನಸ್ಸಿದ್ದ ಹಾಗಿಲ್ಲ. ಯಾಕೆಂದರೆ, ಇವರೂ ಅವರೂ ಬೀಗ ಬೀಗರಂತೆ."

ಮತ್ತೆ ಹಲವಾರು ವಿಷಯ ಚರ್ಚಿಸಿದ ತರುವಾಯ, ಹೋರಾಟಕ್ಕಾಗಿ ಹಣ ಕೂಡಿಸುವ ವಿಷಯ ಪ್ರಸ್ತಾಪಿಸಿ ರಾಣಿಯವರೆಂದರು.

"ನನಗೂ ಗೊತ್ತಿರುವಂತೆ ಸಂಸ್ಥಾನದ ಮುತ್ಸದ್ದಿಗಳ ಹತ್ತಿರ ರಾಜ್ಯದ ಸಂಪತ್ತನ್ನು ಗುಪ್ತವಾಗಿ ಇಟ್ಟಿತ್ತು. ಅವರನ್ನೆಲ್ಲಾ ಭೆಟ್ಟಿಯಾಗಿ, ಶಕ್ಯವಾದ ಷ್ಟನ್ನು ಕೂಡಿಸಿಕೊಳ್ಳಬೇಕು. ಕಿತ್ತೂರು ಶಿವಬಸಪ್ಪನವರ ಹತ್ತರವೇ ಬೊಕ್ಕಸದ ಆರೇಳು ಲಕ್ಷ ರೂಪಾಯಿ ಇದ್ದವು. ಅವರನ್ನು ಭೆಟ್ಟಿಯಾಗಿ ಕೇಳ ಬೇಕು."

ಅನಂತರ ಅಪ್ಪನವರು ತಾವೇ ಸ್ವತಃ ಕುಳಿತು ತಮ್ಮ ಹಸ್ತಾಕ್ಷರಗಳ ಲ್ಲಿಯೇ ಕೊಲ್ಲಾಪುರದ ರಾಜರಿಗೂ ಕಿತ್ತೂರ ಶಿವಬಸಪ್ಪ ಮೊದಲಾದವರಿಗೂ ಕಾಗದಗಳನ್ನು ಬರೆದುಕೊಟ್ಟರು. ಅವುಗಳನ್ನು ಕರಡಿಗೆಯಲ್ಲಿ ಬಚ್ಚಿಟ್ಟು ಕೊಂಡು ನಾನು ಎದ್ದು ಹೊರಡುತ್ತಿದ್ದಂತೆ, ರಾಣಿಯವರ ಸೊಸೆಯಂದಿರು ವೀರಮ್ಮ ಮತ್ತು ಜಾನಕೀದೇವಿಯರ ನೆನಪಾಗಿ,

"ಚಿಕ್ಕ ರಾಣಿಯರಿಬ್ಬರೂ ಎಲ್ಲಿದ್ದಾರೆ ಅಪ್ಪನವರೆ?" ಎಂದು ಕೇಳಿದೆ.

"ಜಾನಕೀದೇವಿಗೆ ಜಡ್ಡಾಗಿ ಹಾಸಿಗೆ ಹಿಡಿದಿದ್ದಾಳೆ. ವೀರಮ್ಮ ರಾಣಿ ಅತ್ತ ಬೇರೊಂದು ಮನೆಯಲ್ಲಿದ್ದಾಳೆ."

"ಅಂದರೆ? ವೀರಮ್ಮ ರಾಣಿಯವರು ತಮ್ಮ ಸಂಗಡ ಇಲ್ಲ ಅನ್ನಿರಿ?"

"ಇಲ್ಲ, ಇಬ್ಬರೂ ಕೂಡಿಯೇ ಇರಬೇಕೆಂದು ಇಬ್ಬರಿಗೂ ಇಚ್ಛೆಯಿದ್ದರೂ ಪರದೇಶಿಗಳ ಮನಸ್ಸಿಗೊಂದು ಬರಬೇಕಲ್ಲ? ಇಬ್ಬರಿಗೂ ಬೇರೆ ಬೇರೆ ವರ್ಷಾ ಶನವನ್ನೂ ನೇಮಿಸಿದರು. ವೀರಮ್ಮ ರಾಣಿಯವರಿಗೆ ಸಾವಿರ ರೂಪಾಯಿ ಯಾದರೆ ನನಗೂ ಜಾನಕೀದೇವಿಗೂ ಕೂಡಿ ಐದುನೂರು ರೂಪಾಯಿ. ಪ್ರತಿ ಯೊಂದರೊಳಗೂ ಇದೇ ತರಹ ತಾರತಮ್ಯ ಮಾಡಿ ಹುಕುಂ ಹೊರಡಿಸಿದ್ದಾರೆ."

"ಅಂತೂ ವೀರಮ್ಮ ರಾಣಿಯವರ ಊಟ-ಉಡಿಗೆ ಬೇರೆ ಕಡೆಗೆ, ನಿಮ್ಮದು ಬೇರೆ ಕಡೆಗೆ ಅಂದಂತಾಯ್ತು? ಅನ್ಯಾಯ....ಅನ್ಯಾಯ...ಭಯಂಕರ ಅನ್ಯಾಯ....ನೋಡೋಣ. ಇದೇ ಸ್ಥಿತಿ ಬಹಳ ದಿನ ಉಳಿಯೂದಿಲ್ಲ" ಎಂದು ಹೇಳಿ ಮತ್ತೊಮ್ಮೆ ಅಪ್ಪನವರ ಅಡಿಗಳಿಗೆರಗಿ ನಾನು ಅವರನ್ನು ಬೀಳ್ಕೊಂಡು ಹೊರಟೆ. ದಿವಾನಖಾನೆಯವರೆಗೂ ಬಂದು ನಮ್ಮೆಲ್ಲರನ್ನೂ ಹರಸಿ ಅವರು ತಮ್ಮ ಕೊಠಡಿಯ ಕಡೆಗೆ ನಡೆದು ಹೋದರು. ಅವರ ಆಕೃತಿ ಮರೆಯಾಗುವ ವರೆಗೂ ನೋಡುತ್ತ ನಿಂತಿದ್ದು ನಾವು ಅಲ್ಲಿಂದ ಹೊರಟೆವು.

ವಾಡೆಯ ಎದುರು ಕಾವಲು ಮಾಡುತ್ತಿದ್ದ ಮುಸಲ್ಮಾನ್ ಸಿಪಾಯಿ ಗಳು ಈಗ ಕಾಣಿಸಲಿಲ್ಲ. ಅವರ ಬದಲು ಮೈಸೂರಿನವರಂತೆ ತೋರುತ್ತಿದ್ದ ಸಿಪಾಯಿಗಳಿದ್ದರು.

"ಏನ್ರಯ್ಯ, ಎಷ್ಟು ದಕ್ಷಿಣೆ ಸಂಪಾದಿಸಿಕೊಂಡು ಬಂದಿರೊ?" ಎಂದ ಒಬ್ಬ ಸಿಪಾಯಿ.

ಒಬ್ಬೊಬ್ಬರಿಗೆ ಹತ್ತು ಹತ್ತು ರೂಪಾಯಿ ಕೊಟ್ಟರಪಾ, ನೀವ್ರೂ ಒಂದು ತಗೊಳ್ಳಿ." ಎಂದು ಹೇಳಿ ಆವರಿಗೆ ಒಂದೊಂದು ರೂಪಾಯಿ ಕೊಟ್ಟಾಗ ತಿಂಗಳಿಗೆ ಎರಡು ರೂಪಾಯಿಗಳ ಸಂಬಳ ಪಡೆಯುವ ಆ ಬಡ ಸಿಪಾಯಿಗಳು ಹರ್ಷದಿಂದ ಹಿಗ್ಗಿದರು. ಅಗತ್ಯವಿದ್ದಾಗಲೆಲ್ಲ ಆವರಿಗೆ ಹತ್ತಿಪ್ಪತ್ತು ರೂಪಾಯಿ ಲಂಚ ತೆತ್ತು ರಾಣಿಯವರ ಭೆಟ್ಟಿ ಪಡೆಯುವದು ಸುಲಭವೆಂದು ಮನವರಿಕೆಯಾಗುತ್ತಲೂ ನನಗೆ ತುಂಬ ಸಮಾಧಾನವೆನಿಸಿತು.

ಚೆನ್ನಮ್ಮ ರಾಣಿಯವರನ್ನು ಬೀಳ್ಕೊಂಡು ಹೊರಟ ತರುವಾಯ ನಾವು ಎಲ್ಲಿಯೂ ನಿಲ್ಲದೆ ಕಿತ್ತೂರಿಗೆ ಹೊರಟೆವು. ಕಿತ್ತೂರಿನಲ್ಲಿ ಆಗಲೂ ಕುಂಪಣಿಯವರ ಸೈನ್ಯವಿತ್ತು. ಅವರ ಗೂಢಚಾರರು ಸುತ್ತಲೂ ಅಲೆಯುತ್ತಿದ್ದರು. ಎಂತಲೇ, ಸರದಾರ್ ವೀರಪ್ಪನವರು ಹಗಲು ಹೊತ್ತು ಕಿತ್ತೂರಿನಲ್ಲಿ ಕಾಲಿಡುವುದು ಗಂಡಾಂತರದ ವಿಷಯವೇ ಆಗಿತ್ತು. ಕತ್ತಲಾಗುವವರೆಗೂ ಸಮೀಪದ ಹೊಲವೊಂದರಲ್ಲಿ ಕಾದು ಕುಳಿತಿದ್ದು ಅನಂತರ ತುಂಬ ಎಚ್ಚರಿಕೆಯಿಂದಲೇ ನಗರ ಪ್ರವೇಶ ಮಾಡಿದೆವು.

ಐದು ವರ್ಷಗಳ ದೀರ್ಘಾವಧಿಯ ತರುವಾಯ ನಮ್ಮ ಪ್ರೀತಿಯ ಕಿತ್ತೂರನ್ನು ನಾವು ನೋಡುತ್ತಿದ್ದುದು ಇದೇ ಮೊದಲು. ಭಾವಾವೇಶದಿಂದ ವೀರಪ್ಪನವರ ಗಂಟಲು ಬಿಗಿದುಬರುತ್ತಿತ್ತು. ಎಂತಲೇ, ನಾನು ಕೇಳುತ್ತಿದ್ದ ಪ್ರಶ್ನೆಗೆ ಅವರಿಂದ ಸಮರ್ಪಕವಾದ ಉತ್ತರ ದೊರೆಯಲಿಲ್ಲ. ರಾಯಣ್ಣ ಮಾತ್ರ ಈ ಅವಧಿಯಲ್ಲಿ ಅನೇಕ ಬಾರಿ ಕಿತ್ತೂರಿಗೆ ಬಂದು ಹೋಗಿದ್ದನಾದುದರಿಂದ, ವೀರಪ್ಪನವರಿಗಾದಂತೆ ಅವನಿಗೇನೂ ಉದ್ರೇಕವಾಗುತ್ತಿರಲಿಲ್ಲ.

"ಮೊದಲು ಯಾರನ್ನು ಭೆಟ್ಟಿಯಾಗೂದು ಸರದಾರ್ ಸಾಹೇಬರೆ?" ಎಂದು ಆತ ಕೇಳುತ್ತಲೂ ಅವರು ತುಟಿಗಳ ಮೇಲೆ ಬೆರಳಿಟ್ಟುಕೊಂಡು ಮೆಲ್ಲಗಿನ ಧ್ವನಿಯಲ್ಲಿ ಹೇಳಿದರು.

"ಸ್ವಲ್ಪ ಎಚ್ಚರದಿಂದ ಮಾತಾಡಬೇಕು ರಾಯಣ್ಣ. ಸರದಾರ್ ಗಿರದಾರ್ ಎಂಬ ಮಾತೇ ಆಡುವಂತಿಲ್ಲ. ಗೂಢಚಾರರ ಕಿವಿಗೆ ಬಿದ್ದರೆ ಗತಿಯೇನು ?"

"ಹಂಗಾದರ ನಿಮ್ಮನ್ನ ಏನಂತ ಕರಿಯೂದು? ಸ್ವಾಮಿಗಳೇ ಅನ್ನಬೇಕೋ ಹೆಂಗೆ?"

"ಅಯ್ಯನವರು ಅಂದರೆ ಸಾಕು. ನೆನಪಿರಲಿ-ನಾವು ಮೂವರೂ ಈಗ ಅಯ್ನವರೇ !" ಎಂದರು ವೀರಪ್ಪನವರು.

ಕಿತ್ತೂರಿನಲ್ಲಿ ಅವರ ಆಪ್ತೇಷ್ಟರಿಗೇನೂ ಕೊರತೆಯಿರಲಿಲ್ಲ. ಆದರೆ,

ವೀರಪ್ಪನವರು ಯಾರ ಮನೆಗೂ ಹೋಗದೆ, ನಮ್ಮನ್ನು ನೇರವಾಗಿ ಕಲ್ಮಠಕ್ಕೆ ಕರೆದುಕೊಂಡು ಬಂದರು. ಕತ್ತಲಾಗಿದ್ದುದರಿಂದ ಮಠದ ಮಹಾದ್ವಾರ ಮುಚ್ಚಲ್ಪಟ್ಟಿತ್ತು. ಹಿಂದಿನ ಬಾಗಿಲಿನಿಂದ ಪ್ರವೇಶಿಸಿ, ಕೈಕಾಲು ಮುಖ ತೊಳೆದುಕೊಂಡು ನಾವು ಓಲಗಶಾಲೆಗೆ ಬಂದಾಗ, ನಂದಾದೀಪದ ಬೆಳಕಿನಲ್ಲಿ ಪುರಾಣ ಗ್ರಂಥವೊಂದನ್ನು ಓದುತ್ತ ಕುಳಿತಿದ್ದ ಸ್ವಾಮಿಗಳು ಮೆಲ್ಲನೆ ತಲೆ ಯೆತ್ತಿ ನೋಡಿದರು.

"ಬರ್ರಿ, ಬರ್ರಿ, ಈ ಕಡೆ ಕೂತುಕೊಳ್ರಿ. ಯಾವೂರಿಂದ ಬರೋಣ ವಾಯ್ತು ?"

"ಉಳವಿಯ ಮಹಾಮನೆಯಿಂದ ಬಂದೆವು ಬುದ್ಧೀ !" ಎಂದು ಹೇಳುತ್ತ ವೀರಪ್ಪನವರು ಅಡ್ಡಬಿದ್ದರು.

ಉಳಿವೆಯ ಮಹಾಮನೆಯೆಂಬುದು ಸಾಂಕೇತಿಕ ಶಬ್ದವಾಗಿದ್ದಿತೊ ಏನೊ, ಕುಳಿತಿದ್ದ ಸ್ವಾಮಿಗಳು ಥಟ್ಟನೆದ್ದು ಬಂದು ವೀರಪ್ಪನವರ ಮೈದಡವಿ, ಪ್ರೀತಿಯಿಂದ ನಮ್ಮನ್ನೆಲ್ಲ ವೀಕ್ಷಿಸಿದರು.

"ಏಳ್ರಿ, ಮೊದಲು ಪ್ರಸಾದ ತಗೊಳ್ರಿ. ಆಮ್ಯಾಲ ಸುಖದುಃಖದ ಸಂಗತಿ ಮಾತಾಡಿದರಾಯ್ತು."

ಬಲುದೂರ ನಡೆದುಬಂದು ನಮಗೂ ತುಂಬ ಹಸಿವೆಯಾಗಿತ್ತು. ಸ್ವತಃ ಸ್ವಾಮಿಗಳೇ ನಿಂತುಕೊಂಡು ನಾವು ಹೊಟ್ಟೆತುಂಬ ಊಟ ಮಾಡುವಂತೆ ನೋಡಿಕೊಂಡರು. ಅನಂತರ, ತಮ್ಮ ಖಾಸಾಕೊಟಡಿಗೇ ನಮ್ಮನ್ನು ಕರೆ ದೊಯ್ದು, ಕೊಠಡಿಯ ಬಾಗಿಲು ಮುಚ್ಚಿ ಭದ್ರಗೊಳಿಸಿ, ಹೊರಗಡೆ ತಮ್ಮ ನಂಬುಗೆಯ ಸೇವಕನನ್ನು ಕಾವಲಿರಿಸಿ, ಸಮೀಪದಲ್ಲಿ ಯಾರನ್ನೂ ಸುಳಿಯ ಗೊಡದಂತೆ ತಿಳಿಸಿಬಂದರು.

"ಮಠದ ಮ್ಯಾಲೂ ಕಣ್ಣು ಇಟ್ಟಾರೇನ್ರಿ ಕುಂಪಣಿಯವರು?" ಎಂದರು ವೀರಪ್ಪನವರು.

"ಅದೇನೋ ಮೊದಲಿನಿಂದಲೂ ಅದ. ಕಿತ್ತೂರ ರಾಜರ ಗುರುಪೀಠ. ನಮ್ಮ ಸಲಹೆ ಕೇಳಿಕೊಂಡೇ ಹೊಸ ಹೊಸ ಕಾರ್ಯ ಮಾಡತಕ್ಕವರು. ಈಗಲೂ ರಾಣೀ ಸಾಹೇಬರು ಮ್ಯಾಲಿಂದ ಮ್ಯಾಲ ನಮ್ಮನ್ನ ಕರೆಯಿಸಿಕೊಳ್ಳುತ್ತಿರ್ತಾರ. ನಾವೇನಾದರೂ ಹೊಸ ಹಂಚಿಕೆ ಹಾಕಿ ಕುಂಪಣಿಯವರ ವಿರುದ್ಧ ಲಥಾಯಿ

ಸುರು ಮಾಡಬಹುದಂತ ಸಂಶಯ ಇದ್ದೇ ಇರಬೇಕು ಅವರಿಗೆ. ಅದಕ್ಕೇ ನಮ್ಮ ಚಲನವಲನಗಳನ್ನೆಲ್ಲಾ ಹದ್ದಿನ ಕಣ್ಣಿಂದ ಕಾಯ್ತಾ ಇರ್ತಾರ. ಮಠಕ್ಕೆ ಯಾರು ಬರ್ತಾರೆ, ಯಾರು ಹೋಗ್ತಾರೆ ಎಲ್ಲಾ ಎಲ್ಲಾ ವರದಿಯಾಗ್ತದ ಮಾಮಲೇದಾರರಿಗೆ," ಎಂದರು ಸ್ವಾಮಿಗಳು.

"ಮಠದಲ್ಲೇ ಗೂಢಚಾರರಿಲ್ಲವಲ್ಲ ಸ್ವಾಮೀಜಿ ?" ಎಂದು ನಾನು ಕೇಳಿದಾಗ ಅವರು ಮುಗುಳುನಗೆ ಬೀರಿ ಹೇಳಿದರು :

"ಇದ್ದಾರೋ ಇಲ್ಲೋ ಗುರುಸಿದ್ಧೇಶನಿಗೆ ಗೊತ್ತು. ದಿನಾಲು ಹತ್ತಿಪ್ಪತ್ತು ಮಂದಿ ಬಂದು ಹೋಗುವ ದೊಡ್ಡ ಮಠ. ಅಡಿಗೆಯವರು, ನೀರಿನವರು, ಪೂಜೆಯವರು ಅಂತ ಇಪ್ಪತ್ತು, ಇಪ್ಪತ್ತೈದು ಮಂದಿ ಆಳುಗಳಿದ್ದಾರ. ಅವರೆಲ್ಲಾ ನಮ್ಮ ವಿಶ್ವಾಸದವರೇ. ಆದರೂ ಹಣದ ಆಸೆ ಬಹಳ ಕೆಟ್ಟದ್ದು. ನಮ್ಮವರೇ ನಮ್ಮನ್ನು ಬೆನ್ನಲ್ಲಿ ಇರಿಯುವ ಕಾಲ ಇದು. ಯಾರನ್ನೂ ಪೂರ್ಣ ನಂಬುವಂತಿಲ್ಲ. ನಮ್ಮ ಮರಿಯೊಬ್ಬನನ್ನು ಬಿಟ್ಟು."

ಅಷ್ಟು ಹೇಳಿ, ಸ್ವಾಮಿಗಳು ಆ ವಿಷಯವನ್ನು ಅಷ್ಟಕ್ಕೇ ನಿಲ್ಲಿಸಿ ವೀರಪ್ಪನವರನ್ನು ಕುರಿತು ಕೇಳಿದರು.

"ಇಷ್ಟು ವರ್ಷ ಎಲ್ಲಿದ್ದಿರಿ? ಏನು ಕಥೆ? ನೀವು ಕಾಶಿಯತ್ತ ಹೋಗಿದ್ದಿರಂತ ಸುದ್ದಿಯಿತ್ತು. ಹೋದ ವರ್ಷ ಕಾಶೀ ಯಾತ್ರೆಯಿಂದ ಬಂದವರೊಬ್ಬರು ಹೇಳುತ್ತಾ ಇದ್ದರು. ಅಂತೂ ಸುರಕ್ಷಿತವಾಗಿದ್ದೀರಲ್ಲ ? ಅದೇ ದೊಡ್ಡದು."

ಗೋವಾದ ಸೀಮೆಯಲ್ಲಿದ್ದ ವಿಷಯವನ್ನು ಸ್ವಲ್ಪದರಲ್ಲಿಯೇ ವಿವರಿಸಿ ಮುನ್ನಾದಿನ ಚೆನ್ನಮ್ಮ ರಾಣಿಯವರನ್ನು ಭೆಟ್ಟಿಯಾದ ವಿಚಾರವನ್ನೂ ತಿಳಿಸಿ ವೀರಪ್ಪನವರೆಂದರು :

"ಪರದೇಶಿಗಳನ್ನು ಓಡಿಸೂದಕ್ಕೆ ಮತ್ತೊಮ್ಮೆ ಪ್ರಯತ್ನಮಾಡಿ ನೋಡಬೇಕಲ್ಲ ಬುದ್ಧಿ ?"

ಸಂತೋಷದ ಧ್ವನಿಯಲ್ಲಿ ಸ್ವಾಮಿಗಳು ಹೇಳಿದರು:

"ಐದು ವರ್ಷದಿಂದ ನಾವೂ ಅದೇ ಪ್ರಯತ್ನದಲ್ಲಿದೀವಿ. ಶಿವ ಇನ್ನೂ ಮನಸು ಮಾಡಲಿಲ್ಲ. ಈಗ ನಿಮ್ಮ ರೂಪದಲ್ಲಿ ಸಾಕ್ಷಾತ್ ವೀರಭದ್ರನೇ ಬಂದಂತಾಯ್ತು. ಏನಂದರು ರಾಣೀ ಸಾಹೇಬರು ?"

ಅಪ್ಪನವರೊಡನೆ ನಡೆದಿದ್ದ ಮಾತುಕಥೆಗಳ ಬಗೆಗೆ ತಿಳಿಸಿ, ಶಿವಬಸಪ್ಪ ನವರ ಹತ್ತಿರವಿದ್ದ ಸಂಸ್ಥಾನದ ಹಣದ ವಿಚಾರ ಪ್ರಸ್ತಾಪಿಸಿ ವೀರಪ್ಪನವ ರೆಂದರು:

"ಯುದ್ಧ ಅಂದ ಮೇಲೆ ಮೊದಲು ಹಣ ಬೇಕಲ್ಲ ಸ್ವಾಮಿಜಿ? ಶಿವಬಸ ಪ್ಪನವರಿಗೊಂದು ಪತ್ರ ಕೊಟ್ಟಿದಾರ ಅಪ್ಪನವರು. ಯಾರಾದರೂ ಹೋಗಿ ಅವರನ್ನು ಭೆಟ್ಟಿಯಾಗಿ ಕೇಳಿನೋಡಬೇಕು. ನಾವೀಗ ಬಂದದ್ದೂ ಅದಕ್ಕಾ ಗಿಯೇ."

ರಾಣಿಯವರ ಪತ್ರವನ್ನೋದುತ್ತ ಒಂದೆರಡು ನಿಮಿಷ ಮೌನವಾಗಿ ದ್ದರು ಸ್ವಾಮಿಗಳು. ಅನಂತರ ಪತ್ರವನ್ನು ವೀರಪ್ಪನವರ ಕೈಗೆ ಕೊಡುತ್ತ ನಿಧಾನವಾಗಿ ಹೇಳಿದರು :

"ಶಿವಬಸಪ್ಪನವರು ಮೊದಲಿನ ಹಾಗಿಲ್ಲ ಈಗ. ದೇವರು ಅವರಿಗೆ ಒಳ್ಳೆಯ ಬುದ್ಧಿಕೊಟ್ಟರೆ ಹಣಕೊಟ್ಟರೂ ಕೊಡಬಹುದು. ಇಲ್ಲವಾದರೆ ಇಲ್ಲ. ಅವರನ್ನು ಭೆಟ್ಟಿಯಾಗಲಿಕ್ಕೆ ನೀವು ಹೋಗೋದೂ ಚಲೋದಲ್ಲ. ಏನಾದರೂ ಘಾತ ಆಗಿ ಪ್ರಸಂಗ ಮೈಮೇಲೆ ಬರಬಾರದಲ್ಲ ?"

"ಅವರು ನಮ್ಮನ್ನು ವೈರಿಗಳಿಗೆ ಹಿಡಿದು ಕೊಡಬಹುದೇ ಸ್ವಾಮಿಜಿ ?"

"ಹೀಗೇ ಅಂತಾ ಹ್ಯಾಗೆ ಹೇಳೋದು? ಕಿತ್ತೂರಿನ ಮುಖ್ಯ ಮುಖ್ಯ ಸರದಾರರನ್ನೆಲ್ಲ ಉಪಾಯದಿಂದ ಕೈಯಲ್ಲಿಟ್ಟುಕೊಂಡಾರ ಕುಂಪಣಿಯವರು. ಮತ್ತೆ ಇಲ್ಲಿ ಗದ್ದಲವಾಗಬಾರದಂತಲೇ ಅವರು ಇಷ್ಟೆಲ್ಲಾ ವ್ಯವಸ್ಥೆ ಮಾಡ್ತಿ ರೋದು" ಎಂದರು ಸ್ವಾಮಿಗಳು.

ಶಿವಬಸಪ್ಪನವರನ್ನು ಭೆಟ್ಟಿಯಾಗಲು ತಾನೇ ಹೋಗುವುದಾಗಿ ವೀರಪ್ಪ ನವರು ಹೇಳಿದರಾದರೂ ಸ್ವಾಮಿಗಳು ಅದಕ್ಕೆ ಒಪ್ಪಿಗೆ ಕೊಡಲಿಲ್ಲ. ನಾನು ಮತ್ತು ರಾಯಣ್ಣ ಹೋಗಿಬರಬೇಕೆಂದು ಗೊತ್ತಾಯಿತು. ನಾವೂ ಬಹಳ ಎಚ್ಚರಿಕೆಯಿಂದಿರಬೇಕೆಂದೂ, ಗಂಡಾಂತರದ ಸಂಶಯ ಬಂದೊಡನೆಯೇ ಅಲ್ಲಿಂದ ಜಾರಿಕೊಳ್ಳಬೇಕೆಂದೂ ಸೂಚಿಸಿದರು.

ಕಾಲಜ್ಞಾನದ ಜಂಗಮರ ವೇಷದಲ್ಲಿಯೇ ನಾವು ಶಿವಬಸಪ್ಪನವರ ಮನೆಗೆ ಹೊರಟೆವು. ಕತ್ತಲಾಗಿದ್ದುದರಿಂದ ಓಣಿಗಳಲ್ಲಿ ಜನಸಂಚಾರ ಕಡಿಮೆ ಯಾಗಿತ್ತು. ಅಂಗಡಿ ಮುಂಗಟ್ಟುಗಳ ಬಾಗಿಲುಗಳೂ ಒಂದೊಂದಾಗಿ ಮುಚ್ಚಿ

ಕೊಳ್ಳುತ್ತಿದ್ದವು. ಪೇಟೆಯ ಕೊನೆಯಲ್ಲಿದ್ದ ಶಿವಬಸಪ್ಪನವರ ಮಹಡಿಯ ಮನೆಯೆದುರು ಆಳು ಮನುಷ್ಯನೊಬ್ಬ ಕಾವಲು ಮಾಡುತ್ತಿದ್ದ. ಆತನನ್ನು ವಿಚಾರಿಸಿದಾಗ, ಯಜಮಾನರು ಆದೇ ತಾನೇ ಊಟ ಮುಗಿಸಿ ಅಟ್ಟದ ಮೇಲೆ ವಿರಮಿಸಿಕೊಳ್ಳುತ್ತಿದ್ದರೆಂದು ತಿಳಿಯಿತು. ಜಂಗಮರಿಬ್ಬರು ಭೆಟ್ಟಿಗೆ ಬಂದಿರು ವರೆಂದು ಹೇಳಿ ಕಳಿಸಿದಾಗ ಸ್ವತಃ ಶಿವಬಸಪ್ಪನವರೇ 'ಅಟ್ಟದಿಂದಿಳಿದು ಬಾಗಿಲಿಗೆ ಬಂದರು.

"ಬರ್ರಿ, ಬರ್ರಿ, ಪ್ರಸಾದ ಸ್ವೀಕರಿಸೋಣವಾಗಲಿ ಮೊದಲು !" ಎಂದು ನಮ್ಮನ್ನು ಸೌಜನ್ಯದಿಂದಲೇ ಸ್ವಾಗತಿಸಿದರು.

"ಇದೇ ಈಗ ಮಠದಲ್ಲಿ ಊಟ ಮಾಡಿಕೊಂಡೇ ಬಂದೀವಿ ಅಣ್ಣಾ ನವರೇ !"

"ಓಹ್ಹೊ ! ಮಠಕ್ಕೆ ಹೋಗಿ ಬಂದಿರಾ ? ಏನಾದರೂ ಕೆಲಸವಿತ್ತೇನು?"

"ಹೌದು ಅಣ್ಣಾನವರೆ. ಸ್ವಲ್ಪ ಅರಿಕೆ ಮಾಡಿಕೊಳ್ಳುವದಿತ್ತು."

"ಬರ್ರಿ ಹಂಗಾದರೆ ! ಮ್ಯಾಲೇ ಬರ್ರಿ."

ಮಹಡಿಯ ಮೇಲಿನ ಆಸನಗಳಲ್ಲಿ ನಮ್ಮನ್ನು ಕೂಡ್ರಿಸಿ ತಾವು ನಿಂತು ಕೊಂಡಿದ್ದಂತೆಯೇ ಶಿವಬಸಪ್ಪನವರೆಂದರು.

"ನೀವಂತೂ ಇತ್ತ ಕಡೆಯವರಂತ ಕಾಣೂದಿಲ್ಲ ?"

"ಅಣ್ಣಾನವರು ಸರಿಯಾಗಿ ತಿಳಕೊಂಡಿರಿ. ನಾವು ಬೈಲಹೊಂಗಲ ದವರು."

ಬೈಲಹೊಂಗಲ ಎಂಬ ಶಬ್ದ ಕಿವಿಗೆ ಬೀಳುತ್ತಲೂ ಶಿವಬಸಪ್ಪನವರು ಬೆಚ್ಚಿ ನಮ್ಮನ್ನು ಸೂಕ್ಷ್ಮ ದೃಷ್ಟಿಯಿಂದ ನಿರೀಕ್ಷಿಸತೊಡಗಿದರು. ನಾವು ನಿಜವಾದ ಜಂಗಮರಾಗಿರದೆ ಯಾವುದೋ ಉದ್ದೇಶದಿಂದಾಗಿ ಜಂಗಮ ವೇಷ ಧರಿಸಿಕೊಂಡು ಬಂದಿರಬೇಕೆಂದೂ ಅವರಿಗೆ ಹೊಳೆದಿರಲು ಸಾಕು. ಅವರು ಅತ್ತಿತ್ತ ನೋಡಿ, ಸೇವಕರನ್ನು ಕರೆಯುವ ಲಕ್ಷಣ ಕಾಣಿಸುತ್ತಿ ದ್ದಂತೆಯೇ ನಾನು ನೇರವಾಗಿ ವಿಷಯ ಪ್ರಸ್ತಾಪಿಸಿದೆ.

"ನಾವು ಒಂದು ಕೆಲಸಕ್ಕಾಗಿ ತಮ್ಮ ಹತ್ತಿರ ಬಂದೀವಿ ಅಣ್ಣಾನವರೆ, ನಮ್ಮನ್ನು ಚೆನ್ನಮ್ಮ ರಾಣಿಯವರೇ ಕಳಿಸಿಕೊಟ್ಟಿದ್ದಾರೆ."

"ಹಿಂಗೇನು ? ನನಗೂ ಅನ್ನಿಸಿತು ಆಗಲೇ. ಏನಂತಾರ ಅಪ್ಪನವರು ? ನೆಟ್ಟಗಿರಬೇಕಲ್ಲ ?"

"ಏನ್ ನೆಟ್ಟಗೋ ಏನೋ! ಇದಾರೆ ಹಾಗೇ. ಈಗ ನಮ್ಮನ್ನು ಕಳಿಸಿದ್ದು ಯಾಕೆಂದರೆ-ತಮ್ಮ ಹತ್ತಿರ ಏನೋ ಸಂಸ್ಥಾನದ ಹಣ ಇದೆಯಂತಲ್ಲ? ಅದರಲ್ಲಿ ಸ್ವಲ್ಪವಾದರೂ ಸಿಕ್ಕಬಹುದೇ ಅಂತ ತಿಳುಕೊಳ್ಳಲಿಕ್ಕೆ."

ಶಿವಬಸಪ್ಪನವರ ಮುಖದ ಬಣ್ಣವೇ ಬದಲಾಯಿತು. ಆಸನದ ಮೇಲೆ ಕುಕ್ಕರಿಸುತ್ತ ಅವರೆಂದರು :

"ಈಗ ಯಾಕೆ ಬೇಕಂತೆ ಹಣ ?"

"ಕುಂಪಣಿಯವರು ಕೊಡುವ ವರ್ಷಾಶನ ಯಾತಕ್ಕೂ ಸಾಲುವದಿಲ್ಲಲ್ಲ ? ದೇವರು ಧರ್ಮ ಗುರುಜಂಗಮರಲ್ಲಿ ಅಪ್ಪನವರಿಗಿರುವ ಭಕ್ತಿಯಂತೂ ನಿಮಗೂ ತಿಳಿದದ್ದೇ ಇದೆ. ಇತ್ತಿತ್ತಲಾಗಿ ಜಂಗಮರಿಗೆ ದಕ್ಷಿಣೆ ಕೊಡಲಿಕ್ಕೂ ಹಣವಿಲ್ಲದೆ ತೊಂದರೆಯಾಗಿದೆ. ಅದಕ್ಕಾಗಿಯೇ ಕಳಿಸಿದ್ದಾರೆ ನಮ್ಮನ್ನು."

"ಅದು ಸರಿಯಪ್ಪ. ಆದರೆ, ಅಪ್ಪನವರ ಹೆಸರು ಹೇಳಿಕೊಂಡು ಎಷ್ಟೋ ಜನರು ಬರ್ತಾರೆ. ಹೋಗ್ತಾರೆ. ನೀವು ಅವರ ಕಡೆಯಿಂದಲೇ ಬಂದವರಂತ ನಂಬೂದು ಹೆಂಗ ?"

"ಇದೋ ನೋಡ್ರಿ. ಅಪ್ಪನವರು ಒಂದು ಪತ್ರಾನೂ ಕೊಟ್ಟಾರ," ಎಂದು ಹೇಳಿ ರಾಯಣ್ಣ ಎದ್ದು ಶಿವಬಸಪ್ಪನವರ ಹತ್ತಿರ ಹೋಗಿ ಆ ಕಾಗದ ತೋರಿಸಿದ. ಶಿವಬಸಪ್ಪ ಅದನ್ನೋದಿ ಮುಗಿಸುತ್ತಲೂ ರಾಯಣ್ಣ ಉಪಾಯದಿಂದ ಅದನ್ನು ಮತ್ತೆ ತೆಗೆದುಕೊಂಡ.

ಅಸಹಾಯಕನಂತೆ ಶಿವಬಸಪ್ಪನವರೆಂದರು :

"ಅಪ್ಪನವರಿಗೆ ಅಸಮಾಧಾನವಾಗ್ತದ : ಉಪಾಯವಿಲ್ಲ. ನಾನಾದರೂ ಏನು ಮಾಡಲಿ ? ನನ್ನ ಹತ್ತರ ಅಂತೂ ಈಗ ಹಣ ಇಲ್ಲ."

"ಬಾಪೂಸಾಹೇಬರು ನಿಮ್ಮ ಹತ್ತರ ನಾಲ್ಕೈದು ಲಕ್ಷ ರೂಪಾಯಿ ಕೊಟ್ಟಿದ್ದರಂತಲ್ಲ ಅಣ್ಣನವರೇ ?"

"ಕೊಟ್ಟಿದ್ರು. ಇಲ್ಲಂತ ಯಾರಂತಾರ ? ಅದರ ಲೆಕ್ಕ ಎಲ್ಲಾ ಆಗಲೇ ಕೊಟ್ಟೇನಲ್ಲ – ಟಾಕರೆ ಸಾಹೇಬರ ಎದುರಿಗೆ ? ಎರಡು ಲಕ್ಷ ರೂಪಾಯಿ ಮಲ್ಲಪ್ಪಸೆಟ್ರು ಇಸಕೊಂಡಿದ್ರು. ಇನ್ನುಳಿದದ್ದು ಚಿಕ್ಕರಾಣಿಯವರು

ತಕ್ಕೊಂಡ್ರು. ಸಂಸ್ಥಾನದ ಹಣ ನನ್ನ ಹತ್ತಿರ ಅಂತೂ ಒಂದು ದಮಡಿಯೂ ಇಲ್ಲ."

"ಆಯ್ತಲ್ಲ ಅಣ್ಣಾನವರೆ ? ನಿಮ್ಮ ಹತ್ತಿರ ಸ್ವಲ್ಪವಾದರೂ ಸಿಕ್ಕಬಹುದಂತ ಬಹಳ ಆಸೆಯಿತ್ತು ಅಪ್ಪನವರಿಗೆ. ಉಪಾಯವಿಲ್ಲ. ನಾವಿನ್ನು ಹೊರಡೋಣವೇ ?"

"ಕೂಡ್ರಿ, ಕೂಡ್ರಿ, ಒಂದಿಷ್ಟು ಹಾಲುಹಣ್ಣು ತಕ್ಕೊಂಡು ಹೋಗುವಿರಂತೆ," ಎಂದು ಹೇಳಿ ಶಿವಬಸಪ್ಪ ಸೇವಕರನ್ನು ಕೂಗುತ್ತಿದ್ದಂತೆಯೇ ನಾವು ಅಲ್ಲಿಂದೆದ್ದು ಶಿವಬಸಪ್ಪ ತಡೆಯುತ್ತಿದ್ದರೂ ನಿಲ್ಲದೆ ಧಡಧಡನೆ ಮೆಟ್ಟಿಲಿಳಿದು ಹೊರಟುಬಿಟ್ಟೆವು. ಹಣ್ಣು ಹಾಲು ತಿನ್ನಿಸುವ ನೆವದಿಂದ ನಮ್ಮನ್ನು ಹಿಡಿದು ಕೊಡುವದಕ್ಕೂ ಆತ ಹೇಸುವವನಲ್ಲವೆಂಬುದು ನನಗೆ ಚೆನ್ನಾಗಿ ಮನವರಿಕೆಯಾಗಿತ್ತು.

ಮತ್ತೆ ನಾವು ಮಠದಲ್ಲಿಯೂ ಉಳಿದುಕೊಳ್ಳುವುದು ಸುರಕ್ಷಿತವೆನಿಸಲಿಲ್ಲ. ಅವಸರದಿಂದಲೇ ಸ್ವಾಮಿಗಳನ್ನು ಬೀಳ್ಕೊಂಡು ಕತ್ತಲು ತುಂಬಿದ ಗಲ್ಲಿಗಳಲ್ಲಿ ನಡೆಯುತ್ತ ಕಿತ್ತೂರನ್ನು ತ್ಯಜಿಸಿ ಹೊರಟೆವು.

ಚೌಕಿಮಠದ ಬಳಿ ನಾವು ನಡೆದು ಬರುತ್ತಿದ್ದಂತೆ ಹಿಂದಿನಿಂದ ಕುದುರೆಗಳ ಖುರಪುಟದ ಧ್ವನಿ ಕೇಳಬಂದಿತು. ಶಿವಬಸಪ್ಪನ ಆಳುಗಳು ಬಲು ಚಟುವಟಿಕೆಯಿಂದ ಕೆಲಸ ಮಾಡಿದಂತಿದ್ದಿತು. ಕುಂಪಣಿಯ ಸೈನಿಕರು ಕಲ್ಮಠಕ್ಕೂ ಹೋಗಿ ನಮ್ಮನ್ನು ವಿಚಾರಿಸಿ, ನಮ್ಮನ್ನು ಹಿಂಬಾಲಿಸಿಕೊಂಡು ಬರುತ್ತಿದ್ದುದು ಸ್ಪಷ್ಟವಾಗಿತ್ತು.

ಉದ್ದವಾಗಿ ಬೆಳೆದಿದ್ದ ಕಬ್ಬಿನ ಬೆಳೆಯಲ್ಲಿ ಅಡಗಿ ಕುಳಿತು, ಪಂಜು ಹಿಡಿದುಕೊಂಡ ಕುದುರೆ ಸವಾರರು ಮುಂದೆ ಹೋಗುತ್ತಲೂ, ಕಬ್ಬಿನ ತೋಟದಿಂದ ಹೊರಬಂದು, ಎಡಗಡೆಗೆ ತಿರುಗಿಕೊಂಡು ಹೊಲಗಳಲ್ಲಿ ನಡೆಯುತ್ತ ಕಾಡು ಸೇರಿಕೊಂಡೆವು.

ಕೊಳ್ಳದಲ್ಲಿನ ನಮ್ಮ ಬಿಡಾರಕ್ಕೆ ಬರುವವರೆಗೂ ನಡುವೆ ಎಲ್ಲಿಯೂ ನಿಂತುಕೊಳ್ಳಲಿಲ್ಲ. ದೇವಾಲಯಕ್ಕೆ ಬಂದು ನೀರು ಕುಡಿದು ಸುಧಾರಿಸಿಕೊಂಡ ತರುವಾಯ ವೀರಪ್ಪನವರೆಂದರು :

"ಇನ್ನುಮ್ಯಾಲ ಇಂಥಾ ಪ್ರಸಂಗ ಮ್ಯಾಲಿಂದ ಮ್ಯಾಲ ಬರ್ತಾವ. ಎಲ್ಲಾ ಪಕ್ಕಾ ತಯಾರಾಗಬೇಕು ನಾವು."

"ನಮ್ಮಿಂದಾಗಿ ಸ್ವಾಮಿಗಳಿಗೇನೂ ತೊಂದರೆಯಾಗಿರಲಿಕ್ಕಿಲ್ಲವಷ್ಟೆ ?" ಎಂದೆ ನಾನು.

"ಅವರಿಗೇನಾಗತೈತಿ? ಮಠ ಅಂದಮ್ಯಾಲ ನಮ್ಮಂಥವರು ಎಷ್ಟೋ ಮಂದಿ ಬರ್ತಿರ್ತಾರೆ, ಹೋಗ್ತಿರ್ತಾರೆ. ಸ್ವಾಮಿಗಳಿಗೇನೂ ಯಾರೂ ಏನೂ ಮಾಡುವ ಹಂಗಿಲ್ಲಲ್ಲ ?" ಎಂದ ರಾಯಣ್ಣ.

"ನಮ್ಮಂಥವರನ್ನು ಮಠಕ್ಕೆ ಸೇರಿಸಬಾರದಂತ ಅವರಿಗೆ ತಾಕೀತು ಕೊಟ್ಟರೂ ಕೊಡಬಹುದೋ ಏನೋ ?" ಎಂದರು ವೀರಪ್ಪನವರು.

"ಆ ಶಿವಬಸಪ್ಪಗೆ ಚಲೋಬುದ್ಧಿ ಕಲಿಸಾಕಬೇಕು ನೋಡ್ರಿ. ನಾಕೈದು ಲಕ್ಷ ರೂಪಾಯಿ ನುಂಗಿದ್ದೂ ಅಲ್ಲದೆ ನಮ್ಮನ್ನು ವೈರಿಗಳಿಗೆ ಹಿಡುಕೊಡ ಲಿಕ್ಕೂ ತಯಾರಾದ ಕಳ್ಳ !" ಎಂದ ರಾಯಣ್ಣ.

"ಇರಲಿರಲಿ ರಾಯಣ್ಣ. ಅವ ಎಲ್ಲಿ ಹೋಗ್ತಾನೆ? ನಾವು ಸ್ವಲ್ಪ ತಯಾರೀ ಮಾಡಿಕೊಂಡು ಆಮ್ಯಾಲ ಮತ್ತೊಮ್ಮೆ ಅವನ್ನ ಮಾತಾಡಿಸೋಣ" ಎಂದರು ವೀರಪ್ಪನವರು.

ಇನ್ನೆರಡುದಿನ ಬಿಟ್ಟು ರಾಯಣ್ಣ ಮತ್ತೆ ಬರಬೇಕೆಂದೂ ಅನಂತರ ಅವನೂ ನಾನೂ ಕೂಡಿಕೊಂಡು ಕೊಲ್ಹಾಪುರಕ್ಕೆ ಹೊರಡುವುದೆಂದೂ ನಿಶ್ಚಯಿಸಿದೆವು.

ಬೆಳಗಿನಲ್ಲಿ ರಾಯಣ್ಣನನ್ನು ಅಷ್ಟುದೂರ ಕಳಿಸಿಬರಲು ಹೋಗಿದ್ದಾಗ ಆತ ಕೇಳಿದ :

"ಹೊಂಗಲದಾಗ ನಿನ್ನ ಕೆಲಸ ಅಂತೂ ಆಗಲಿಲ್ಲ ?" ಎಂದನಾತ.

"ಇಲ್ಲ. ಪಾರ್ವತಿ ಊರಲ್ಲಿರಲಿಲ್ಲವಂತೆ."

"ಎಲ್ಲಿಗೆ ಹೋಗಿದ್ದಾಳೆ ?"

"ಬೆಳವಡಿಯಲ್ಲೋ ಎಲ್ಲೋ ಆಕೆಯ ತಂಗಿಯ ಮನೆ ಇದೆಯಂತಲ್ಲ? ಆ ತಂಗಿಗೇನೋ ಆರೋಗ್ಯವಿಲ್ಲ ಅಂತ ನೋಡಿಕೊಂಡು ಬರಲು ಹೋಗಿ ದ್ದಾಳಂತೆ"

"ಪಾಪ! ಪಾಪ! ನೀನು ಹೊಂಗಲಕ್ಕೆ ಹೋದ ದಿನವೇ ಆಕೆ ಊರಿಗೆ ಹೋಗಬೇಕೆಂದರ! ನಿನ್ನ ಜೀವ ಅಲ್ಲೇ ಸುಳದಾಡತಿರಬೇಕಲ್ಲ?" ಎಂದು ಚೇಷ್ಟೆ ಮಾಡಿದ ರಾಯಣ್ಣ.

"ಈ ಸಲ ಭೆಟ್ಟಿಯಾಗದಿದ್ದರಿಲ್ಲ. ಮುಂದಿನ ಸಲ ಆಗಬಹುದಲ್ಲ? ನನಗೇನು ಅಂಥಾ ಆತುರ ಇಲ್ಲ."

"ಆತುರ ಇಲ್ಲಂದರ ಯಾರು ನಂಬತಾರಪಾ? ಅದೂ ಐದು ವರ್ಷದ ಮ್ಯಾಲ ಜೀವದ ಗೆಳತೀನ್ನ ಭೆಟ್ಟಿಯಾಗೂದಂದರ!"

"ಇರಲಿರಲಿ. ಕೊಲ್ಲಾಪುರದಿಂದ ಬಂದ ಮೇಲೆ ಹೋಗ್ತೇವಲ್ಲ ಹೊಂಗಲಕ್ಕೆ? ಆಗ ಪಾರ್ವತಿ ಖಂಡಿತ ಭೆಟ್ಟಿಯಾದಾಳು!" ಎಂದು ಹೇಳಿದೆ. "ನೀನು ಬರ್ತೀಯಲ್ಲ ನಾಡಿದು?"

"ಅದರಾಗೇನು ಸಂಶಯ? ನಾಡದು ಸಂಜೀಕಂದರ ಇಲ್ಲಿರ್ತೀನಿ."

"ಕುಲಕರ್ಣಿಯದೇನೊ ತ್ರಾಸ ಅಂತಿದ್ದಿಯಲ್ಲಪ್ಪ?"

"ಅದೇನು ಇದ್ದದ್ದೇ ಯಾವಾಗಲೂ. ಅದಕ್ಕೆಲ್ಲ ಸೊಪ್ಪು ಹಾಕುವವರ್‍ಯಾರು ?" ಎಂದ ರಾಯಣ್ಣ.

## ೮ ರಾಯನಾಯಕ

ಕೊಳ್ಳದಿಂದ ಹಿಂತಿರುಗಿ ಬಂದಾಗ ಮನೆಯಲ್ಲಿ ಅತ್ತಿಗೆಯೊಬ್ಬಳೇ ಇದ್ದಳು. ನಾನು ಊಟ ಮುಗಿಸಿ ಎದ್ದು ಹೊರಡುತ್ತಿದ್ದಂತೆ ಆಕೆ ಹೇಳಿದಳು:

"ನಿನ್ನೆ ಫಕೀರ ಮತ್ತೆ ಬಂದು ಬಹಳ ಗದ್ದಲಾ ಮಾಡಿದನಪಾ ರಾಯಣ್ಣಾ. ಕುಲಕರ್ಣಿ ನಿನ್ನ ಕರಸಿದ್ದನಂತ. ನೀ ಇಲ್ಲಂತ ಗೊತ್ತಾದ ಕೂಡಲೇ ಬಾಯಿಗೆ ಬಂದಂಗೆ ಒದರ್‍ಯಾಡಿದ. ಹೊಲದ ಕೆಲಸ ಬಿಟ್ಟುಕೊಟ್ಟು ಇವತ್ತು ಹಿರ್‍ಯಾನೇ ಹೋಗಿದಾನ ಚಾವಡೀಗೆ."

"ಹೋದರ ಹೋಗಲಿ ಬಿಡವ್ವಾ. ಅವನೂ ಒಂದೀಟು ಕಲೀಲಿ ಹಳಬಕೀ ಕೆಲಸಾ," ಎಂದು ಹೇಳಿ ನಾನು ಹೊರಗೆ ಹೊರಡಲು ಅಣಿಯಾಗುತ್ತಿದ್ದಂತೆ ಅತ್ತಿಗೆ ನನ್ನನ್ನು ತಡೆದು ಮತ್ತೆ ಹೇಳಿದಳು:

"ಹಳಬಕೀ ಕೆಲಸದಾಗ ಹಿರ್‍ಯಾಗ ಮನಸ್ಸಿಲ್ಲನ್ನೂದು ನಿನಗೂ ಗೊತ್ತs ಐತಲ್ಲ ರಾಯಣ್ಣಾ ? ಸರ್ಕಾರೀ ಕಚೇರಿಗೆ ಹೋಗೂದು, ಅಮಲ್ದಾರರ ಸಂಗಡ ಮಾತಾಡೂದು ಅಂದರೆ ಅವನ ಮೈಮ್ಯಾಲ ಮುಳ್ಳುಬರತೈತಿ. ಆದ್ರೂ ಇವತ್ತು ನಿರ್ವಾಹ ಇಲ್ಲಂತ ಹೋಗ್ಯಾನ. ನಾಳೆ ಮಾತ್ರ ಅವ ಯಾರು ಹೇಳಿದ್ರೂ ಹೋಗಾಕಿಲ್ಲ. ಅಲ್ಲದ ಹೊಲದ ಕೆಲಸ ಬ್ಯಾರೆ ಹಂಗ ಉಳಿತೈತಲ್ಲ? ಅದನ್ಯಾರು ಮಾಡುವವರು?"

"ಆಳು ಹಚ್ಚಿ ಮಾಡಿಸಬೇಕು? ನಾನೆರೆ ಏನ ಮಾಡ್ಲಿ?" ಎಂದು ನಾನು ಬೇಸರದಿಂದಲೇ ಹೇಳಿದೆ. ನನ್ನ ತಲೆಯಲ್ಲಿ ಆಗ ಕೊಲ್ಲಾಪುರದ ವಿಷಯವೇ ತಿರುಗುತ್ತಿತ್ತು. ಹಿಮ್ಮತಸಿಂಗನನ್ನು ಭೆಟ್ಟಿಯಾಗುವುದು, ಕೊಲ್ಲಾಪುರದ ದೊರೆಯನ್ನು ಕಾಣುವುದು, ಅಲ್ಲಿಂದ ದಂಡು ತೆಗೆದುಕೊಂಡು ಬಂದು ಚೆನ್ನಮ್ಮ ರಾಣಿಯವರನ್ನು ಸೆರೆಯಿಂದ ಬಿಡಿಸುವುದು, ಕಿತ್ತೂರನ್ನು ಪುನಃ ಕೈವಶ ಮಾಡಿಕೊಳ್ಳುವುದು-ಎಂದೆಲ್ಲ ಕನಸು ಕಾಣುತ್ತಿದ್ದವನಿಗೆ ಮನೆತನದ ಸಣ್ಣ ಪುಟ್ಟ ವಿಷಯಗಳಿಂದ ಕಿರಿಕಿರಿಯಾಗುವುದು ಸಹಜವಲ್ಲವೆ?

"ಆಳು ಹಚ್ಚಿ ಮಾಡಿಸಬೇಕಂತ ನೀನೇನೋ ಹೇಳುತ್ತೀ. ಆಳು ಪುಕಟ ಬರ್‍ತಾವೇನ? ನೀನರೆ ಹೊಲಾಮನೀ ಕೆಲಸಾ ಬಿಟ್ಟು ಆ ಊರು ಈ ಊರು

ಅಂತ ಪಿರೀಪಿರೀ ಯಾಕ ತಿರುಗುತ್ತೀ ರಾಯಣ್ಣಾ? ಲಗೂನ ನೇಗಿಲಾ ಹೊಡೀದಿದ್ದರೆ ಭೂಮಿ ಬಿರುಸಾಗತೈತಿ. ಆಮ್ಯಾಲ ಗಳೇ ಹೊಡೀಲಿಕ್ಕೂ ಬರೂದಿಲ್ಲ."

ಅತ್ತಿಗೆ ಹೇಳುತ್ತಿದ್ದುದೂ ನಿಜವೇ ಆಗಿದ್ದಿತು. ನನ್ನ ಸಂಗಡ ಆಕೆ ಇಷ್ಟು ವಿವರವಾಗಿ ಮಾತನಾಡುವುದೂ ಇದೇ ಮೊದಲಸಲವಾಗಿತ್ತು. ಎಂತಲೇ ನನ್ನ ತಲೆಯಲ್ಲಿನ ಕನಸುಗಳೆಲ್ಲ ದೂರವಾಗಿ, ನಾನು ವಾಸ್ತವ ಪ್ರಪಂಚವನ್ನು ಕುರಿತು ಯೋಚಿಸುವಂತಾಯಿತು.

"ನೀ ಅನ್ನೂದೂ ಖರೇ ಐತಿ ಅತ್ತಿಗೇ. ಗಳೇ ಅಷ್ಟು ಮುಗಿಸಿ ಬಿಡ್ತೀನಿ. ಅಣ್ಣಾಗ ಅದರ ಚಿಂತಿಬ್ಯಾಡ. ಹಳಬಕೀ ಕೆಲಸ ಮಾತ್ರ ಅವನs ನೋಡಿಕೊಳ್ಳಿ. ಇನ್ನೂ ಹತ್ತಿಪ್ಪತ್ತು ದಿವಸ ಚಾವಡಿಯ ಕಡೆ ಹೋಗೂದಕ್ಕೆ ನನ್ನಿಂದಾಗೂದಿಲ್ಲ" ಎಂದು ಹೇಳಿದವನೆ ಮನೆಯಿಂದ ಹೊರಟುಬಿಟ್ಟೆ. ನೆಟ್ಟಗೆ ಅಮಟೂರಿಗೆ ಹೋಗಿ ಚೆನ್ನಬಸಪ್ಪನನ್ನೂ ಸೈದನವರ ಬಾಳಾಸಾಹೇಬನನ್ನೂ ಭೆಟ್ಟಿಯಾಗಿ ಹೊಲದ ಹರಗುವಿಕೆಯ ಬಗೆಗೆ ತಿಳಿಸುತ್ತಲೂ ಅದೇ ರಾತ್ರಿ ಎಂಟು ಜೊತೆ ಎತ್ತು ಹೊಡೆದುಕೊಂಡು ಬಂದು ಭೂಮಿಯ ಗಳೇ ಮುಗಿಸಿಕೊಡುವುದಾಗಿ ಅವರು ಭರವಸೆಯಿತ್ತರು. ಸಾಕಷ್ಟು ಬೆಳದಿಂಗಳಿದ್ದುದರಿಂದ ಅದೊಂದು ರಾತ್ರಿಯಲ್ಲಿಯೇ ನೇಗಿಲು ಹೊಡೆಯುವ ಕಾರ್ಯ ಪೂರೈಸಿತು.

"ಹೊಲದ ಕೆಲಸ ಏನಿದ್ದರೂ ನಮಗೊಂದು ಮಾತು ತಿಳಿಸಿಬಿಡು ರಾಯಣ್ಣಾ. ನೀನೇನು ಅದರ ಚಿಂತೀ ಮಾಡಬ್ಯಾಡ. ನಾವೇ ಗೊಬ್ಬರ ಹಾಕಿ ನಾವೇ ಬಿತ್ತಿಕೊಟ್ಟು ಹೋಗ್ತೀವಿ. ಆತಿಲ್ಲೊ?" ಎಂದು ಮತ್ತೆ ಮತ್ತೆ ಭರವಸೆಯಿತ್ತು ಬಾಳಾಸಾಹೇಬನೂ ಚೆನ್ನಬಸಪ್ಪನೂ ಅಮಟೂರಿಗೆ ಹೊರಟು ಹೋದರು. ಆನೆಗಳ ಹಾಗಿದ್ದ ಎಂಟು ಜೊತೆ ಎತ್ತುಗಳನ್ನೂ ಆಳುಗಳನ್ನೂ ತೆಗೆದುಕೊಂಡು ಅವರು ಸಂಗೊಳ್ಳಿಯಲ್ಲಿ ಹಾಯ್ದು ಹೊರಟಿದ್ದಂತೆ ಜನರು ಕೌತುಕದಿಂದ ಆ ಮೆರವಣಿಗೆಯನ್ನು ನೋಡುತ್ತಿದ್ದರು. ಚಾವಡಿಯಲ್ಲಿದ್ದ ಕುಲಕರಣಿ ಆ ದೃಶ್ಯವನ್ನು ನೋಡಿದ್ದರೆ ಅವನ ಹೊಟ್ಟೆಯಲ್ಲಿ ಖಾರ ಕಲಿಸಿದಂತೆ ಆಗಿರಲೂಬಹುದು.

ಅಂದು ರಾತ್ರಿ ಅಣ್ಣನೂ ನಾನೂ ಒಟ್ಟಿಗೆ ಕುಳಿತುಕೊಂಡೇ ಊಟ

ಮಾಡಿದೆವು. ಊಟ ನಡೆದಿದ್ದಂತೆ ಚಾವಡಿಯ ಸಮಾಚಾರ ವಿವರಿಸುತ್ತಿದ್ದ ಅಣ್ಣ.

"ಕುಲಕರ್ಣಿಯ ಕಾಟ ಬಹಳಪಾ ರಾಯಣ್ಣಾ. ಒಂದು ಗಳಿಗಿ ಕುಂಡ್ರಾಕ ಕೊಡೂದಿಲ್ಲ. ಅತ್ತ ಹೋಗಿ ಬಾ, ಇತ್ತ ಹೋಗಿ ಬಾ, ಅವನ್ನ ಕರಕೊಂಡು ಬಾ ಅಂತ ಹುಕುಂ ಬಿಡ್ತಿರ್ತಾನ ಯಾವಾಗಲೂ. ಮಧ್ಯಾನ್ನ ದಾಗ ಬದನೀಕಾಯಿ, ಬಾಳೀ ಎಲಿ ಹೊತ್ತುಕೊಂಡುಹೋಗಿ ಸಂಪಗಾಂವಿಗೆ ಕೊಟ್ಟು ಬರಬೇಕಾತು. ಅಷ್ಟುದೂರ ಹೋಗಿ ದಣಿದು ಬಂದವ್ಯಾಲೂ ಒಂದೀಟು ತಣ್ಣಗೆ ಕುಂತೀನಂದರ ಕುಂಡ್ರಗೊಡಲಿಲ್ಲ. ಮತ್ತೆ ಗೌಡನ ಕರ್‍ಯಾಕ ಕಳಿಸಿಕೊಟ್ಟ. ಬೆಳಗಿನಿಂದ ತಿರುಗಿ ತಿರುಗಿ ಸಾಕಾಗಿ ಹೋಗ್ಯೈತಿ ನೋಡಪಾ."

ಅಣ್ಣನ ಬಗೆಗೆ ಕನಿಕರವೆನಿಸುತ್ತಿದ್ದಿತಾದರೂ ಆಗ ನಾನು ಏನನ್ನೂ ಆಡಲಿಲ್ಲ. ತಿಂಗಳೆರಡು ತಿಂಗಳ ಮಟ್ಟಿಗಾದರೂ ಅಣ್ಣ ಹಳಬಕಿಯ ಕೆಲಸ ಮುಂದುವರಿಸಿಕೊಂಡು ಹೋಗಬೇಕಾಗಿತ್ತು. ಅತ್ತ ಲಕ್ಷ್ಯಕೊಡುವುದು ನನ ಗಂತೂ ಸಾಧ್ಯವಿರಲಿಲ್ಲ. ಕೊಲ್ಹಾಪುರಕ್ಕೆ ಹೋದಮೇಲೆ ಏನಾಗುವುದೋ ಯಾರು ಬಲ್ಲರು? ಅಣ್ಣನಿಗೆ ಎಷ್ಟೇ ತೊಂದರೆಯಾದರೂ ಆತ ಅದನ್ನೆಲ್ಲ ಸಹಿಸಿಕೊಳ್ಳಲೇಬೇಕಾಗಿತ್ತು.

ಅಣ್ಣನ ಸ್ಥಿತಿಯನ್ನು ಕಂಡು ಅವ್ವನಿಗೂ ತಳಮಳವಾಗುವುದು ಸಹಜ ವಾಗಿತ್ತು. ಆತನಿಗೆ ಪಲ್ಯ ನೀಡುತ್ತಲಿದ್ದಂತೆ ಆಕೆಯೆಂದಳು.

"ಹಳಬಕೀ ಕೆಲಸ ನಿನಗೆ ಹೊಸಾದಂತ ಹಿಂಗನಿಸತೈತಪಾ ಸಿದ್ದಣ್ಣಾ. ಒಂದೆರಡು ವಾರ ಹೋದವ್ಯಾಲ ಎಲ್ಲಾ ರೂಢಿಯಾಗತೈತಿ. ಅಲ್ಲಿಯತನಕ ತಡಕೋಬೇಕಪಾ."

"ಹೊಲದಾಗ ಹಗಲೂ ರಾತ್ರೀ ದುಡಿದರೂ ನನಗೇನ ದಣಿವಾಗೂ ದಿಲ್ಲ ಅವ್ವಾ. ಆದರೆ, ಈ ಕೆಲಸಮಾತ್ರ ಮರ್‍ಯೋ ಬ್ಯಾಡಂತ ಅನಿಸತೈತಿ ನೋಡು," ಎಂದ ಅಣ್ಣ.

"ನಾಳೆಯಿಂದ ನೀನss ಹೋಗಾಕೋ ರಾಯಣ್ಣಾ?" ಎಂದಳು ಅವ್ವ.

"ಇನ್ನೊಂದೆಂಟು ದಿವಸ ನನಗಾಗೂದಿಲ್ಲ ಅವ್ವಾ."

"ಯಾಕೆ?"

"ನನಗೆ ಬ್ಯಾರೆ ಕೆಲಸೈತಿ. ನಾ ಊರಾಗಿರೂದಿಲ್ಲ."

"ಬ್ಯಾರೆ ಕೆಲಸಂದರ ಏನದು? ಸುಮ್ಮನ್ಯಾಕ ತಿರುಗತೀ ಅತ್ತಿತ್ತ?"

"ನಾನೇನ ಖಾಲೀ ತಿರುಗೂದಿಲ್ಲವ್ವ. ದೊಡ್ಡದೊಂದು ಕೆಲಸ ಗಂಟು ಬಿದ್ದೈತಿ. ಅದು ಮುಗಿದಮ್ಯಾಲ ನಿಮಗss ತಿಳೀತೈತಿ."

"ದೊಡ್ಡ ಕೆಲಸಂದರೇನ? ಮತ್ತೇನರ ಬಂಡಾಟ ಗಿಂಡಾಟ ನಡ ಸೀಯೋ ಏನ? ಮೊನ್ನೆ ಆ ಗಂಗಪ್ಪ ಬಂದದ್ದು ಅದಕ್ಕss ನೋ ಏನ!"

"ಈಗ ನಾ ಏನೂ ಹೇಳೂಹಂಗಿಲ್ಲ ಅವ್ವಾ. ಮುಂದೆ ನಿನಗss ಗೊತ್ತಾ ಗತೈತಿ ಎಲ್ಲಾ. ನಾ ಏನss ಮಾಡಿದರೂ ನಮ್ಮ ಮನೆತನಕ್ಕ ಮಸಿ ಹಚ್ಚುವ ಕೆಲಸಾ ಮಾತ್ರ ಎಂದೆಂದೂ ಮಾಡೂದಿಲ್ಲ."

"ಹುವ್. ನನಗೇನ ಗೊತ್ತಿಲ್ಲೇನ ಅದು? ಕೆಟ್ಟ ಕೆಲಸಾ ಮಾಡುವ ಮಗನss ಅಲ್ಲ ನೀ. ಆದ್ರೂ–ನನಗ ಯಾವಾಗಲೂ ಎದೆಗುದಿ ಇದ್ದss ಇರ ತೈತಿ ನೋಡು. ನೀ ಮನಿಗೆ ಬಂದು ಮಾರೀ ತೋರಿಸೂತನಕಾ ಜೀವದಾಗ ಜೀವ ಇರೂದಿಲ್ಲ ನನಗ," ಎಂದಳು ಅವ್ವ.

"ನಿನಗ ಅಂಥಾ ಯಾವ ಕೆಲಸ ಗಂಟುಬಿದ್ದೈತೋ ನನಗಂತೂ ತಿಳಿಯೂದಿಲ್ಲ!" ಎಂದ ಸಿದ್ದಣ್ಣ.

ನಾನು ಮಾಡುತ್ತಿದ್ದ ಕೆಲಸದ ಬಗೆಗೆ ಇವರಿಗೆಲ್ಲ ತಿಳಿಸಿಬಿಟ್ಟು ಇವರ ಕುತೂಹಲ ದೂರಗೊಳಿಸಲೇ? ಎಂದುಕೊಂಡೆನೊಮ್ಮೆ. ಆದರೆ, ಮರುಚಣದ ಲ್ಲಿಯೇ ನನಗೆನಿಸಿತು: ಅತ್ಯಂತ ರಹಸ್ಯದಿಂದ ನಡೆಯಬೇಕಾಗಿದ್ದ ಆ ವಿಷ ಯದ ಬಗೆಗೆ ಈಗಲೇ ಸುದ್ದಿ ಮಾಡುವುದು ಸರಿಯಲ್ಲ. ಹೆಂಗಸರ ಬಾಯಲ್ಲಿ ಗುಟ್ಟಿನ ಮಾತು ಉಳಿಯುವುದಿಲ್ಲವೆಂದು ಹಿರಿಯರು ಹೇಳುತ್ತಾರೆ. ಹಾಗೆ, ನಮ್ಮವ್ವನೇನು ಬೇರೆಯವರಿಗೆ ಹೇಳಲಿಕ್ಕಿಲ್ಲ. ಆದರೆ ಅತ್ತಿಗೆಯದೇನು ಭರ ವಸೆ? ತನ್ನ ಮೈದುನ ಬಂಟತನದ ಕೆಲಸಕ್ಕೆ ಹೋಗಿರುವನೆಂದು ಓರಗೆಯ ಹೆಂಗಸರೆದುರು ಜಂಬಕೊಚ್ಚಿಕೊಂಡಳೆಂದರೆ ಮುಗಿದೇ ಹೋಯಿತು. ಇಬ್ಬರು ಹೆಂಗಸರಿಗೆ ತಿಳಿದ ಸುದ್ದಿ ಊರಿಗೆಲ್ಲ ತಿಳಿಯುತ್ತದೆ. ಕುಲಕರ್ಣಿಗೂ ಗೊತ್ತಾಗುತ್ತದೆ. ಆತನಿಂದ ಅಮಲ್ದಾರನಿಗೆ. ಅನಂತರ ರಾಣಿಯವರ ಮೇಲಿನ ಕಾವಲು ಇನ್ನಷ್ಟು ಬಲಗೊಳ್ಳುತ್ತದೆ. ನಾನು ಎಲ್ಲಿಗೆ ಹೊರಟರೂ ಗೂಢಚಾರರು ಹಿಂಬಾಲಿಸಿ ಬರುವಂತಾಗುತ್ತದೆ. ಯಾರಿಗೆ ಗೊತ್ತು! ಅಮ

ಲ್ದಾರ ನನ್ನನ್ನು ಬಂಧಿಸಿದರೂ ಬಂಧಿಸಬಹುದು. ನನ್ನಿಂದಾಗಿ ಗಂಗಾಧರನೂ ವೀರಪ್ಪನವರೂ ಸೆರೆಯಾಳುಗಳಾಗಬೇಕಾದ ಪ್ರಸಂಗ ಬರಬಹುದು.

ಹಾಗೆ ಯೋಚಿಸಿ, ನನ್ನ ರಹಸ್ಯವನ್ನು ಎದೆಯಲ್ಲಿಯೆ ಅಡಗಿಸಿಟ್ಟು ಕೊಂಡು ತುಟಿ ಬಿಗಿದುಕೊಂಡು ಮೌನವಾಗಿದ್ದೆ. ಅಣ್ಣನೂ ಮತ್ತೆ ಪ್ರಶ್ನೆ ಕೇಳಲಿಲ್ಲ. ಊಟ ಮುಗಿಸಿ ಎದ್ದು ಹೋದ. ನಾನೂ ಕೈ ತೊಳೆದುಕೊಂಡು ಮಣೆಯಿಂದ ಏಳುತ್ತಿದ್ದಂತೆ, ನನ್ನ ಪಕ್ಕದಲ್ಲಿಯೇ ಊಟಕ್ಕೆ ಕುಳಿತಿದ್ದ ಹನುಮನೆಂದ.

"ನನಗೂ ಒಮ್ಮೆ ರಾಣೀಸಾಹೇಬರನ್ನ ತೋರಿಸಲ್ಲಪ್ಪಾ ಚಿಗಪ್ಪಾ?"

ನನಗೆ ಒಳಗೊಳಗೇ ಹೆದರಿಕೆಯಾಗದಿರಲಿಲ್ಲ. ನಾನು ರಾಣೀಸಾಹೇಬ ರನ್ನು ನೋಡಲು ಹೋಗಿದ್ದ ವಿಷಯ ಹನುಮಂತನಿಗಂತೂ ಗೊತ್ತಾಯಿತು! ಇವನಿಗೊಬ್ಬನಿಗೇ ಗೊತ್ತಾಗಿದೆಯೋ? ಅಥವಾ, ಊರಿಗೆಲ್ಲ ಗೊತ್ತಾಗಿ ದೆಯೋ?

"ನಾ ರಾಣೀಸಾಹೇಬರ ಹತ್ತರ ಹೋಗ್ತೀನಂತ ನಿನಗ್ಯಾರು ಹೇಳಿ ದರೋ ಹನುಮಣ್ಣಾ?"

"ಮತ್ತೆ? ನಿನ್ನೆ ರಾತ್ರಿ ಗಳೇ ಹೊಡಿಯುವಾಗ ಅಮಟೂರ ಚಿಗಪ್ಪ ಅಂತಿದ್ದಲ್ಲ?" ಎಂದ ಹನುಮ.

ನನ್ನ ಗೆಳೆಯ ಬಿಚ್ಚುಗತ್ತಿ ಚೆನ್ನಬಸಪ್ಪ ನಿನ್ನೆ ರಾತ್ರಿ ಈ ವಿಚಾರವಾಗಿ ಸಹಜವಾಗಿ ಮಾತನಾಡಿದ್ದುದೇನೋ ನಿಜವೇ ಆಗಿತ್ತು. ಗಳೇ ಹೊಡೆಯಲು ಬಂದಿದ್ದ ಜನರ ಗುಂಪಿನಲ್ಲಿ ಎಲ್ಲರೂ ವಿಶ್ವಾಸದವರೇ ಆಗಿದ್ದರು. ಆದರೂ, ಅವರೆದುರೂ ಕೂಡಾ ನಮ್ಮ ಇತ್ತೀಚಿಗಿನ ಚಟುವಟಿಕೆಗಳ ಬಗೆಗೆ ನಾನು ತಿಳಿಸಿರಲಿಲ್ಲ.

"ಸಮೀಪದಾಗಂತೂ ನಾ ಅವರ ಹತ್ರ ಹೋಗೂದಿಲ್ಲಪಾ ಹನು ಮಣ್ಣಾ. ಮತ್ತೊಮ್ಮೆ ಹೋಗುವಾಗ ನಿನ್ನ ಕರಕೊಂಡು ಹೋಗಲಿಕ್ಕೆ ಮರಿ ಯೂದಿಲ್ಲ....ಹುಂ!" ಎಂದು ಆಶ್ವಾಸನವಿತ್ತು ನನ್ನ ಕೊಠಡಿಗೆ ಬಂದು ಮಲಗಿಕೊಂಡೆ.

ಬೆಳಗಾಗುವುದರೊಳಗಾಗಿಯೇ ಎದ್ದು ಊರಿಗೆ ಹೊರಡುವುದಾಗಿ ಅಪ್ಪನಿಗೆ ಮೊದಲೇ ತಿಳಿಸಿದ್ದೆನಾದುದರಿಂದ ಆಕೆ ನನಗಿಂತ ಮೊದಲೇ ಎದ್ದು

ಆಡಿನ ಹಾಲು ಹಿಂಡಿ, ಕಾಸಿ ಸಿದ್ಧವಾಗಿರಿಸಿದ್ದಳು. ರಾತ್ರಿ ಉಳಿದಿದ್ದ ನವಣೆಯನ್ನವನ್ನೂ ಕೆನೆಮೊಸರನ್ನೂ ಕಲಸಿ ಹೊಟ್ಟೆತುಂಬ ಉಂಡು, ಮೇಲೆ ಆಡಿನ ಹಾಲು ಕುಡಿದು ತಾಯಿಗೆ ನಮಸ್ಕರಿಸಿ ನಾನು ಹೊರಡುತ್ತಿದ್ದಂತೆ ಆಕೆ ಕೇಳಿದಳು.

"ಎಂದು ಬರ್ತೀ ರಾಯಣ್ಣಾ?"

"ನಾಕೈದು ದಿನ ಆದೀತೋ ಏನೋ. ಮತ್ತೂ ನಾಕು ದಿನ ತಡಾ ಆದರೂ ನೀವೇನೂ ಚಿಂತೀ ಮಾಡಬ್ಯಾಡಿರವ್ವ. ನಿನ್ನ ಹರಕೆ ಒಂದಿದ್ದರೆ ನಾ ಎಲ್ಲಿಗೆ ಹೋದರೂ ಸುಕದಿಂದಲೇ ಇರ್ತೀನಿ."

"ಆತಪ್ಪಾ. ಹೋಗಿ ಗಡಾನss ಬಾ. ತಡಾ ಮಾಡಬ್ಯಾಡಾ."

ಬಾಗಿಲು ತೆಗೆದು ಹೊರಗೆ ಬಂದು ನೋಡಿದರೆ ಆಗತಾನೆ ನಸುಕು ಹರಿಯುತ್ತಿದ್ದುದೂ ಆಕಾಶದಲ್ಲಿ ನಕ್ಷತ್ರಗಳು ಆಗಲೂ ಲಕಲಕಿಸುತ್ತಿದ್ದುದೂ ಕಾಣಿಸಿತು. ನನ್ನನ್ನು ಹಿಂಬಾಲಿಸಿಕೊಂಡು ಬರಲು ಯತ್ನಿಸುತ್ತಿದ್ದ ಹುಲಿಯನ್ನು ಪ್ರೀತಿಯಿಂದಲೇ ಹಿಂದಕ್ಕಟ್ಟುತ್ತಿದ್ದಂತೆ ಎದುರಿಗಿನ ಕಟ್ಟೆಯ ಮೇಲೆ ಮಲಗಿದ್ದ ಇಸಮು ಮುಸುಕು ತೆಗೆದು ನನ್ನತ್ತ ನೋಡಿ ಮತ್ತೆ ಗೋಡೆಯತ್ತ ಹೊರಳಿಕೊಂಡಿತು. ಇದೇನು ಒಳ್ಳೆಯದಾಗಲಿಲ್ಲ-ಎಂದುಕೊಳ್ಳುತ್ತ ನಾನು ಒತ್ತರದಿಂದ ನಡೆಯುತ್ತ ನಮ್ಮ ಓಣಿಯನ್ನು ದಾಟಿ, ಮತ್ತೆ ನಾಲ್ಕು ನಿಮಿಷಗಳಲ್ಲಿಯೇ ಊರಿನ ಹೊರಭಾಗಕ್ಕೆ ಬಂದು ಕಿತ್ತೂರಿನ ಹಾದಿ ಹಿಡಿದು ಓಡತೊಡಗಿದೆ. ಒಂದು ತಾಸಿನೊಳಗಾಗಿ ಎರಡು ಹರದಾರಿ ಮುಗಿಸಿ, ಕಿತ್ತೂರಿನ ಹಾದಿ ಬಿಟ್ಟು, ಗುಡ್ಡದಲ್ಲಿ ಹಾಯ್ದು ಸೂರ್ಯ ನೆತ್ತಿಯ ಮೇಲೆ ಬರುವುದರೊಳಗಾಗಿ ಕೊಳ್ಳದ ಮೇಲ್ಭಾಗಕ್ಕೆ ಬಂದು ಮುಟ್ಟಿದೆ.

ವೀರಪ್ಪನವರೂ ಗಂಗಾಧರನೂ ನಾನು ಬರುವುದನ್ನೇ ಕಾದು ಕುಳಿತಂತಿದ್ದಿತು. ಊಟ ಮುಗಿಯುತ್ತಲೂ ಬೈರಾಗಿಗಳ ವೇಷ ಧರಿಸಿಕೊಂಡು ಗಂಗಾಧರನೂ ನಾನೂ ಹೊರಟುಬಿಟ್ಟೆವು. ಮತ್ತೆ ಗುಡ್ಡಗಳಲ್ಲಿಯೇ ಹಾಯ್ದು ಮಾರ್ಗಕ್ರಮಣ ಮಾಡುತ್ತ ಕತ್ತಲಾಗುವುದರೊಳಗಾಗಿ ಶಹಾಪುರದಲ್ಲಿ ಪ್ರವೇಶಿಸಿ ವೀರಪ್ಪನವರ ಕುಟುಂಬದವರಿದ್ದ ಮನೆಯನ್ನು ಹುಡುಕಿಕೊಂಡು ಹೊರಟೆವು.

ಅಂಥ ದೊಡ್ಡ ಪಟ್ಟಣದಲ್ಲಿ ಅವರ ಮನೆ ಹುಡುಕಿ ತೆಗೆಯುವು

ದೇನೂ ಸುಲಭದ ಕೆಲಸವಾಗಿರಲಿಲ್ಲ. ಸರದಾರ್ ವೀರಪ್ಪನವರ ಹೆಸರನ್ನಂತೂ ನಾವು ಹೇಳುವಂತಿರಲಿಲ್ಲ. ಯಾವುದೋ ಒಂದು ದೇವಸ್ಥಾನದ ಹತ್ತಿರ ಅವರ ಮನೆಯಿದ್ದುದಷ್ಟೇ ನಮಗೆ ಗೊತ್ತಿದ್ದಿತು. ಶಹಾಪುರದಂಥ ಪಟ್ಟಣದಲ್ಲಿ ದೇವಸ್ಥಾನಗಳಿಗೆ ಕೊರತೆಯೇ? ಹತ್ತಾರು ದೇವಸ್ಥಾನಗಳ ಬಳಿ ಹುಡುಕಿ, ನಿರಾಶರಾಗಿ ನಾವು ಅರಳಿಮರದ ಕಟ್ಟೆಯೊಂದರ ಮೇಲೆ ಕುಳಿತು ವಿಶ್ರಮಿಸಿ ಕೊಳ್ಳುತ್ತಿದ್ದಂತೆ ನಮ್ಮ ಎಡಗಡೆಗಿದ್ದ ಮನೆಯ ಬಾಗಿಲಲ್ಲಿ, ಹರೆಯದ ಹುಡುಗನೊಬ್ಬನ ಮುಖ ಕಾಣಿಸಿಕೊಂಡಿತು. ಆತ ವೀರಪ್ಪನವರ ಹಿರಿಯ ಮಗನಾದ ಸದಾಶಿವಪ್ಪನೆಂಬುದು ಅಂಥ ಮಂದ ಬೆಳಕಿನಲ್ಲೂ ನಿಸ್ಸಂಶಯ ವಾಗಿ ಗೊತ್ತಾಯಿತು. ನಾನು ಥಟ್ಟನೆದ್ದು, ಆತನ ಹತ್ತಿರ ಹೋಗಿ ಪಿಸು ಧ್ವನಿಯಲ್ಲಿ ವಿಚಾರಿಸಿದೆ.

"ನೀವು ಕಿತ್ತೂರಿನವರು, ನಿನ್ನ ಹೆಸರು ಸದಾಶಿವಪ್ಪ–ಅಲ್ಲಾ?"

ಬೈರಾಗಿಯ ವೇಷದಲ್ಲಿದ್ದ ನನ್ನನ್ನು ಆತ ಗುರುತಿಸದಿದ್ದುದು ಸಹಜವೇ ಆಗಿತ್ತು. ಎಂತಲೇ ಸಂಶಯದ ಧಾಟಿಯಲ್ಲಿಯೇ ಆತನೆಂದ:

"ಇದ್ದರೂ ಇರಬಹುದು. ನಿಮಗೇನಾಬೇಕು ಆದರಿಂದ? ಭಿಕ್ಷೆ ನೀಡಿಸಿ ಕೊಂಡು ಮುಂದೆ ನಡೀರಿ."

ಬೀದಿಯಲ್ಲಿ ಯಾರ ಸುಳುವೂ ಇಲ್ಲದಿದ್ದುದನ್ನು ನೋಡಿ ನಾನು ಅವನ ಕಿವಿಯ ಹತ್ತಿರ ಬಾಯಿರಿಸಿ ನಾನಾರೆಂಬುದನ್ನು ಸ್ಪಷ್ಟಪಡಿಸುತ್ತಲೂ ಸದಾಶಿವಪ್ಪನ ಮುಖ ಆನಂದ-ಆಶ್ಚರ್ಯಗಳಿಂದ ಇಷ್ಟಗಲವಾಯಿತು. ನಾನು ಕಿತ್ತೂರಿನಲ್ಲಿದ್ದಷ್ಟು ದಿನವೂ ವೀರಪ್ಪನವರ ಮನೆಯಲ್ಲಿ ನನ್ನ ಬಳಕೆ ವಿಶೇಷ ವಾಗಿತ್ತು. ಆಗ ಇನ್ನೂ ಬಾಲಕನಾಗಿದ್ದ ಸದಾಶಿವಪ್ಪನಂತೂ ಯಾವಾಗಲೂ ನನ್ನನ್ನು ಅಂಟಿಕೊಂಡೇ ಇರುತ್ತಿದ್ದ. ಕತ್ತಿವರಸೆ, ಕುದುರೆ ಸವಾರಿಗಳನ್ನೂ ನಾನು ಆತನಿಗೆ ಹೇಳಿಕೊಡುತ್ತಿದ್ದುದಿತ್ತು. ಎಂತಲೇ ಐದು ವರ್ಷಗಳ ದೀರ್ಘಾವಧಿಯ ತರುವಾಯ ನನ್ನನ್ನು ಕಂಡಾಗ ಅವನಿಗೆ ತುಂಬಾ ಸಂತೋಷವಾಗುವುದು ಸಹಜವಾಗಿತ್ತು.

ಅವಸರದಿಂದಲೇ ನಮ್ಮಿಬ್ಬರನ್ನೂ ಮನೆಯೊಳಗೆ ಕರೆದುಕೊಂಡು ಬಾಗಿಲು ಮುಚ್ಚಿ, ಭದ್ರಗೊಳಿಸಿ ಸದಾಶಿವಪ್ಪ ನಮ್ಮನ್ನು ನಡುಮನೆಗೆ ಕರೆ ದೊಯ್ದ. ಆತನ ತಮ್ಮಂದಿರೂ ತಂಗಿಯರೂ ನಮ್ಮ ಸುತ್ತ ನೆರೆದು ನಮ್ಮ

ವೇಷವನ್ನು ಕೌತುಕದಿಂದ ನಿರೀಕ್ಷಿಸುತ್ತಲಿದ್ದರು. ಒಳಗಡೆ ಅಡುಗೆಯಲ್ಲಿ ತೊಡಗಿಕೊಂಡಿದ್ದ ಆತನ ತಾಯಿ ಗೌರವ್ವನವರು ಮಗನ ಧ್ವನಿ ಕೇಳಿ ಆತುರತೆಯಿಂದ ಧಾವಿಸಿಬಂದರು. ಅಷ್ಟರೊಳಗಾಗಿ ನಾವು ಕೃತಕ ಗಡ್ಡ ಗಳನ್ನೂ ಜಡೆಗಳನ್ನೂ ತೆಗೆದಿರಿಸಿದ್ದೆವಾದುದರಿಂದ ನಮ್ಮನ್ನು ಗುರುತಿಸಲು ಅವರಿಗೇನೂ ಕಷ್ಟವಾಗಲಿಲ್ಲ.

"ರಾಯನಾಯಕಾ! ಗಂಗಾಧರಪ್ಪ! ಅವರು? ಅವರು?" ಎಂದು ಉದ್ಗಾರ ತೆಗೆಯುತ್ತ ಗೌರವ್ವನವರು ಗೋಡೆಗೊರಗಿ ಕುಳಿತು ಪತಿಯನ್ನು ಜ್ಞಾಪಿಸಿಕೊಂಡು ಕಣ್ಣೀರು ಸುರಿಸತೊಡಗಿದರು.

"ಸರದಾರ್‌ಸಾಹೇಬರು ಆರಾಮ ಇದಾರ ಅವ್ವನವರ. ನೀವೇನೂ ದುಕ್ಕ ಮಾಡಬಾರದು. ಇಲ್ಲಿಯ ಸ್ಥಿತಿಗತಿ ತಿಳುಕೊಳ್ಳಲಿಕ್ಕಂತಲೇ ನಮ್ಮನ್ನು ಕಳಿಸ್ಯಾರ. ಇಷ್ಟರಲ್ಲೇ ಅವರೂ ಬರ್ತಾರ," ಎಂದೆ ನಾನು.

"ಬರ್ತಾರ? ಯಾವಾಗ ಬರ್ತಾರ?"

"ಇಲ್ಲಿ ಗಂಡಾಂತರ ಇರದಿದ್ದರೆ ಮಾತ್ರ ಅವರು ಬರ್ತಾರ. ಅದನ್ನು ತಿಳಿದುಕೊಂಡು ಹೋಗಲಿಕ್ಕೇ ನಾವೀಗ ಬಂದೀವಿ."

"ಅಂತೂ ಆರಾಮ ಅದಾರಲ್ಲ? ದೇವರು ದೊಡ್ಡಾಂವ, ನನ್ನ ಮಂಗಲ ಸೂತ್ರದ ಪುಣ್ಯ!" ಎಂದು ಹೇಳುತ್ತ ಗೌರವ್ವನವರು ಕಣ್ಣೊರಸಿಕೊಂಡರು.

ಮತ್ತೆ ಆ ಮಾತು ಈ ಮಾತು ನಡೆಯಿತು. ಚೆನ್ನಮ್ಮರಾಣಿ ವೀರಮ್ಮ ರಾಣಿಯವರ ಆರೋಗ್ಯದ ಪ್ರಸ್ತಾಪ ಬಂತು. ತಾವು ಶಹಾಪುರಕ್ಕೆ ಬಂದು ನೆಲಸಿದ ಹೊಸದರಲ್ಲಿ ಒಂದೆರಡು ವರ್ಷಗಳ ಕಾಲ ಗೂಢಚಾರರು ಬಂದು ಹೋಗುತ್ತಿದ್ದುದನ್ನೂ ಅನಂತರ ಅವರ ಸುಳಿದಾಟವಿಲ್ಲದಿದ್ದುದನ್ನೂ ಸದಾ ಶಿವಪ್ಪ ತಿಳಿಸಿದ. ಬೆಳ್ಳಿಬಂಗಾರದ ಒಡವೆಗಳ ಸಣ್ಣ ಅಂಗಡಿಯೊಂದನ್ನು ತೆರೆದು ಅವರು ಕುಟುಂಬ ನಿರ್ವಹಣೆ ಮಾಡುತ್ತಿದ್ದುದೂ ಗೊತ್ತಾಯಿತು. ತಂಗಿಯರಿಗೆ ವಿವಾಹದ ವಯಸ್ಸಾದುದರಿಂದ ಯೋಗ್ಯರಾದ ವರಗಳನ್ನು ಹುಡುಕುತ್ತಿರುವುದಾಗಿಯೂ ಆತ ತಿಳಿಸಿದ.

ಊಟ ನಡೆದಿದ್ದಂತೆ ನಾನು ಕೇಳಿದೆ :

"ಈಗ ಸರದಾರ್ ಸಾಹೇಬರು ಇಲ್ಲಿಗೆ ಬರಲಿಕ್ಕೆ ಅಡ್ಡಿಯಿಲ್ಲಲ್ಲ ಹಂಗಾದ್ರೆ?"

"ಈಗೇನೂ ಅಂಜಿಕೆಯಿಲ್ಲ. ಆದರೂ ವೇಷ ಹಾಕ್ಕೊಂಡು ಬರೂದೇ ಉತ್ತಮ. ಸುಮ್ಮನೆ ಬೆಂಕಿಯ ಸಂಗಡ ಆಟ ಯಾಕೆ?"

"ಹೌದು. ನೀವನ್ನೂದೂ ಬರಾಬ್ಬರಿ. ಇನ್ನೊಂದು ವಾರ ಬಿಟ್ಟು ಅಣ್ಣನವರನ್ನು ಕರ್‍ಕೊಂಡು ಬರ್‍ತೀವಿ. ಅವರು ಮತ್ತೆ ಕಿತ್ತೂರ ನಾಡಿಗೆ ಬಂದದ್ದು ಮಾತ್ರ ಯಾರಿಗೂ ಗೊತ್ತಾಗಬಾರದು" ಎಂದು ನಾನು ಹೇಳಿದೆ.

ಆ ರಾತ್ರಿ ಅಲ್ಲಿಯೇ ಮಲಗಿಕೊಂಡಿದ್ದು ಬೆಳಗಾಗುವುದರೊಳಗಾಗಿ ಎದ್ದು ಕೊಲ್ಲಾಪುರದ ಹಾದಿ ಹಿಡಿದು ಹೊರಟೆವು.

# ಗಂಗಾಧರ

೯

ಕೊಲ್ಲಾಪುರವು ನಮ್ಮಿಬ್ಬರಿಗೂ ಅಪರಿಚಿತವಾದ ಊರು. ನಾನೇ ಆಗಲಿ, ರಾಯಣ್ಣನೇ ಆಗಲಿ, ಆ ನಗರವನ್ನು ಈ ಮೊದಲೆಂದೂ ನೋಡಿ ದವರಲ್ಲ. ಮರಾಠೀ ಮಾತನಾಡುವವರ ಈ ಸೀಮೆಯ ಕಡೆಗೆ ನಾವು ಬಂದದ್ದೂ ಕಡಿಮೆಯೇ. ಚೆನ್ನಮ್ಮರಾಣಿಯವರ ತವರೂರಾದ ಕಾಕತಿಯನ್ನು ನಾನೊಮ್ಮೆ ನೋಡಿದ್ದೆ, ಅಷ್ಟೆ. ಅದರಿಂದೀಚೆಗೆ ನಾವು ಅಡಿಯಿರಿಸಿರಲಿಲ್ಲ. ಈ ಮರಾಠೀ ಭಾಷೆಯೂ ನಮಗೆ ತಿಳಿಯದು. ಎಂತಲೇ, ಕೊಲ್ಲಾಪುರದ ಸನಿಯಕ್ಕೆ ಬರುತ್ತಿದ್ದಂತೆ ನಮಗೆ ಬಹಳ ತೊಂದರೆಯಾಗತೊಡಗಿತು ಅರ್ಥಾತ್–ನಾವು ಸಾಧುಗಳ ವೇಷ ಹಾಕಿಕೊಂಡೇ ಹೊರಟಿದ್ದೆವು. ಇಂಗ್ರ ಜರ ಗೂಢಚಾರರು ಎಲ್ಲ ಕಡೆಗೂ ಅಲೆಯುತ್ತಿದ್ದುದರಿಂದ ನಾವು ಬಹಳ ಎಚ್ಚರಿಕೆಯಿಂದಲೇ ಸಂಚರಿಸಬೇಕಾಗಿದ್ದಿತು.

ಕೊಲ್ಲಾಪುರಕ್ಕೆ ಬಂದು ತಲುಪಿದುದೇನೋ ಆಯಿತು. ಆದರೆ, ನಗರದ ಎಲ್ಲ ಅಗಸೆಗಳಲ್ಲೂ ಬಲವಾದ ಕಾವಲಿದ್ದುದರಿಂದ ಒಳಗೆ ಪ್ರವೇಶಿಸುವುದೇ ಕಠಿಣವೆನಿಸತೊಡಗಿತು. ಕೊಲ್ಲಾಪುರದ ಛತ್ರಪತಿ ಬಾಬಾಸಾಹೇಬರೂ ಸಹ ಇಂಗ್ರಜರ ವಿರುದ್ಧ ಯುದ್ಧದ ಸಿದ್ಧತೆಯಲ್ಲಿ ತೊಡಗಿದ್ದುದರಿಂದ ಈ ಬಗೆಯ ಕಟ್ಟುನಿಟ್ಟಿನ ಪಹರೆ ಅಗತ್ಯವಾಗಿರಬೇಕು.

ಕಾವಲುಗಾರರ ಮುಖ್ಯಸ್ಥ ಮತ್ತೆ ಮತ್ತೆ ನಮ್ಮನ್ನು ವಿಚಾರಿಸಿದ :

"ಕೊಲ್ಲಾಪುರದಲ್ಲಿ ನಿಮಗೇನು ಕೆಲಸ? ಯಾರನ್ನ ಭೆಟ್ಟಿಯಾಗಲಿಕ್ಕೆ ಬಂದೀರಿ?"

"ನಮಗಿಲ್ಲಿ ಯಾರದೂ ಗುರುತಿಲ್ಲ ಮಹಾರಾಜ್. ನಾವಂತೂ ಬೈರಾಗಿ ಗಳು. ದೇಶಸಂಚಾರ ಮಾಡುತ್ತ ದೇವರ ದರ್ಶನ ಪಡೆದು ಆಯುಷ್ಯ ಸಾರ್ಥಕ ಮಾಡಿಕೊಳ್ಳಲು ಹೊರಟವರು. ಕೊಲ್ಲಾಪುರದ ಜಗದಂಬೆಯ ಕೀರ್ತಿ ಕೇಳಿ ಇಲ್ಲಿಗೆ ಬಂದಿದ್ದೇವೆ, ಅಷ್ಟೇ."

"ನಿಮ್ಮಂಥಾ ಸಾಧುಗಳು ನೂರಾರು ಮಂದಿ ಬರ್‍ತಾರೆ. ಈಗ ಯಾರನ್ನೂ ನಂಬುವಂತಿಲ್ಲ. ಬೈರಾಗಿಗಳ ವೇಷ ಹಾಕಿಕೊಂಡು ಬರುವ

ರನ್ನಂತೂ ಚೆನ್ನಾಗಿ ಪರೀಕ್ಷೆ ಮಾಡಬೇಕಂತ ಹುಕುಂ ಇದೆ ನಮಗೆ" ಎಂದು ಹೇಳಿ ನಮ್ಮ ಒಟ್ಟೆಗಳನ್ನೆಲ್ಲ ತೆಗೆಯಿಸಿ ಸೂಕ್ಷ್ಮವಾಗಿ ಪರೀಕ್ಷೆ ಮಾಡಿದ ಅಧಿಕಾರಿ. ನಮ್ಮ ಅದೃಷ್ಟ ಚೆನ್ನಾಗಿತ್ತು. ನನ್ನ ಕರಡಿಗೆಯನ್ನು ಮಾತ್ರ ಆತ ತೆಗೆದು ನೋಡಲಿಲ್ಲ.

"ನೀವು ಲಿಂಗಾಂಗಿಗಳೇನು?"

"ಹೌದು ಮಹಾರಾಜ್, ನಾವು ಜಂಗಮರು."

"ಏನಡ್ಡಿಯಿಲ್ಲ. ನಮ್ಮೂರಲ್ಲೂ ಅನೇಕ ಮಂದಿ ಜಂಗಮ ಬಾಬಾಗಳಿದ್ದಾರೆ. ನಿಮಗೆ ಊಟ ಉಡಿಗೆಗೂ ಅನುಕೂಲವಾದೀತು. ಹುಪ್, ನೀವು ಬಂದದ್ದೆಲ್ಲಿಂದ?"

"ಶಹಾಪುರದಿಂದ ಬಂದೀವಿ ಮಹಾರಾಜ್."

"ಅಚ್ಛಾ. ಕೊತ್ವಾಲರಿಗೆ ಕೇಳಿ ನಿಮ್ಮನ್ನು ಊರಲ್ಲಿ ಬಿಡಬಹುದೋ ಹ್ಯಾಗೆ ವಿಚಾರಿಸುತ್ತೀನಿ. ಅದುವರೆಗೆ ನೀವು ಆ ಮಾರುತಿಯ ಗುಡಿಯಲ್ಲಿದ್ದು ಬಿಡಿ," ಎಂದು ಹೇಳಿ ಆ ಅಧಿಕಾರಿ ಹೊರಟು ಹೋದ.

ನಗರ ಪ್ರವೇಶವೇ ಇಷ್ಟು ಕಠಿಣವಾಗಿರುವಾಗ ಇನ್ನು ಛತ್ರಪತಿಯ ದರ್ಶನ ಎಷ್ಟು ಕಠಿಣವಾಗುವುದೋ? ಎಂದು ಚಿಂತಿಸುತ್ತ ನಾವು ಊರ ಹೊರಗಿನ ದೇವಾಲಯದಲ್ಲಿ ಎರಡು ದಿನ ಕಳೆದೆವು. ಅಂದು ಸಂಜೆ ಹತ್ತಿಪ್ಪತ್ತು ಗೋಸಾವಿಗಳದೊಂದು ಗುಂಪು ಬಂದು, ಯಾವ ತೊಂದರೆಯೂ ಇಲ್ಲದೆ ಅಗಸೆಯ ಬಾಗಿಲು ದಾಟಿ ನಗರದಲ್ಲಿ ಪ್ರವೇಶಿಸಿದುದನ್ನು ನೋಡಿದಾಗ ನಮಗೆ ಆಶ್ಚರ್ಯವಾಗದಿರಲಿಲ್ಲ. ಅದಕ್ಕೆ ಕಾರಣವೇನೆಂದು ವಿಚಾರಿಸಿದಾಗ ಗುಟ್ಟು ರಟ್ಟಾಯಿತು. ಕಾವಲುಗಾರರಿಗೆ ಒಂದೆರಡು ರೂಪಾಯಿ ಲಂಚ ಕೊಟ್ಟು ಯಾರು ಬೇಕಾದರೂ ಪ್ರವೇಶ ಪಡೆಯಬಹುದೆಂದು ಗೊತ್ತಾಯಿತು.

ನಮ್ಮ ಮರುಳುತನವನ್ನು ನಾವೇ ಹಳಿದುಕೊಂಡು, ಕಾವಲುಗಾರರ ಕೈ ಬೆಚ್ಚಗೆ ಮಾಡಿ ಆ ರಾತ್ರಿಯೇ ನಗರದಲ್ಲಿ ಪ್ರವೇಶಿಸಿದೆವು. ನಮ್ಮ ಗೆಳೆಯನಾದ ಸರದಾರ್ ಹಿಮ್ಮತಸಿಂಗ್ ಛತ್ರಪತಿಯ ಸೈನ್ಯದಲ್ಲಿ ದೊಡ್ಡ ಅಧಿಕಾರಿಯಾಗಿದ್ದುದರಿಂದ ಅವನ ಮನೆಯನ್ನು ಪತ್ತೆ ಮಾಡುವುದೇನೂ ಕಠಿಣವಾಗಲಿಲ್ಲ. ಕಿತ್ತೂರಿನಿಂದ ಬಂದಂದಿನಿಂದ ಕೊಲ್ಹಾಪುರದಲ್ಲೂ ಆತ ಜನಪ್ರಿಯತೆ ಪಡೆದಿದ್ದುದು ಗೊತ್ತಾಗಿ ನಮಗೆ ತುಂಬ ಸಂತೋಷವಾಯಿತು.

ಅವನ ಧೈರ್ಯ–ಶೌರ್ಯ–ಸಾಹಸಾದಿಗಳನ್ನು ಕಂಡ ಛತ್ರಪತಿಯೂ ಆತನನ್ನು ಬಹಳವಾಗಿ ಮೆಚ್ಚಿಕೊಂಡಿದ್ದರೆಂದೂ ತಿಳಿಯಿತು.

ಹಿಮ್ಮತಸಿಂಗನೂ ನಮ್ಮನ್ನು ಅತ್ಯಾನಂದದಿಂದ ಸ್ವಾಗತಿಸಿ ತನ್ನ ಮನೆಯಲ್ಲಿಯೇ ಊಟ–ವಸತಿಗಳ ಅನುಕೂಲ ಮಾಡಿಕೊಟ್ಟ. ಅಂದು ರಾತ್ರಿ ಊಟ ಮುಗಿಸಿ ಲೋಕಾಭಿರಾಮವಾಗಿ ಮಾತನಾಡುತ್ತಿದ್ದಂತೆ, ನಾವು ಅಲ್ಲಿಗೆ ಬಂದುದರ ಉದ್ದೇಶವನ್ನು ಸೂಚ್ಯವಾಗಿ ತಿಳಿಸಿದಾಗ ಹಿಮ್ಮತಸಿಂಗ್ ತನ್ನ ಅಭಿಪ್ರಾಯವನ್ನೇನೂ ವ್ಯಕ್ತಗೊಳಿಸಲಿಲ್ಲ.

"ನಮ್ಮ ಕೆಲಸ ಆಗಬಹುದಲ್ಲವೇ ಸರದಾರ್ ಸಾಹೇಬ್?"

ಹಿಮ್ಮತಸಿಂಗ್ ಮೌನವಾಗಿ ಎದ್ದು, ಬಾಗಿಲು ತೆಗೆದು, ಹೊರಗೆ ಹೋಗಿ, ಸುತ್ತಲೂ ದಿಟ್ಟಿಸಿ ನೋಡಿ, ಮತ್ತೆ ಬಂದು, ಕಿಟಕಿ ಬಾಗಿಲುಗಳೆಲ್ಲ ವನ್ನೂ ಭದ್ರವಾಗಿ ಮುಚ್ಚಿ ಪಿಸುದನಿಯಲ್ಲಿ ಹೇಳಿದ.

"ಇಂಥಾ ವಿಷಯಗಳನ್ನು ಬಹಳ ಎಚ್ಚರದಿಂದ ಮಾತಾಡಬೇಕಾಗ್ತದೆ. ಫಿರಂಗಿಗಳ ಗೂಢಚಾರರು ಓಣಿಓಣಿಗಳಲ್ಲೆಲ್ಲ ಅಡ್ಡಾಡುತ್ತಿರ್ತಾರೆ. ನಮ್ಮ ಮನೆಯ ಮೇಲೆಯೂ ಅವರ ಸಂಶಯ ಬಹಳ. ಏಕೆಂದರೆ ಮಹಾರಾಜರಿಗೆ ನನ್ನ ಬಗ್ಗೆ ವಿಶ್ವಾಸವಿದೆಯಲ್ಲ!"

"ಈ ರಾತ್ರಿ ನಾವು ಇಲ್ಲಿಗೆ ಬಂದದ್ದು ಅವರಿಗೆ ಗೊತ್ತಾಗಿರಬಹುದೋ ಏನೋ?"

"ಗೊತ್ತಾಗಿರಲಿಕ್ಕೇ ಬೇಕು. ನಮ್ಮ ಮನೆಗೆ ಯಾವಾಗ, ಯಾರು ಬಂದರೂ ತಿಳಿದುಕೊಂಡು ವರದಿ ಒಪ್ಪಿಸಬೇಕಂತ ಅವರಿಗೆ ಹುಕುಂ ಇದೆ ಯಂತೆ. ದಂಡಿನ ಅಧಿಕಾರಿಗಳ ಮನೆಗಳ ಮೇಲೆಲ್ಲಾ ಇದೇ ರೀತಿ ನಜರ್ ಇಟ್ಟಿದ್ದಾರೆ."

"ಈ ವರದಿ ಯಾರಿಗೆ ಮುಟ್ಟುತ್ತೆ?"

"ಇಂಗ್ರಜರ ಸಾಹೇಬ ಇದಾನಲ್ಲ ಇಲ್ಲಿ–ರಿಸಿಡೆಂಟ್ ಅಂತಾರ ಅವಗ. ಛತ್ರಪತಿ ಮಹಾರಾಜರು ಬಂಡು ಹೂಡಬಹುದಂತ ಹಗಲೂ ರಾತ್ರಿ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಎಲ್ಲಾ ಸುದ್ದೀ ತಿಳಿದುಕೊಳ್ಳುತಾ ಇದಾನ ಆ ಸಾಹೇಬ"

"ಹಾಗಾದರೆ ನಾವು ಛತ್ರಪತಿ ಮಹಾರಾಜರನ್ನು ಭೆಟ್ಟಿಯಾಗೂದು ಕಠಿಣವೇ ಅನ್ನಿರಿ?"

"ಅದೇನು ಕಠಿಣವಾಗಲಿಕ್ಕಿಲ್ಲ. ನಾಳೆ ನಾನು ದಿವಾನರನ್ನು ಕೇಳಿ, ಮಹಾರಾಜರ ಸಮಯ ತಿಳಿದುಕೊಂಡು ಬರ್ತೀನಿ. ಈಗ ನೀವು ಮಲಗಿ ಕೊಂಡು ನಿದ್ದೆಮಾಡಿರಿ. ಎಷ್ಟು ದಣಿದಿದ್ದೀರೋ ಏನೋ," ಎಂದು ಹೇಳಿ ಹಿಮ್ಮತಸಿಂಗ್ ನಮ್ಮನ್ನು ಬೀಳ್ಕೊಂಡ.

ಆದರೆ, ಮಾರನೆಯ ದಿನ ಮುಂಜಾನೆಯೇ ಮಹಾರಾಜರು ಬೇಟೆಗೆ ಹೋದರೆಂದು ಗೊತ್ತಾಯಿತು. ಅವರು ಹಿಂತಿರುಗಿ ಬರುವವರೆಗೆ ರಾಜ ಧಾನಿಯ ಪ್ರೇಕ್ಷಣೀಯ ಸ್ಥಳಗಳನ್ನೂ ದೇವಸ್ಥಾನಗಳನ್ನೂ ಸಂದರ್ಶಿ ಸುತ್ತ ನಾವು ಕಾಲಹರಣ ಮಾಡಬೇಕಾಯಿತು.

ಹಾಗೆ ದಿನಗಳು ಉರುಳತೊಡಗಿದುವು. ಬೇಟೆಯಿಂದ ಹಿಂತಿರುಗಿ ಬಂದಮೇಲೂ ದೊರೆಯ ದರ್ಶನ ಬೇಗ ಲಭಿಸುವಂತೆ ತೋರಲಿಲ್ಲ. ಕೊಲ್ಲಾ ಪುರದಲ್ಲಿ ಕುಳಿತು ಕುಳಿತು ನಮಗೆ ಬೇಸರ ಬಂದು ಹೋಗಿತ್ತು. ಹೀಗೆ ವೃಥಾ ಕಾಲಹರಣ ಮಾಡುವ ರೂಢಿಯಿರಲಿಲ್ಲವಾದುದರಿಂದ ರಾಯಣ್ಣ ತುಂಬ ಚಡಪಡಿಸುತ್ತಿದ್ದ. ಕೊನೆಗೆ ಹಿಮ್ಮತ್‌ಸಿಂಗ್ ಬಹಳ ಪ್ರಯತ್ನಪಟ್ಟ ಮೇಲೆ ಒಂದು ಸಂಜೆ ದೊರೆಯ ಭೆಟ್ಟಿಯ ವ್ಯವಸ್ಥೆಯಾಯಿತು.

ಛತ್ರಪತಿಗೆ ಕನ್ನಡ ತಿಳಿಯುವಂತಿರಲಿಲ್ಲ. ಎಂತಲೇ ಹಿಮ್ಮತಸಿಂಗನೇ ದುಭಾಷಿಯಾಗಿ ನಿಂತುಕೊಂಡ.

ಕಿತ್ತೂರ ರಾಣಿಯ ರಾಯಭಾರಿಗಳಾಗಿ ನಾವು ಆಗಮಿಸಿದ್ದುದು ತಿಳಿ ಯುತ್ತಲೂ ದೊರೆಯ ಮುಖದಲ್ಲಿ ಕುತೂಹಲ ಎದ್ದು ಕಾಣಿಸಿತು.

"ರಾಣೀಸಾಹೇಬರು ಆರಾಮ ಇದಾರೇನು?" ಎಂದು ಅವರು ಪ್ರಶ್ನಿ ಸಿದರು.

"ಎಂಥಾ ಆರಾಮು ಮಹಾರಾಜ್? ಕಂಪನಿ ಸರಕಾರದ ಕೈದಿಯಾಗಿ ಬೈಲಹೊಂಗಲದಲ್ಲಿ ಕಾಲ ಕಳೆಯುವ ಪ್ರಸಂಗ ಬಂದಿದೆ. ಇಂಥಾದ್ದರಲ್ಲಿ ಅವ ರಿಗೆ ಹ್ಯಾಗೆ ಸುಖವಿದ್ದೀತು?" ಎಂದು ನಾನು ಹೇಳಿದಾಗ ಮಹಾರಾಜರು ಹೃತ್ಪೂರ್ವಕವಾಗಿ ಸಂತಾಪ ಸೂಚಿಸಿದರು.

"ದೊಡ್ಡ ರಾಣಿಯಾಗಿ ವೈಭವದಿಂದ ಆಳಿದ ಅಂಥಾ ಪುಣ್ಯಾತ್ಮರಿಗೆ ದೇವರು ಇಂಥ ಪ್ರಸಂಗ ತರಬಾರದಾಗಿತ್ತು. ಉಪಾಯವಿಲ್ಲ. ಪರಮಾತ್ಮನ ಇಚ್ಛೆ" ಎಂದು ಹೇಳಿ ಒಮ್ಮೆ ನಿಟ್ಟುಸಿರುಬಿಟ್ಟು ಮಹಾರಾಜರೆಂದರು :

"ಏನು ವಿಶೇಷ? ರಾಣೀಸಾಹೇಬರು ಏನು ಹುಕುಂ ಮಾಡಿದಾರೆ ನಮಗೆ?"

ಆದುವರೆಗೂ ಕರಡಿಗೆಯಲ್ಲಿ ಬಚ್ಚಿಟ್ಟುಕೊಂಡಿದ್ದ ರಾಣಿಯವರ ಕಾಗದ ವನ್ನು ಹೊರತೆಗೆದು, ಭಕ್ತಿಯಿಂದ ಕಣ್ಣಿಗೊತ್ತಿಕೊಂಡು ಮಹಾರಾಜರಿಗೆ ಒಪ್ಪಿಸಿದೆ. ಅವರೂ ಸಹ ಅದನ್ನು ಆದರದಿಂದ ಸ್ವೀಕರಿಸಿ, ಕಣ್ಣಿಗೊತ್ತಿ ಕೊಂಡು ನಿಧಾನವಾಗಿ ಓದಿನೋಡಿದರು. ರಾಣಿಯವರಿಗೆ ಮೋಡೀ ಲಿಪಿ ಯಲ್ಲಿ ಬರೆಯುವ ರೂಢಿಯಿದ್ದುದರಿಂದ ಆ ಕಾಗದವನ್ನು ಅವರು ಅದೇ ಭಾಷೆಯಲ್ಲಿ ಬರೆದಿದ್ದರು.

"ರಾಣೀಸಾಹೇಬರು ಅಪ್ಪಣೆ ಮಾಡಿದ ವಿಷಯದ ಬಗ್ಗೆ ವಿಚಾರ ಮಾಡಿ ನಮ್ಮ ಅಭಿಪ್ರಾಯವನ್ನು ಒಂದೆರಡು ವಾರಗಳಲ್ಲಿ ತಿಳಿಸುತ್ತೇವೆ. ಅಲ್ಲಿಯ ತನಕ ನೀವು ಇಲ್ಲೇ ಇರ್ತೀರಲ್ಲವೇ?"

"ಮಹಾರಾಜರು ಕ್ಷಮಿಸಬೇಕು. ನಾವು ಇಲ್ಲಿಗೆ ಬಂದು ಹತ್ತು ಹನ್ನೆ ರಡು ದಿನ ಆಯ್ತು. ಜೇಗ ಹೊರಟುಬರಬೇಕಂತ ನಮ್ಮ ಸರದಾರರು ಆಜ್ಞೆ ಮಾಡಿದ್ದಾರೆ."

"ಹಾಗಾದರೆ ನೀವು ಹೊರಡಬಹುದು. ನಾವು ಒಂದೆರಡು ವಾರ ಬಿಟ್ಟು ಬೈಲಹೊಂಗಲಕ್ಕೇ ನಮ್ಮ ಜಾಸೂದರನ್ನು ಕಳಿಸಿ ರಾಣಿಸಾಹೇಬರಿಗೆ ನಮ್ಮ ಅಭಿಪ್ರಾಯ ತಿಳಿಸುತ್ತೇವೆ."

"ಅಪ್ಪಣೆ ಮಹಾರಾಜ್."

"ಇಂದಿನ ದಿನಗಳು ಬಹಳ ನಾಜೂಕು. ಇಂಥಾ ಕಾಗದಗಳು ಫಿರಂಗಿ ಗಳ ಕೈಗೆ ಸಿಕ್ಕರೆ ಆಗಬೇಕಾದ ಕೆಲಸವೂ ಕೆಟ್ಟು ಹೋಗುತ್ತೆ. ನೀವೂ ಅದನ್ನು ಹತ್ತಿರ ಇಟ್ಟುಕೊಳ್ಳದೆ ಅಗ್ನಿಗರ್ಪಿಸಿ ಬಿಡೋದೇ ಉತ್ತಮ."

"ಹಾಗೇ ಮಾಡುತ್ತೀವಿ ಮಹಾರಾಜ್"

ನಮ್ಮಿಬ್ಬರಿಗೂ ಉಚಿತವಾದ ಉಡುಗೊರೆಗಳನ್ನು ಕೊಡಿಸಿ ಛತ್ರಪತಿ ಮಹಾರಾಜರು ಎದ್ದು ಒಳಗೆ ನಡೆದರು.

ಮತ್ತೆ ಹಿಮ್ಮತಸಿಂಗನ ಮನೆಗೆ ಬಂದು, ರಾಣಿಯವರ ಕಾಗದವನ್ನು ಬೆಂಕಿಗೆ ಹಾಕಿ ನಾಶಗೊಳಿಸಿ, ಮುಂದಿನ ಕಾರ್ಯಕ್ರಮವನ್ನು ಕುರಿತು ಯೋಚಿಸ ತೊಡಗಿದೆವು.

"ಛತ್ರಪತಿಗಳಿಂದ ನಾವು ಸಹಾಯ ನಿರೀಕ್ಷಿಸಬಹುದೇ ಸರದಾರ್‌ಜಿ?"

"ಅದನ್ನು ಹ್ಯಾಗೆ ಹೇಳೋಕಾಗುತ್ತೆ? ಮಹಾರಾಜರದಂತೂ ಲಹರಿಯ ಸ್ವಭಾವ. ಅವರ ಮನಸಿಗೆ ಬಂದರೆ ಸಹಾಯ ಮಾಡಬಹುದು. ಇಲ್ಲವಾದ ರಿಲ್ಲ." ಎಂದ ಹಿಮ್ಮತಸಿಂಗ್.

ಒಂದು ನಿಮಿಷ ಸುಮ್ಮನಿದ್ದು ಆತ ಮತ್ತೆ ಹೇಳಿದ :

"ಫಿರಂಗಿಗಳ ವಿರುದ್ಧ ಲಢಾಯಿ ಹೂಡಬೇಕಂತ ಮಹಾರಾಜರೇ ತಯಾರಿ ಮಾಡುತ್ತಿದ್ದಾರೆ. ಸಿಪಾಯಿಗಳನ್ನು ಕೂಡಿಸೋದು, ಮದ್ದು ಗುಂಡು ಸಂಗ್ರಹಿಸೋದು ನಡೆದಿದೆ. ಇಡೀ ದೇಶವನ್ನೆಲ್ಲಾ ಹಿಡಿದುಕೊಂಡು ಬಲಾಢ್ಯ ರಾಗಿ ಕುಳಿತ ಫಿರಂಗಿಗಳ ಮೇಲೆ ಯುದ್ಧ ಮಾಡೋದೇನು ಸುಲಭವಲ್ಲ. ಇಪ್ಪತ್ತು ಸಾವಿರದ ವರೆಗೆ ಸೈನ್ಯ ಬೇಕಾಗ್ತದೆ. ಫಿರಂಗಿಗಳ ಹೆದರಿಕೆಯಿಂದ ಸಿಪಾಯಿಗಳು ಸಿಗೋದು ಕಠಿಣವಾಗಿದೆ. ಇಂಥಾದ್ದರಲ್ಲಿ ಮಹಾರಾಜರು ಬೇರೆ ಯವರ ಸಹಾಯಕ್ಕೆ ಹೊರಡೋದೂ ಸ್ವಲ್ಪ ಅನುಮಾನದ ಮಾತೇ."

"ದಿವಾನ ಸಾಹೇಬರ ಸಲಹೆಯಂತೆ ಅವರು ವರ್ತಿಸುವರೇನು?"

"ಊಹೂಂ. ಇಂಥಾ ವಿಷಯ ಅವರು ಯಾರಿಗೂ ತಿಳಿಸೋದಿಲ್ಲ. ಇದೆಲ್ಲಾ ಅವರ ಸ್ವಂತ ಮರ್ಜಿಯ ಮಾತು."

ಇಂಥ ಲಹರಿಯ ಜನರನ್ನು ನೆಚ್ಚಿಕೊಂಡು ಪರದೇಶೀಯರ ವಿರುದ್ಧ ಯುದ್ಧ ಆರಂಭಿಸುವುದು ಜಾಣತನವಲ್ಲವೆಂಬುದಂತೂ ನಮಗೆ ಸ್ಪಷ್ಟ ವಾಯಿತು. ಇನ್ನು ಕೊಲ್ಲಾಪುರದಲ್ಲಿ ಕುಳಿತುಕೊಳ್ಳುವುದರಲ್ಲಿ ಅರ್ಥವಿರಲಿಲ್ಲ.

ಅದೇ ಸಂಜೆ, ಹಿಮ್ಮತಸಿಂಗನನ್ನು ಬೀಳ್ಕೊಂಡು ನಾವು ಪಯಣ ಬೆಳೆ ಸಿದೆವು. ಅಗಸೆಯ ಬಾಗಿಲಿನಿಂದ ಹೊರಬೀಳುವಾಗ ಕಾವಲುಗಾರರಿಗೆ ಮತ್ತೆ ನಾಲ್ಕು ರೂಪಾಯಿ ಕೊಡಬೇಕಾಯಿತು. ಕಾವಲುಗಾರರ ಮುಖ್ಯಸ್ಥ ನಮ್ಮನ್ನು ಗುರುತಿಸಿ, ನಗುನಗುತ್ತ ವಿಚಾರಿಸಿದ:

"ಹತ್ತಿಪ್ಪತ್ತು ದಿವಸ ಇಲ್ಲೇ ಇದ್ದು ಜಗದಂಬೆಯ ಹತ್ತಿರ ತಪಸ್ಸು ಮಾಡಿ ಬಹಳ ಪುಣ್ಯಗಳಿಸಿರಬೇಕಲ್ಲರೀ ಗೋಸಾಯಿಗಳೇ ?"

"ನಾವಂತೂ ದೇವಿಯನ್ನು ಬೇಡಿಕೊಂಡೀವಿ. ವರ ಕೊಡೋದು ಬಿಡೋದು ಆಕೆಯ ಮರ್ಜಿ!."

"ಬರಾಬ್ಬರಿ! ಇಲ್ಲಿಂದ ಎತ್ತ ಕಡೆ ಪ್ರಯಾಣ? ಕಾಶಿಗೋ ರಾಮೇಶ್ವ ರಕ್ಕೋ?"

"ಪಂಡರಪುರದ ವಿಠೋಬಾನ್ನ ನೋಡಿಕೊಂಡು ಆ ಮೇಲೆ ಉತ್ತರದ ಕಡೆಗೆ ಹೋಗಬೇಕೂಂತ ವಿಚಾರಮಾಡೀವಿ ಸರದಾರ್‌ಜಿ."

"ಏನಡ್ಡಿಯಿಲ್ಲ. ನಮಗಿಂತ ನೀವೇ ಸುಖಪುರುಷರಪ್ಪ. ನಮ್ಮಂತೆ ಸಂಸಾರದ ತ್ರಾಸವಿಲ್ಲ. ಹೆಂಡರು ಮಕ್ಕಳ ಕಾಟವಿಲ್ಲ. ಎಲ್ಲಿಗಾದರೂ ಹೋಗ ಬಹುದು. ಯಾವ ಚಿಂತೆಯೂ ಇಲ್ಲ!" ಎಂದು ಹೇಳಿ ಆತ ಗಟ್ಟಿಯಾಗಿ ನಕ್ಕ.

ಶುಕ್ಲಪಕ್ಷದ ಕಾಲವಾದುದರಿಂದ ಆಕಾಶದಲ್ಲಿ ಚಂದ್ರ ಬೆಳಗುತ್ತಿದ್ದ. ಹವೆಯೂ ತಂಪಾಗಿ ಹಿತಕರವಾಗಿತ್ತು. ಅನೇಕ ದಿನಗಳವರೆಗೆ ಕೊಲ್ಹಾಪುರ ದಲ್ಲಿ ಕುಳಿತು ಕುಳಿತು ಬೇಸರವಾಗಿದ್ದುದರಿಂದ ಇದೀಗ ಅತ್ಯಂತ ಉತ್ಸಾಹ ದಿಂದ ದಾರಿ ತುಳಿಯುತ್ತಿದ್ದೆವು. ಮಧ್ಯರಾತ್ರಿಯ ಸುಮಾರಿಗೆ ದಾರಿಯಲ್ಲಿ ಅಡ್ಡಬಂದ ಹೊಳೆ ದಾಟಿ ನಾವು ದಕ್ಷಿಣದ ದಂಡೆಗೆ ಬರುತ್ತಿದ್ದಂತೆ ಎದುರಿನ ಲ್ಲಿದ್ದ ಒಂದು ಕಿರುಮನೆಯಿಂದ ಜನರ ಧ್ವನಿ ಕೇಳಬಂದಿತು.

"ಈ ಮನೆಯಲ್ಲಿ ಯಾರಿರಬಹುದು ರಾಯಣ್ಣಾ?"

"ಹೊಳಿದಂಡಿಯ ಮ್ಯಾಲ ತೋಟಪಟ್ಟೀ ಮಾಡಿಕೊಂಡಿರುವ ರೈ ರಿರಬಹುದೋ ಏನೋ," ಎಂದ ರಾಯಣ್ಣ.

"ರೈತರಾದರೆ ಇಷ್ಟೊತ್ತು ಹ್ಯಾಗೆ ಎಚ್ಚರಿರ್ತಾರೆ?"

"ತೋಟದಾಗ ಕಾಯಿಪಲ್ಯೆ ಹಾಕಿರಬಹುದು. ತುಡುಗರು ಕಳ ಗಳವು ಮಾಡಿಯಾರಂತ ರಾತ್ರಿಯೆಲ್ಲಾ ಎಚ್ಚರಾಗೇ ಇರ್ತಿರಬೇಕು. ಯಾಕೋ ದಣಿವಾಗೈತ್ಯೋ ಏನ ಮತ್ತೆ?"

"ನಾಕು ಹರದಾರಿ ನಡೆದಿರಬೇಕಲ್ಲಪ್ಪ ನಾವು? ನಿನಗೇನು ಆಯಾಸವಾ ಲ್ಲವೋ?"

"ನನಗಿದೆಲ್ಲಾ ರೂಢಿ ಐತಿ. ನಿಮಗೆ ದಣಿವಾಗೂದು ಸಹಜ ಐ ಒಂದೀಟು ಕುಂತು ಆರಾಮ ತಗೊಂಡು ಹೋದರೂ ಆದೀತಲ್ಲ? ಹೋಗ ಣೇನು ಆ ಮನಿಗೆ ?" ಎಂದು ರಾಯಣ್ಣ ಹೇಳುತ್ತಿದ್ದಂತೆಯೇ ಆ ಮನೆ ಬಾಗಿಲು ತೆರೆದುಕೊಂಡಿತು. ಇಂಗ್ರಜರ ಸಿಪಾಯಿಯಂತೆ ಪೋಷಾಕು ಹಾ ಕೊಂಡಿದ್ದ ವ್ಯಕ್ತಿಯೊಂದು ಹೊರಗೆ ಬಂದು ಬೆಳುದಿಂಗಳಲ್ಲಿ ಎದ್ದು ಕಾಣುತ್ತಿ

ನಮ್ಮನ್ನು ದಿಟ್ಟಿಸಿ ನೋಡಿ ಮತ್ತೆ ಒಳಗೆ ಹೋಯಿತು. ಗಂಡಾಂತರದ ಸೂಚನೆ ಲಭಿಸುತ್ತಲೂ ನಾವು ಅಲ್ಲಿಂದ ಪಲಾಯನ ಬೆಳಸಿ, ಗಿಡಗಂಟಿಗಳಲ್ಲಿ ಅಡಗಿ ಕೊಳ್ಳುತ್ತಿದ್ದಂತೆಯೇ ಹತ್ತಿಪ್ಪತ್ತು ಮಂದಿ ಸೈನಿಕರು ಸಿಳ್ಳುಹಾಕುತ್ತ ನಮ್ಮನ್ನು ಬೆನ್ನಟ್ಟ ಬಂದರು. ಆ ಸ್ಥಳ ನಮಗೆ ಪೂರ್ತಿಯಾಗಿ ಅಪರಿಚಿತವಾಗಿದ್ದುದ ರಿಂದ ನಾವು ಸುರಕ್ಷಿತವಾದ ಜಾಗ ಹುಡುಕಿಕೊಳ್ಳುವುದು ಶಕ್ಯವಾಗಲಿಲ್ಲ. ಆ ಸೈನಿಕರು ಮಾತ್ರ ಅನೇಕ ದಿನಗಳಿಂದ ಅಲ್ಲಿಯೇ ಕಾವಲು ಮಾಡು ತ್ತಿದ್ದಿರಬೇಕು. ಎಂತಲೇ ಅವರೆಲ್ಲರೂ ಆ ಜಾಗದಲ್ಲಿ ಸರಾಗವಾಗಿ ಓಡಾಡ ಬಲ್ಲವರಾಗಿದ್ದರು. ಅವರೆಲ್ಲರೂ ಆಯುಧಪಾಣಿಗಳಾಗಿದ್ದು ನಾವು ಮಾತ್ರ ಪೂರ್ತಿಯಾಗಿ ನಿಶ್ಯಸ್ತ್ರರಾಗಿದ್ದೆವು. ಎಂತಲೇ ಅವರನ್ನು ಎದುರಿಸಿ ಕಾದಾಡು ವುದೂ ಅಶಕ್ಯವಾಯಿತು. ಐದಾರು ನಿಮಿಷಗಳಲ್ಲಿಯೇ ಅವರು ನಮ್ಮನ್ನು ಸುತ್ತುವರಿದು ಬಂಧನಕ್ಕೊಳಪಡಿಸಿದರು.

ಆ ಸೈನಿಕರ ಹಿಡಿತದಿಂದ ಬಿಡುಗಡೆ ಹೊಂದಿ ಬರಬೇಕಾದರೆ ಒಂದು ರಾಮಾಯಣವೇ ಆಯಿತು. ನಮ್ಮ ಮೈಮೇಲೆ ಕಾಗದ ಪತ್ರಗಳೇನೂ ಸಿಕ್ಕ ಲಿಲ್ಲವಾದುದರಿಂದಲೇ ನಾವು ಜೀವ ಉಳಿಸಿಕೊಂಡು ಬಂದೆವೆಂದು ಹೇಳ ಬಹುದು. ನಮ್ಮ ಕಾಲಿನ ಪಾದರಕ್ಷೆಗಳನ್ನು ಸಹ ಬಿಡದೆ, ಅತ್ಯಂತ ಸೂಕ್ಷ್ಮ ವಾಗಿ ಪರೀಕ್ಷಿಸಿದರು ಆ ಸಿಪಾಯಿಗಳು. ಕೊಲ್ಲಾಪುರಕ್ಕೆ ಹೋಗಿ ಬರುತ್ತಿದ್ದ ಜನರನ್ನೆಲ್ಲ ಅವರು ಆ ರೀತಿ ಶೋಧಿಸುತ್ತಿದ್ದರಂತೆ. ಗಂಗಾಧರಪ್ಪನವರ ಕರ ಡಿಗೆಯನ್ನೂ ಕೂಡ ಅವರು ತೆರೆದು ನೋಡಿದರು. ಕೊಲ್ಲಾಪುರಕ್ಕೆ ಹೋಗು ವಾಗ ನಾವು ಅವರ ಕೈಗೆ ಸಿಕ್ಕಿಬೀಳದಿದ್ದುದೇ ನಮ್ಮ ಅದೃಷ್ಟ.

ಅಂತೂ ಎರಡು ದಿನ ಅವರ ಬಂಧನದಲ್ಲಿ ಕೊಳೆತ ತರುವಾಯ ನಮ್ಮ ಬಿಡುಗಡೆಯಾಯಿತು. ಅಲ್ಲಿಂದ ಹೊರಟವರು ಎಲ್ಲಿಯೂ ನಿಲ್ಲದೆ, ನೇರವಾಗಿ ಬೆಳಗಾವಿಗೆ ಬಂದು, ಯಾವುದೋ ದೇವಾಲಯದಲ್ಲಿ ಊಟಮಾಡಿ ಮತ್ತೆ ಹೊರಟು ಕೊಳ್ಳಕ್ಕೆ ತಲುಪಿದೆವು.

ಸರದಾರ್ ವೀರಪ್ಪನವರು ನಮ್ಮ ಆಗಮನವನ್ನೇ ಎದುರು ನೋಡುತ್ತ ಕುಳಿತಿದ್ದವರು ನಾವು ಬರಿಗೈಯಿಂದ ಬಂದುದು ತಿಳಿದರೂ ನಿರಾಶರಾಗಲಿಲ್ಲ.

"ಈ ಕೆಲಸಗಳೆಲ್ಲ ಹೀಗೇ ರಾಯಣ್ಣಾ. ವರ್ಷಾನುಗಟ್ಟಲೆ ಪ್ರಯತ್ನ ಮಾಡಿದ ಮ್ಯಾಲೇ ಏನೋ ಅಷ್ಟಿಷ್ಟು ಆಗತಕ್ಕದ್ದು. ಛತ್ರಪತಿಗಳು ಆಡಿದ ಮಾತಿಗೆ ತಪ್ಪುವವರಲ್ಲ. ಅಪ್ಪನವರಿಗೆ ಅವರು ಹೇಳಿ ಕಳಿಸಬಹುದು. ಒಂದೆ ರಡು ವಾರ ಬಿಟ್ಟು ನೀನು ಹೋಗಿ ಬಾ ಹೊಂಗಲಕ್ಕೆ. ಆಮ್ಯಾಲ ಮತ್ತೆ ಎಲ್ಲರೂ ಕೂಡಿ ಏನು ಮಾಡಬೇಕೋ ವಿಚಾರ ಮಾಡೋಣವಂತೆ."

"ಅದುವರೆಗೆ ನೀವು ಶಹಾಪುರಕ್ಕೆ ಹೋಗಿ ಮನೆಯವರನ್ನು ನೋಡಿ ಕೊಂಡು ಬರಬಹುದಲ್ಲ?" ಎಂದ ಗಂಗಾಧರ.

"ಅದರಲ್ಲೇನು ಗಂಡಾಂತರವಿಲ್ಲ, ಹೌದಲ್ಲೋ ?"

"ಮೊದಲು ಮೊದಲು ಗೂಢಚಾರರು ಸುಳಿದಾಡುತ್ತಿದ್ದರಂತೆ. ಒಂದೆ ರಡು ವರ್ಷಗಳಿಂದ ಯಾರೂ ಅತ್ತ ಲಕ್ಷ್ಯ ಕೊಟ್ಟಿಲ್ಲವಂತೆ. ಸದಾಶಿವಣ್ಣ

ಹೇಳ್ತಿದ್ದ. ನೀವು ಸುರಕ್ಷಿತವಾಗಿ ಹೋಗಿ ಬರಬಹುದು" ಎಂದ ಗಂಗಾಧರ.

ಊಟ ಮಾಡಿ ಅಲ್ಲಿಂದ ಹೊರಟವನು ಬೆಳಗಾಗುವುದರೊಳಗೆ ಸಂಗೊಳ್ಳಿಗೆ ಬಂದು ಸೇರಿಕೊಂಡೆ. ಇಂದಿಗೆ ನಾನು ಊರು ಬಿಟ್ಟು ಹೋಗಿ ಹದಿನೈದು ದಿನಗಳೇ ಆಗಿತ್ತು. ಈ ಅವಧಿಯಲ್ಲಿ ಏನೇನು ಅವಾಂತರ ನಡೆದಿದೆಯೋ ಎಂಬ ಚಿಂತೆ ಮನಸ್ಸಿನಲ್ಲಿ ಕುದಿಯುತ್ತಿತ್ತು.

ಆದರೆ, ಅಷ್ಟು ದೂರ ನಡೆದು ಬಂದು ದಣಿದುಕೊಂಡಿದ್ದ ನನಗೆ ಆಗಲೇ ಏನನ್ನೂ ಹೇಳಲಿಲ್ಲ ಅವ್ವ. ಒಂದೆರಡು ತಾಸು ಮಲಗಿ ವಿರಮಿಸಿಕೊಂಡು ನಾನು ಎದ್ದು ಹಾಲು ಸೇವಿಸುತ್ತಿದ್ದಂತೆ ಆಕೆ ಒಂದೊಂದೇ ವಿಷಯ ವರದಿ ಮಾಡಿದಳು.

"ಸಿದ್ದಣ್ಣಗ ಬಾಳ ಬಾಳ ತ್ರಾಸ ಕೊಡಾಕ ಹತ್ತಿದಾನಪಾ ಆ ಕುಲಕರ್ಣಿ. ರಾಯಾ ಎಲ್ಲಿ ಹೋದ? ರಾಯಾ ಎಲ್ಲಿ ಹೋದ? ಅಂತ ದಿನಕ್ಕೆ ಹತ್ತು ಸಲ ಆದ್ರೂ ಹೇಳಿ ಕಳಿಸ್ತಾನೆ. ದೇವರಿಗೆ ಹೋಗಿದಾನಂತ ಹೇಳೇ ಹೇಳಿದರೂ ಅವಗ ಸಮಾಧಾನ ಇಲ್ಲ. ಮತ್ತೇನೋ ಸಿತೂರೀ ಮಾಡಾಕ ಹತ್ತಿರಬೇಕು, ಮಾಮಲೇದಾರಗ ಬರದು ತಿಳಿಸ್ತೇನಿ ಅಂತ ಒದರಾಡುತ್ತಿದ್ದನಂತ ನಿನ್ನೆ. ಸಿದ್ದಣ್ಣನಿಗಂತೂ ಸಾಕುಸಾಕಾಗಿ ಹೋಗ್ಯೈತಿ ನೋಡಪಾ. ನಿನ್ನ ಹಾದೀನಃ ನೋಡುತಾ ಕುಂತಾನ ಅವನೂ," ಎಂದು ಅವ್ವ ಹೇಳುತ್ತಿದ್ದಂತೆಯೇ ಅಣ್ಣನೂ ಬಂದು ಸೇರಿದ.

"ಈಗಾದರೂ ಬಂದ್ಯಲ್ಲ ಮಾರಾಯ? ದೇವರಃ ನನ್ನ ಉಳಿಸಿದ. ಕುಲಕರ್ಣಿಯ ಕಾಲಾಗ ಸತ್ತು ಸತ್ತು ಬದುಕೀನಿ. ಈ ಹಳಬಕೀ ಕೆಲಸ ನನ್ನಿಂದ ಮರ್‍ಯೋ ಆಗೂದಿಲ್ಲ ರಾಯಾ" ಎಂದ ಅಣ್ಣ.

ಅಣ್ಣನಿಗೆ ಏನು ಉತ್ತರವೀಯಬೇಕು? ಹೇಗೆ ಸಮಾಧಾನ ಮಾಡಬೇಕು? ಯಾವುದೂ ಹೊಳೆಯಲಿಲ್ಲ. ಎಷ್ಟೇ ಬೇಸರವಾದರೇನಂತೆ? ಸದ್ಯಕ್ಕಂತೂ ಹಳಬಕಿಯ ಕೆಲಸವನ್ನು ಅವನೇ ಮುಂದುವರಿಸಬೇಕಾದ ಸಮಯ ಬಂದಿತ್ತು. ನನ್ನ ಗುಪ್ತ ಕೆಲಸ ಬಿಟ್ಟುಕೊಟ್ಟು ನಾನು ಮತ್ತೆ ಕುಲಕರ್ಣಿಯ ಚಾಕರಿಗೆ ನಿಲ್ಲುವಂತಿರಲಿಲ್ಲ. ನಾಳೆಯೇ ಹೊಂಗಲಕ್ಕೆ ಹೋಗಿ ರಾಣಿಯವರನ್ನು ಕಂಡು, ಕೊಲ್ಲಾಪುರದ ಸಮಾಚಾರವನ್ನೆಲ್ಲ ವರದಿಯೊಪ್ಪಿಸಬೇಕಾಗಿ

ಡ್ಡಿತು. ಅನಂತರ ಚೆನ್ನಬಸಪ್ಪನನ್ನು ಭೆಟ್ಟಿಯಾಗಿ, ದಂಡು ಕಲೆಹಾಕುವ ಬಗೆಗೆ ಹಂಚಿಕೆ ಹಾಕಬೇಕಾಗಿದ್ದಿತು.

ನಾನು ಸಂಗೊಳ್ಳಿಗೆ ಬಂದು ಸೇರಿಕೊಂಡ ಸಮಾಚಾರ ಗೂಢಚಾರ ಮೂಲಕ ಕುಲಕರಣಿಗೆ ವರದಿಯಾಗಿರಲು ಸಾಕು. ಅಣ್ಣನೊಡನೆ ನನ್ನ ಮಾತು ನಡೆದಿದ್ದಂತೆಯೇ ಹೊರಗೆ ಫಕೀರನ ಕೋರಿಬಡಿಗೆಯ ಸದ್ದಾಯಿತು.

"ಯಾವಾಗ ಬಂದ್ಯೋ ರಾಯಾ" ಎನ್ನುತ್ತ ಪಡಸಾಲೆಗೆ ಬಂ ಫಕೀರ.

"ರಾತ್ರ್ಯಾಗ ಬಂದೀನಿ"

"ಈಗಿಂದೀಗ ನಿನ್ನ ಕರಕೊಂಡು ಬಾರಂತ ಹೇಳ್ಯಾನ ನೋಡು ಕು ಕರ್ಣಿ. ನಿನ್ನ ಮ್ಯಾಗ ಏನೋ ಹುಕುಂ ಬಂದೈತಂತೆ ಸಂಪಗಾವಿಯಿಂದ."

ನನ್ನನ್ನ ಹೆದರಿಸುವ ಉದ್ದೇಶದಿಂದಲೇ ಫಕೀರ ಆ ಮಾತನಾಡಿದು ಸ್ಪಷ್ಟವಾಗಿದ್ದಿತು. ಆದರೆ ಇಂಥ ಸೊಟ್ಟ ಹುಕುಮುಗಳಿಗೆಲ್ಲ ಅಂಜುವ ಹೇಡಿ ನಾನಲ್ಲವೆಂಬುದು ಅವನಿಗಿನ್ನೂ ಗೊತ್ತಾದ ಹಾಗಿರಲಿಲ್ಲ. ಸಂಪಗಾ ಹುಕುಮಿನ ವಿಚಾರ ಕೇಳಿ ಅಣ್ಣ ಮಾತ್ರ ಅಂಜಿಕೊಂಡಂತೆ ತೋರಿತು.

"ಗಡಾನು ಹೋಗಿ ಬಾಳಪ್ಪನ್ನ ಭೆಟ್ಟಿಯಾಗಿ ಏನ ಹುಕುಮೋ ಕೆ ಬಾರೋ ರಾಯಾ" ಎಂದ ಅಣ್ಣ.

ಚಾವಡಿಗೆ ಹೋಗಿ ನೋಡಿದರೆ ಕುಲಕರಣಿಯಿರಲಿಲ್ಲ. ಗಾದಿಗೊ ಕೊಂಡು ತಂಬಾಕು ಸೇದುತ್ತಿದ್ದ ಪರ್ವತಗೌಡ ನನ್ನ ಮುಜುರೆ ಸ್ವೀಕರಿಸಿ ಮಾತನಾಡಿದ:

"ಯಾಕೋ ರಾಯಾ, ಇಷ್ಟು ದಿವಸ ಎಲ್ಲಿಗೆ ಹೋಗಿದ್ದಿ?"

"ಎಲ್ಲವ್ವನ ದರ್ಶನಕ್ಕೆ ಹೋದಾಂವ ಜಡ್ಡಾಗಿ ಅಲ್ಲೇ ಮಲ ಗೌಡರೆ, ನಿನ್ನೆ ಮೊನ್ನೆ ನೆಟ್ಟಗಾಗಿ ಇತ್ತ ಬಂದಿನಿ."

"ನಿಮ್ಮಣ್ಣನಿಂದ ಹಳಬಕೀ ಕೆಲಸ ನೀಗೂದಿಲ್ಲಪಾ ರಾಯಾ. ನೀ ಗಟ್ಟಿ ನೋಡು ಅದಕ್ಕೆಲ್ಲ. ನೀ ಹೀಂಗ ಮ್ಯಾಲಿಂದ ಮ್ಯಾಲ ಕೆಲಸ ಅಲ್ಲಿ ಇಲ್ಲಿ ತಿರುಗತೀ ಅಂತ ಕುಲಕರ್ಣಿ ಸಿಟ್ಟಾಗ್ಯಾನ."

"ದೇವರಿಗೆ ಹರಕೀ ಸಲ್ಲಿಸೂದಕ್ಕೂ ಹೋಗಬಾರದೆಂದರ ಹೆ ಗೌಡರೆ?"

"ಛೆ, ಛೆ, ದೇವರಿಗೆ ಹೋಗೂದಕ್ಕೆ ಯಾರು ಬ್ಯಾಡಂದರಪ್ಪ? ನೀ ಹಂಗೇನ ತಿಳುಕೋಬ್ಯಾಡಾ. ಆದರೂ ದಿನಮಾನ ಬಾಳ ನಾಜೂಕ ಆಗ್ಯಾವ. ಕುಲಕರ್ಣಿ ನಿನ್ನ ಮ್ಯಾಲ ಮಾಮಲೇದಾರಗ ತಕರಾರು ಮಾಡ್ಯಾನ. ಅಲ್ಲಿಂದ ಏನೋ ಬರೆದು ಬಂದೈತಂತ ಹೇಳುತ್ತಿದ್ದ ನಿನ್ನೆ."

"ಹುಮ್, ಇವರೆಲ್ಲಾ ಕೂಡಿ ಏನ ಮಾಡುತ್ತಾರೋ ನೋಡತೀನಿ. ದೇವರಿಗೆ ಹೋಗೋದು ತಪ್ಪಂತ ಮಾಮಲೇದಾರ ಅದ್ರೂ ಹೆಂಗ ಹೇಳತಾನ?"

"ಹೇಳಾಕ ಬರೂದಿಲ್ಲ....ಅದೇನೋ ಖರೆ. ಆದರೂ, ಈಗ ಅವರ ಕೈಯಾಗ ಅಧಿಕಾರ ಬಂದೈತಿ. ಅವರು ಹೇಳಿದ್ದೇ ಕಾಯದೇ. ಕೆಂಪುಮಾರಿ ಯವರೂ ಇವರನ್ನ ನಂಬುತಾರ. ಅದಕ್ಕ ಒಂದೀಟು ಎಚ್ಚರದಿಂದ ಇರೂದು ಚಲೋ ನೋಡಪಾ. ನೀನಂದರೆ ನನ್ನ ತಮ್ಮ ಇದ್ದಂಗೆ. ಅದಕ್ಕೆ ಹೇಳತೀನಿ" ಎಂದು ಹೇಳಿ, ಗೌಡ ಮತ್ತೆ ತಂಬಾಕು ಸೇದತೊಡಗಿದ.

ನಾನು ಚಾವಡಿಗೆ ಬಂದ ಸಮಾಚಾರವನ್ನು ಕುಲಕರಣಿಗೆ ತಿಳಿಸಲೆಂದು ಆತನ ಮನೆಗೆ ಹೋದ ಫಕೀರ ಒಂದು ತಾಸು ಕಳೆದರೂ ಮರಳಿ ಬರಲಿಲ್ಲ.... ಚಾವಡಿಯಲ್ಲಿ ಸುಮ್ಮನೆ ಕುಳಿತು ಮಾಡುವುದಾದರೂ ಏನನ್ನು? ಹೊಲದ ಕಡೆ ಹೋಗಿ ಬರುವುದಾಗಿ ಹೇಳಿ ಗೌಡನೂ ಹೊರಟು ಹೋದ. ಮತ್ತೆ ಸ್ವಲ್ಪ ಹೊತ್ತು ಕುಳಿತಿದ್ದು, ನಾನೂ ಎದ್ದು ಮನೆಗೆ ಹೊರಡುತ್ತಿದ್ದಂತೆ ಅವಸರದಿಂದ ಬರುತ್ತಿದ್ದ ಬಾಳಪ್ಪನ ಆಕೃತಿ ಕಾಣಿಸಿತು. ಬಸವನ ಹಿಂದಿನ ಬಾಲದಂತೆ ಫಕೀರನೂ ಓಡಿಬರುತ್ತಿದ್ದ ಕುಲಕರಣಿಯ ಹಿಂದಿನಿಂದ.

ನನ್ನೊಡನೆ ಜಗಳ ಹೂಡಲು ತಯಾರಿ ಮಾಡಿಕೊಂಡೇ ಬಂದಂತಿತ್ತು ಬಾಳಪ್ಪ. ಗಾದಿಗೊರಗಿ ಕುಳಿತುಕೊಳ್ಳುತ್ತಿದ್ದಂತೆಯೇ ಆತ ಕೀರಲು ಧ್ವನಿ ಯಲ್ಲಿ ಕೇಳಿದ:

"ಇಷ್ಟು ದಿವಸ ಎಲ್ಲಿ ತಿರುಗತಿದ್ದ್ಯೋ ರಾಯಾ ?"

"ದೇವರಿಗೆ ಹೋಗಿದ್ನಿ" ಎಂದು ನಾನು ಸಮಾಧಾನದಿಂದಲೇ ಹೇಳಿದೆ.

"ದೇವರಿಗೆ ಹೋಗಿದ್ಯೋ ? ದೆವ್ವಿಗೆ ಹೋಗಿದ್ಯೋ ? ಯಾರನ್ನ ಕೇಳಿ ಹೋಗಿದ್ದಿ ?"

"ಯಾರನ್ನು ಕೇಳೂದರ ಅಗತ್ಯ ಏನೈತಿ? ನನ್ನ ಬದಲು ನಮ್ಮಣ್ಣ ಹಳೆಬಕೀ ಕೆಲಸ ನೋಡಿಕೊಂಡಿದ್ದನಲ್ಲ ?"

"ಅವ ಏನ ಶಲೀ ಮಾಡತಾನ ಹಳಬಕೀ ಕೆಲಸ? ಕಚೇರಿಗೆ ಒಂದು ಕಾಗದಾ ಮುಟ್ಟಿಸೂದಕ್ಕೆ ಕೂಡಾ ಬರೂದಿಲ್ಲ ಅವಗ. ಅವನಿಗಿಂತ ಒಂದು ಕೋಣ ನೇಲು. ಸರ್ಕಾರಿ ಚಾಕರೀ ಅಂದರೆ ಹುಡುಗಾಟ ಅಲ್ಲ. ಹೊಲಾ ಉಣ್ಣಾಕ ಬೇಕು, ಚಾಕರೀ ಮಾಡೋದು ಬ್ಯಾಡಂದರ ನಡೆದೀತೇನ? ಮಾಮಲೇದಾರರ ಹುಕುಂ ಇಲ್ಲದs ಆ ಊರಿಗೆ-ಈ ಊರಿಗೆ ಹೋಗಾಕೂ ಬರೂದಿಲ್ಲ. ಎಲ್ಲಿಗಾದರೂ ಹೋಗೂದಿದ್ದರ ಮೊದಲs ಸಾಹೇಬರಿಗೆ ಅರ್ಜಿಮಾಡಿಕೊಂಡು ರಜಾ ತಗೊಂಡು ಹೋಗಬೇಕು. ಗೊತ್ತಾತೂ ?"

"ಇದೇನೋ ಹೊಸಾ ಕಾಯದೇ ಬಂದಂಗ ಕಾಣತೈತಲ್ಲ?"

"ಹೌದು. ಹೊಸಾ ಕಾಯದೇ ಅಂತಲೇ ತಿಳುಕೋ. ನಿಮ್ಮಂಥ ಮೈಗಳ್ಳ ಹಳಬರನ್ನು ಹಾದಿಗೆ ತರೂದಕ್ಕೆ ಇಂಥ ಖಡಕ ಕಾಯದೇನs ಬೇಕಾಗತದ."

"ಮೈಗಳ್ಳ ಪೈಗಳ್ಳ ಅಂತ ನಾಲಗೀ ಸಡಿಲ ಬಿಟ್ಟು ಮಾತಾಡಬ್ಯಾಡ್ರೀ ಬಾಳಣ್ಣನವರs!" ಎಂದು ಸಿಟ್ಟಿನಿಂದ ನುಡಿದು ನಾನು ಕತ್ತಿಯ ಒರೆಯ ಮೇಲೆ ಕೈಯಿರಿಸಿದೆ. ಬಾಳಪ್ಪನ ಮೈಯಲ್ಲಿ ಸಂಚರಿಸಿದ್ದ ವೀರಾವೇಶ ತಕ್ಷಣ ಅದೃಶ್ಯವಾಯಿತು. ಆ ಕ್ಷಣದ ಮಟ್ಟಿಗಂತೂ ಆತ ಸುಮ್ಮನಾಗಿ, ತಡೆ ತಡೆಯುತ್ತ ಹೇಳಿದ:

"ಕಾಯದೇಗೀಯದೇ ಗೊತ್ತಾಗದs ವತನದ ಹೊಲಾ ಕಳಕೊಂಡು ಕುಂತೀ ಅಂತ ಕಳಕಳಿಯಿಂದ ಹೇಳತಿದೀನಪಾ ರಾಯಣ್ಣಾ. ಕಿತ್ತೂರರಸರಿದ್ದಾಗ ಏನೋ ಹೆಂಗೋ ನಡೀತಿತ್ತು. ಈಗ ಕುಂಪಣೀ ಬಹಾದ್ದರರ ರಾಜ್ಯಾ. ಅವರ ಹುಕುಮಿನಂಗೆ ನಾವೆಲ್ಲರೂ ನಡಕೊಳ್ಳಾಕ ಬೇಕಲ್ಲ? ಒಂದೀಟು ತಪ್ಪಿ ನಡೆದರೂ ಹೊಲಾ ಮರ್ಸೀ ಹೋಗತಾವ. ಅಷ್ಟೇ ಅಲ್ಲ. ಇನ್ನೂ ಏನೇನು ಗೋಳು ಬರ್ತದೊ ? ಹುವ್! ಈಗಂತೂ ಬಂದಿಯಲ್ಲ? ಇನ್ನಮ್ಯಾಲ ನನಗೆ ಹೇಳದೇ ಯಾವೂರಿಗೂ ಹೋಗಬ್ಯಾಡ. ಗೊತ್ತಾತೂ?"

"ಅದೆಲ್ಲಾ ಆಗಾಕಿಲ್ಲ," ಎಂದು ನಾನು ಖಚಿತವಾದ ಧ್ವನಿಯಲ್ಲಿಯೇ ಹೇಳಿದೆ.

ಹೊದೆದುಕೊಂಡ ಶಲ್ಲೆಯಿಂದ ಮುಖ ಒರೆಸಿಕೊಳ್ಳುತ್ತ ಬಾಳಪ್ಪ

ಒಂದು ಕ್ಷಣ ತಬ್ಬಿಬ್ಬಾಗಿ ಕುಳಿತಿದ್ದ. ನನ್ನನ್ನು ಹಿಡಿತದಲ್ಲಿಟ್ಟುಕೊಳ್ಳುವ ಯುಕ್ತಿಯೇನೆಂಬುದನ್ನು ಆತ ಯೋಚಿಸುತ್ತಿರಲು ಸಾಕು. ನನ್ನ ಜೊತೆಗೆ ವಾದ ಹಾಕುವುದರಿಂದಾಗಲಿ, ನನಗೆ ಬುದ್ಧಿವಾದ ಹೇಳುವುದರಿಂದಾಗಲಿ ಉಪ ಯೋಗವಿಲ್ಲವೆಂಬುದು ಅವನಿಗೆ ಅರಿವಾಯಿತೇನೋ. ಮತ್ತೆ ಮಾತು ಬೆಳೆಸದೆ ಆತನೆಂದ:

"ನೀನು ಸಂಗೊಳ್ಳಿಗೆ ಬಂದಕೂಡಲೇ ಸಂಪಗಾವಿಗೆ ಕಳಿಸಿಕೊಡ ಬೇಕೂಂತ ಮಾಮಲೇದಾರ ಸಾಹೇಬರು ಹುಕುಂ ಮಾಡ್ಯಾರಪಾ. ಈಗಿಂದೀಗ ಹೋಗಿ ಬಾ."

"ಈಗಿಂದೀಗs ಹೋಗಬೇಕೋ? ಉಂಡು ಗಿಂಡು ಹೋದರೆ ನಡ ದೀತೋ?"

"ನಿನಗೆ ಹಸಿದ ಹೊಟ್ಟ್ಯಾಗ ಹೋಗಂತ ನಾನ್ಯಾಕ ಹೇಳಲಿ ರಾಯಾ? ಉಂಡು ಗಿಂಡು ಆರಾಮವಾಗಿ ಹೋಗಿ ಬಾ. ಮತ್ತs, ಕಾರಕೂನ ಗೋವಿಂದ ರಾವಗ ಒಂದಷ್ಟು ಬದನೀಕಾಯಿ ಒಯ್ದು ಕೊಡು."

"ನಮ್ಮ ಹೊಲದಾಗಂತೂ ಬದನೀಕಾಯಿ ಇಲ್ಲ."

"ಇಲ್ಲದಿದ್ದರೆ ಬ್ಯಾರೆ ಎಲ್ಲಾದರೂ ಇಸುಕೊಂಡು ಹೋಗಲ್ಲ? ಮಾಮ ಲೇದಾರ ಸಾಹೇಬರಿಗೆ ಬೇಕೆಂದರೆ ಯಾರು ಇಲ್ಲಂತಾರ?"

"ಊಹುಂ, ನಾನೇನು ಹಿಂಗೆಲ್ಲ ಅವರಿವರನ್ನು ಬಾಯಿ ತೆಗೆದು ಬೇಡುವ ವನಲ್ಲ. ನೀವs ಬೇಕಾದರ ತರಿಸಿ ಇಡ್ರಿ, ತಗೊಂಡು ಹೋಗಿ ಕೊಡ್ತೀನಿ," ಎಂದು ಹೇಳಿ ನೆಟ್ಟಗೆ ಮನೆಗೆ ಬಂದೆ.

ಅಣ್ಣ ಹೊಲಕ್ಕೆ ಹೋಗಿದ್ದ. ಅಪ್ಪ ದನ ಬಿಟ್ಟುಕೊಂಡು ಗುಡ್ಡಕ್ಕೆ ಹೋಗಿದ್ದಳು. ತಯಾರಾಗಿಯೇ ಇದ್ದ ರೊಟ್ಟಿ ತಿಂದು, ಅಂಬಲಿ ಕುಡಿದು, ಸಂಪಗಾವಿಗೆ ಹೋಗಿ ಬರುವದಾಗಿ ಅತ್ತಿಗೆಗೆ ಹೇಳಿ ಮನೆಯಿಂದ ಹೊರಟೆ. ಚಳಿಗಾಲದ ದಿನವಾದುದರಿಂದ ಬಿಸಿಲು ಅಷ್ಟೇನು ಉಗ್ರವಾಗಿರಲಿಲ್ಲ. ನಾಳೆ ಬೈಲಹೊಂಗಲಕ್ಕೆ ಹೋಗಿ ಅಪ್ಪನವರನ್ನು ಭೆಟ್ಟಿಯಾಗಬೇಕು. ನಾವು ಕೊಲ್ಹಾಪುರದಿಂದ ಹಿಂತಿರುಗಿ ಬರುವುದನ್ನೇ ನಿರೀಕ್ಷಿಸುತ್ತ ಎಷ್ಟೊಂದು ಆಸೆ ಯಿಂದ ಕುಳಿತಿರುವರೋ ಅವರು? ಕೊಲ್ಹಾಪುರದಿಂದ ನಾವು ಬರಿಗೈಯಲ್ಲಿ ಬಂದುದನ್ನು ತಿಳಿದು ಅವರಿಗೆಷ್ಟು ನಿರಾಸೆಯಾಗುವುದೋ? ಇತ್ತ ಕಿತ್ತೂರ

ಶಿವಬಸಪ್ಪನಿಂದ ಹಣಬರುವ ಯೋಚನೆಗೂ ಕಲ್ಲು ಬಿತ್ತು. ಇದನ್ನೆಲ್ಲ ಅವ್ವನವರಿಗೆ ಯಾವ ಮೋರೆಯಿಂದ ಹೇಳುವುದು? ಹೇಳದೆ ಹಾಗೆಯೇ ಇರುವಂತೆಯೂ ಇಲ್ಲ. ಬಂಟರಾದ ನಾವು ಕೆಲಸ ಸಾಧಿಸಿಕೊಂಡೇ ಬರುವೆವೆಂದು ನಂಬಿಕೊಂಡು ದಾರಿ ನೋಡುತ್ತ ಕುಳಿತಿರಬಹುದು ಅವರು....ಬಂಟರು! ಒಳ್ಳೆಯ ಬಂಟರೇ! ಎಂದೆಲ್ಲ ಯೋಚಿಸುತ್ತ ಸಂಪಗಾವಿಗೆ ಬಂದೆ.

ಕಚೇರಿಯಲ್ಲಿ ಮಾಮಲೇದಾರರಿರಲಿಲ್ಲ. ಮಧ್ಯಾಹ್ನದ ಊಟಕ್ಕೆ ಹೋದವರು ಇನ್ನೂ ಬಂದಿಲ್ಲವೆಂದು ತಿಳಿಯಿತು. ಪಡಸಾಲೆಯಲ್ಲಿನ ಕಟ್ಟೆಯ ಮೇಲೆ ಬರೆಯುತ್ತ ಕುಳಿತಿದ್ದ ಕಾರಕೂನ ಗೋವಿಂದಪ್ಪನಿಗೆ ಪದ್ಧತಿಯಂತೆ ಮುಜುರೆ ಮಾಡಿದೆ. ನಾನು ಬರಿಗೈಯಲ್ಲಿಯೇ ಬಂದುದನ್ನು ಕಂಡು ಅವನ ಪಿತ್ತ ನೆತ್ತಿಗೇರಿರಬೇಕು.

"ಯಾಕೋ ರಾಯಾ, ನಿನಗೆ ಬಾಳ ಸೊಕ್ಕು ಬಂದಂಗ ಕಾಣ್ತದೆ ?" ಎಂದ ಗೋವಿಂದಪ್ಪ.

"ಸೊಕ್ಕು ಬರುವಂಥಾದ್ದು ನಾನೇನು ಮಾಡಿಲ್ಲ."

"ನಿನ್ನವ್ಯಾಲ ಬಾಳ ತಕರಾರು ಬಂದಾವ ಕಚೇರಿಗೆ. ಸಾಹೇಬರು ಬರಲಿ ತಡಿ. ನಿನ್ನ ಸೊಕ್ಕು ಇಳಿಸ್ತಾರ," ಎಂದು ಹೇಳಿ ಆತ ಮತ್ತೆ ತನ್ನ ಬರವಣಿಗೆಯನ್ನು ಮುಂದುವರಿಸಿದ.

ಇಳಿಹೊತ್ತಿನ ಸಮಯಕ್ಕೆ ಸಾಹೇಬರ ಸವಾರಿ ಆಗಮಿಸಿತು ಪಲ್ಲಕ್ಕಿಯಲ್ಲಿ. ಎಡಕ್ಕೂ ಬಲಕ್ಕೂ ಸಿಪಾಯಿಗಳು ನಡೆದುಬ ರುತ್ತಿದ್ದಂತೆ ಪೇಶವಾಯಿ ಪದ್ಧತಿಯ ಉಡುಪು ಧರಿಸಿದ, ಹಣೆಯ ಮೇಲೆ ಅಡ್ಡನಾಮವಿರಿಸಿಕೊಂಡ, ತಲೆಯ ಮೇಲೆ ಪಾಗೋಟ ಇರಿಸಿಕೊಂಡ ಮಾಮಲೇದಾರರು ಗಂಭೀರವಾಗಿ ಅಡಿಯಿಡುತ್ತ ಕಚೇರಿಯಲ್ಲಿ ಪ್ರವೇಶಿಸಿದರು. ಒಡನೆಯೆ, ಕಚೇರಿಯಲ್ಲಿ ಕೆಲಸ ಮಾಡುತ್ತಿದ್ದ ಎಲ್ಲ ಕಾರಕೂನರೂ ಎದ್ದು ನಿಂತು ಬಾಗಿ ಬಾಗಿ ವಂದಿಸಿದರು. ಶಿಷ್ಟಾಚಾರಕ್ಕನುಸಾರವಾಗಿ ನಾನೂ ಸಲಾಮು ಸಲ್ಲಿಸಿದೆ. ಆದರೆ, ಸಾಹೇಬರ ದೃಷ್ಟಿ ಮಾತ್ರ ನನ್ನತ್ತ ಹೊರಳಲೇ ಇಲ್ಲ.

ಕಚೇರಿಯಿಂದ ಮನೆಗೆ ಮರಳುವುದರೊಳಗಾಗಿ ಅವರು ನನ್ನನ್ನು ಕರೆಸಿಕೊಂಡು ವಿಚಾರಿಸಬಹುದೆಂದು ನಾನು ಭಾವಿಸಿದ್ದೆ. ಆದರೆ, ನನ್ನ ಆಗಮನದ ಸಮಾಚಾರವನ್ನು ಅವರಿಗೆ ಯಾರೂ ತಿಳಿಸಿದಂತೆ ಕಾಣಲಿಲ್ಲ. ಒಂದು ತಾಸು

ಕಚೇರಿಯಲ್ಲಿ ಕುಳಿತಿದ್ದು ಅವರು ಮತ್ತೆ ಪಲ್ಲಕ್ಕಿಯನ್ನೇರಿ ಹೊರಟುಹೋದರು.

ಮಾಮಲೇದಾರರ ಕಚೇರಿಯಲ್ಲಿ ನನಗೆ ಪರಿಚಿತನಾಗಿದ್ದವನೆಂದರೆ ಗೋವಿಂದರಾಯನೊಬ್ಬನೇ. ಅವನಿಗೆ ನಾನು ಕಾಣಿಕೆಯನ್ನೇನೂ ತೆಗೆದುಕೊಂಡು ಬಂದಿರಲಿಲ್ಲವಾದುದರಿಂದ ಆತ ಕೋಪಿಸಿಕೊಂಡಿದ್ದುದು ಸ್ಪಷ್ಟವಾಗಿದ್ದಿತು. ನನಗೆ ಫಜೀತಿಯಾಗುವುದನ್ನೇ ಆತ ಕಾಯುತ್ತ ಕುಳಿತಿರಲು ಸಾಕು. ಅವನನ್ನು ನಾನು ಮತ್ತೆ ಮಾತನಾಡಿಸಲೂ ಸಹ ಸಂಕೋಚವಾಗುತ್ತಿತ್ತು. ಆದರೆ, ಕಚೇರಿಯಲ್ಲೆಲ್ಲ ಅವನೊಬ್ಬನೇ ನನ್ನ ಗುರುತಿನವನಾದುದರಿಂದ ಅವನನ್ನು ಕೇಳದೆ ಬೇರೆ ವಿಧಿಯಿರಲಿಲ್ಲ.

"ಸಾಹೇಬರು ನನ್ನ ಕರಸಲೇ ಇಲ್ಲಲ್ರೀ ರಾಯರೆ ?"

"ಬಂದ ಕೂಡಲೇ ಭೆಟ್ಟಿ ಕೊಡಲಾಕ ನೀ ಏನು ದೊಡ್ಡ ಜಾಗೀರದಾರ ಏನು? ಸಾಹೇಬರಿಗೆ ನೂರಾ ಎಂಟು ಕೆಲಸ. ಅವರಿಗೆ ಸವಡಾದಾಗ ಕರಸ್ತಾರ."

"ಹಂಗಂದರ ಹೆಂಗ? ಅವರು ಕರಸೂತನಕಾ ನಾ ಇಲ್ಲೇ ಇರಬೇಕೇನ?"

"ಅದೆಲ್ಲಾ ನನಗೆ ಗೊತ್ತಿಲ್ಲ. ಇರೂದಾದರ ಇರು, ಬ್ಯಾಡಾದರ ಹೋಗು," ಎಂದ ಗೋವಿಂದರಾಯ.

ನನ್ನನ್ನು ಪರಿಪರಿಯಾಗಿ ಪೀಡಿಸಿ ಹಣ್ಣು ಮಾಡಬೇಕೆಂದು ಬಾಳಪ್ಪನೇ ಈತನಿಗೆ ಗುಪ್ತವಾಗಿ ಸೂಚನೆ ಕೊಟ್ಟಿದ್ದರೂ ಕೊಟ್ಟಿರಬಹುದು. ಎಷ್ಟು ಕಾಡುತ್ತಾರೋ ನೋಡೋಣ! ಎಂದು ನಾನೂ ಹಟ ಹಿಡಿದು, ಆ ದಿನ ಊರಿಗೆ ಹಿಂತಿರುಗದೆ, ಕಿತ್ತೂರ ಸೈನ್ಯದಲ್ಲಿದ್ದ ನನ್ನ ಮಿತ್ರ ವೀರಭದ್ರನ ಮನೆಗೆ ಹೋಗಿ ಊಟ ಮಾಡಿ ಮಲಗಿ ಆ ರಾತ್ರಿಯನ್ನು ಕಳೆದೆ.

ಮರುದಿನ ಮಧ್ಯಾಹ್ನವೂ ಅಲ್ಲಿಯೇ ಉಂಡು ಮತ್ತೆ ಕಚೇರಿಗೆ ಬಂದೆ. ಆ ದಿನವೂ ಸಾಹೇಬರು ನನ್ನನ್ನು ಕರೆಸಲಿಲ್ಲ. ಬೈಲಹೊಂಗಲಕ್ಕೆ ಹೋಗಿ ಅಪ್ಪನವರನ್ನು ಭೆಟ್ಟಿಯಾಗುವ ಅವಸರದ ಕೆಲಸವೊಂದು ಉಳಿದಿತ್ತು. ಸಂಪಗಾವಿಯಿಂದ ಹೊಂಗಲ ಅಷ್ಟೇನೂ ದೂರವೇನಲ್ಲ. ಆದರೆ, ಹಳಬನ ಈ ವೇಷದಲ್ಲಿ ನಾನು ಅಲ್ಲಿಗೆ ಹೋಗುವಂತಿರಲಿಲ್ಲ. ಸಂಗೊಳ್ಳಿಗೆ ಹೋಗಿ, ಅಯ್ಯನ ಉಡುಪು ತೆಗೆದುಕೊಂಡು ಹೊಂಗಲಕ್ಕೆ ಹೋಗಬೇಕಾಗಿದ್ದಿತು.

ಮಾಮಲೇದಾರ ಏನನ್ನಾದರೂ ಮಾಡಲೊಲ್ಲನೇಕೆ? ಈ ದಿನ ಮಾತ್ರ ಮತ್ತೆ ಸಂಪಗಾವಿಯಲ್ಲೇ ಉಳಿಯದೆ ಊರಿಗೆ ಹೊರಟುಬಿಡುವುದೆಂದು ನಿಶ್ಚ

ಯಿಸಿ, ಕತ್ತಲಾಗುತ್ತಲೂ ಸಂಗೊಳ್ಳಿಯ ಹಾದಿ ಹಿಡಿದೆ.

ನಾನು ಹಿಂತಿರುಗಿ ಬರಲು ಒಂದುದಿವಸ ತಡವಾಗಿದ್ದುದರಿಂದ ಮನೆಯ ವರಿಗೆ ಚಿಂತೆಯುಂಟಾಗುವುದು ಸಹಜವಾಗಿತ್ತು. ನಾನು ಊಟ ಮಾಡುತ್ತಿದ್ದಂತೆ ಅವ್ವ ಕೇಳಿದಳು :

"ಏನಾತಪಾ ರಾಯಣ್ಣಾ? ಸಾಹೇಬ ಏನಂದ? ರಾತ್ರಿ ಯಾಕ ವಸ್ತಿ ಆತು ?"

"ಏನಿಲ್ಲ ಅವ್ವ. ಸಾಹೇಬ ನನ್ನ ಮಾತೇ ಆಡಿಸಲಿಲ್ಲ. ಅವನಿಂದ ಇಲ್ಲಿಗೆ ಹುಕುಂ ಬಂದದ್ದೂ ಸುಳ್ಳೇ ಇರಬೇಕು. ಸುಮ್ಮನೇ ನನ್ನ ಸಂಪಗಾವಿಗೆ ಓಡಾಡಿಸಿ ಕಾಡೂದಕ್ಕೆ ಕುಲಕರ್ಣಿ ಈ ಹಂಚಿಕೆ ಹೂಡಿರಬೇಕು."

"ಹಿಂಗೇನ? ಇದ್ದರೂ ಇರಬೋದು ಬಿಡಪಾ. ಅವನೊಬ್ಬ ಶನಿ ಗಂಟು ಬಿದ್ದಂಗ ಬಿದ್ದಾನ ನಮಗ," ಎಂಪಳು ಅವ್ವ.

"ಈ ರಾಯಾನ ಮುಂದೆ ಅವನ ಆಟ ಏನೂ ನಡೆಯೂದಿಲ್ಲ ಅವ್ವ. ನೀನೇನ ಚಿಂತೀ ಮಾಡಬ್ಯಾಡ," ಎಂದು ಹೇಳಿ ಆಕೆಯನ್ನು ಸಂತೈಸಿದೆ.

# ೧೧ ಬಿಚ್ಚುಗತ್ತಿ ಚೆನ್ನಬಸಪ್ಪ

ಹದಿನೈದು ಇಪ್ಪತ್ತು ದಿನಗಳಿಂದ ರಾಯಣ್ಣನ ನಡತೆ ಒಂದು ತರಹಾ ಆಗಿತ್ತು. ಮೊದಲಿನಂತೆ ಆತ ನನ್ನ ಸಂಗಡ ಮನಸ್ಸು ಬಿಚ್ಚಿ ಮಾತನಾಡುತ್ತಿರಲಿಲ್ಲ. ಎಲ್ಲಿಗಾದರೂ ಹೋಗಬೇಕಾದರೆ ನನಗೆ ಹೇಳುತ್ತಲೂ ಇರಲಿಲ್ಲ. ನನ್ನಂಥ ಜೀವದ ಗೆಳೆಯನಿಗೂ ಸಹ ತಿಳಿಸದೆ ಮುಚ್ಚಿಟ್ಟುಕೊಳ್ಳುವಂಥ ಗುಪ್ತ ವಿಷಯ ಏನಿದ್ದೀತು? ಅಂತ ನನಗೆ ಆಶ್ಚರ್ಯ. ಆದರೆ ಮೊನ್ನೆ ಭೆಟ್ಟಿಯಾದಾಗ ಅವನ ಇತ್ತೀಚಿನ ಚಟುವಟಿಕೆಗಳ ಬಗೆಗೆ ಎಲ್ಲವೂ ಗೊತ್ತಾಯಿತು. ಹೌದು. ಮುಚ್ಚಿಟ್ಟುಕೊಳ್ಳಬೇಕಾದಂಥ ವಿಷಯವೇ ಸರಿ. ರಾಯಣ್ಣನ ಬಗೆಗೆ ನನ್ನ ಮನಸ್ಸಿನಲ್ಲಿ ಕುದಿಯುತ್ತಿದ್ದ ಅಸಮಾಧಾನ ತಾನಾಗಿಯೇ ಮಾಯವಾಯಿತು.

ಮೊನ್ನೆ ಮುಂಜಾನೆ ಇಬ್ಬರೂ ಕೂಡಿಕೊಂಡೇ ಹೊಂಗಲಕ್ಕೆ ಹೋಗಿ ಬಂದೆವು–ಅವ್ವನವರನ್ನು ಭೆಟ್ಟಿಯಾಗಲು. ಅರ್ಥಾತ್ ಜಂಗಮವೇಷ ಧರಿಸಿಕೊಂಡೇ ಹೋಗಿದ್ದೆವು. ಎಂಟು ಹತ್ತು ದಿನಗಳಿಂದ ಅವ್ವನವರ ಮೈಯಲ್ಲಿ ನೆಟ್ಟಗಿಲ್ಲವಂತೆ. ನಾವು ಭೆಟ್ಟಿಗೆ ಹೋದಾಗ ಅವರು ಹಾಸಿಗೆ ಹಿಡಿದಿದ್ದರು. ಔಷಧೋಪಚಾರವೂ ಸರಿಯಾಗಿ ನಡೆದಿಲ್ಲವಂತೆ. ಕಿತ್ತೂರಿನಿಂದ ರಾಜವೈದ್ಯರನ್ನು ಕರೆಸುವುದಾಗಿ ಅವ್ವನವರು ಹೇಳಿದರೆ ಶಿರಸ್ತೇದಾರ ಒಪ್ಪಿಗೆ ಕೊಡಲಿಲ್ಲವಂತೆ. ವೈದ್ಯರ ಮೂಲಕವೂ ಏನಾದರೂ ಒಳಸಂಚು ನಡೆಯಬಹುದೆಂಬ ಅಂಜಿಕೆಯಿರಬೇಕು ಅವರಿಗೆ. ಧಾರವಾಡದಿಂದ ಇಂಗ್ರೇಜಿ ವೈದ್ಯರನ್ನು ಕರೆಸಿ ಔಷಧ ಕೊಡಿಸುವುದಾಗಿ ಹೇಳಿದರಂತೆ. ಪರದೇಶೀಯರ ನೀರೂ ಕೂಡ ಸೇವಿಸಲಾರದ ರಾಣಿಯವರು ಅವರ ಔಷಧ ಸೇವಿಸುವುದು ಸಾಧ್ಯವೇ? ಅಲ್ಲದೆ ಅವರ ಔಷಧದ ಬಗೆಗೆ ಅವ್ವನವರಲ್ಲಿ ನಂಬಿಕೆಯೂ ಇಲ್ಲ. ಔಷಧವೆಂದು ಹೇಳಿ ವಿಷ ಕೊಟ್ಟು ಕೊಂದುಬಿಡಲೂ ಹೇಸುವವರಲ್ಲ ಆ ಫಿರಂಗಿಗಳು. ಸರಿಯಾದ ಔಷಧ ಸಿಕ್ಕುವಂತಿಲ್ಲ. ಮನಸ್ಸಿಗೂ ಶಾಂತಿಯಿಲ್ಲ. ಹೀಗಾಗಿ ರಾಣಿಯವರು ಅರ್ಧಕ್ಕರ್ಧ ಇಳಿದು ಹೋಗಿದ್ದಾರೆ.

ಕೊಠಡಿಯ ಹೊರಗೆ ಮಲ್ಲಜ್ಜ ಕಾವಲಿಗಿದ್ದ. ಒಳಗಡೆ ನಮ್ಮ ಮಾತು ನಡೆದಿತ್ತು.

"ಏನಾಯ್ತು ರಾಯಣ್ಣಾ? ಬಾಬಾಸಾಹೇಬರು ಏನೆಂದರು?" ರಾಣಿಯವರು ವಿಚಾರಿಸಿದರು.

"ಅವ್ವನವರಿಗೇ ಹೇಳಿಕಳಿಸ್ತೇನಿ ಅಂತ ಹೇಳಿದರು ತಾಯಿ. ನಡುವೆ ಹಾದಿಯೊಳಗೆ ನಾವು ಇಂಗ್ರೇಜ ದಂಡಿನ ಕೈಯಾಗ ಎರಡು ದಿವಸ ಸಿಕ್ಕಿದ್ದೆವು. ಊರಿಗೆ ಬಂದಮ್ಯಾಲ ಕುಲಕರಣಿ ಎರಡು ದಿವಸ ಕಾಡಿದ. ಹಿಂಗಾಗಿ ಭೆಟ್ಟಿಗೆ ಬರೂದು ತಡಾ ಆಯ್ತು. ಕೊಲ್ಲಾಪುರದಿಂದ ಯಾರೂ ಬಂದಿಲ್ಲೇನ ತಾಯಿ?" ಎಂದ ರಾಯಣ್ಣ.

"ಇಲ್ಲ. ಇದುವರೆಗಂತೂ ಬಂದಿಲ್ಲ." ಎಂದು ಹೇಳಿ, ಒಂದು ನಿಮಿಷ ಸುಮ್ಮನಿದ್ದು ರಾಣಿ ಕೇಳಿದರು.

"ಶಿವಬಸಪ್ಪನವರೇನಂದರು?"

"ಅವರ ಹತ್ತರ ಈಗ ಏನೂ ಇಲ್ಲಂತ ಹೇಳಿದರು. ಎರಡು ಲಕ್ಷ ರೂ. ಮಲ್ಲಪ್ಪಸೆಟ್ರು ಇಸುಕೊಂಡಿದ್ದರಂತೆ. ಇನ್ನುಳಿದದ್ದನ್ನ ಚಿಕ್ಕರಾಣಿಯವರು ತಗೊಂಡರಂತೆ........"

"ಲಥಾಯಿಯ ಗದ್ದಲ ನಡೆದಾಗ ಆ ಕಳ್ಳ ಸೆಟ್ಟಿ ಹಣ ಎತ್ತಿ ಹಾಕಿದ್ದರೂ ಇರಬಹುದು. ಆದರೆ, ಚಿಕ್ಕರಾಣಿ ಹಣ ಇಸುಕೊಂಡದ್ದು ಮಾತ್ರ ಸುಳ್ಳು. ಅಷ್ಟೊಂದು ಹಣ ಅವರೇನು ಮಾಡ್ತಾರೆ? ನಮ್ಮ ದುರ್ದೈವ. ಶಿವಬಸಪ್ಪನವರಿಗೂ ದುರ್ಬುದ್ಧಿ ಬಂತು. ಅಂತೂ ಇಂತೂ ನಮ್ಮ ಪ್ರಯತ್ನ ವಾವುದೂ ಫಲಿಸುವಂತೆ ಕಾಣುವುದಿಲ್ಲ" ರಾಣಿಯವರು ನಿರಾಸೆಯ ಧ್ವನಿಯಲ್ಲಿ ಹೇಳಿದರು.

"ನಿಮ್ಮ ಉಪ್ಪುಂಡ ಈ ಸೇವಕರಿರುವ ತನಕ ನೀವು ಆಸೆ ಬಿಡಬಾರದು ಅವ್ವನವರೆ. ನಾವು ಬೇರೆ ಏನಾರ ಯುಕ್ತೀ ಮಾಡಿ ಹಣಾ ಕೂಡಿಸ್ತೀವಿ. ದಂಡೂ ಕಟ್ಟುತ್ತೀವಿ. ಸರದಾರ್ ವೀರಪ್ಪನವರೂ ಗಂಗಾಧರಪ್ಪನವರೂ ಅದರ ತಯಾರಿ ಮಾಡ್ತಿದಾರ. ಕೊಲ್ಲಾಪುರದ ರಾಜರ ಸಹಾಯ ಸಿಕ್ಕರೂ ಸರಿ, ಸಿಗದಿದ್ದರೂ ಸರಿ. ನಾವು ಮಾಡುವ ಪ್ರಯತ್ನ ಮಾಡ್ತೀವಿ. ಕಿತ್ತೂರ ನಾಡ ಜನರೇನು ಹೇಡಿಗಳಲ್ಲ ತಾಯಿ! ನಿಮಗೂ ಗೊತ್ತೇ ಐತಿ."

ರಾಣಿಯವರ ತುಟಿಗಳ ಮೇಲೆ ಸಮಾಧಾನದ ನಗೆ ಮೂಡಿತು. ಮಮತೆಯಿಂದ ರಾಯಣ್ಣನ ಬೆನ್ನು ತಟ್ಟುತ್ತ ಅವರೆಂದರು:

"ನೀವೆಂಥಾ ಬಂಟರಿದೀರಿ ಅನ್ನುವುದು ಪರದೇಶೀಯರಿಗೂ ಗೊತ್ತಾಗಿತ್ತಲ್ಲ ಚೆನ್ನಾಗಿ? ನಾವು ಸೋತಿರಬಹುದು. ಆದರೂ, ಅವರಿಗೆ ಒಂದು ಕೈ ತೋರಿಸಿದ್ದೇನು ಸುಳ್ಳಲ್ಲವಲ್ಲ? ಈಗಲೂ ಸರಿಯಾದ ರೀತಿಯಲ್ಲಿ ತಯಾರೀ ಮಾಡಿಕೊಂಡರೆ ನಮ್ಮ ನಾಡಿನಿಂದ ಆ ಫಿರಂಗಿಗಳನ್ನು ಹೊರ ಹಾಕಲು ಶಕ್ಯವಾದೀತು. ಆದರೆ, ನನಗೆ ಈ ಬೇನೆ ಗಂಟುಬಿತ್ತು. ಮೊದಲಿನಂತೆ ನನ್ನ ಮೈಯಲ್ಲಿ ಶಕ್ತಿಯುಳಿದಿಲ್ಲ."

"ಗುರುಸಿದ್ಧೇಶ್ವರನ ದಯಾ ಒಂದು ಇದ್ದರ ನೀವು ಮತ್ತೆ ನೆಟ್ಟಗಾಗ್ತೀರಿ. ಇದೆಂಥ ದೊಡ್ಡ ಬೇನೆ ಅವ್ವನವರೆ?" ಎಂದು ಹೇಳಿ ನಾನು ಅವರನ್ನು ಹುರಿದುಂಬಿಸಲು ಪ್ರಯತ್ನಿಸಿದೆ. ರೋಗದಿಂದ ಜರ್ಜರಿತವಾದ ರಾಣಿಯವರ ಶರೀರದಲ್ಲಿ ಹೊಸದೊಂದು ಮಿಂಚು ಸಂಚರಿಸಿದಂತಾಯಿತು. ಮೊದಲಿಂದಲೂ ಹೀಗೆಯೇ ನಮ್ಮ ಅವ್ವನವರು; ಎಂಥಾ ಸಂಕಟ ಪ್ರಸಂಗ ಬಂದಾಗಲೂ ಎದೆಯೊಡೆದುಕೊಂಡು ಕೂಡುವವರಲ್ಲ. ಆಗಲೂ ಹುರುಪಿನಿಂದಲೇ ಇರತಕ್ಕವರು.

ಅವ್ವನವರಿಂದ ಅಪ್ಪಣೆ ಪಡೆದು ನಾವು ಹೊರಟುಬರುತ್ತಿದ್ದಂತೆ ನಡುಮನೆಯಲ್ಲಿ ಪಾರ್ವತಿಯ ಭೆಟ್ಟಿಯಾಯಿತು.

"ಏನಣ್ಣಾ, ಎಲ್ಲಾ ಅರಾಮು ಇದೀರಾ?" ಎಂದು ಆಕೆ ಕುಶಲ ವಿಚಾರಿಸುತ್ತಿದ್ದಂತೆಯೇ ರಾಯಣ್ಣ ನಗುನಗುತ್ತ ಹೇಳಿದ:

"ನಮ್ಮ ಆರಾಮು ಏನು ಕೇಳ್ತೀಯವ್ವಾ? ಗಂಗಾಧರಪ್ಪನವರು ಹೆಂಗದಾರಂತೆ ಕೇಳಬಾರದೇ? ಹಿಂದಕ್ಕೊಮ್ಮೆ ಅವರು ಬಂದಾಗ ಇಲ್ಲಿ ನೀ ಇರಲಿಲ್ಲ. ಅವರೆಷ್ಟು ಹಳಹಳಿಸಿದರಂತೀ!"

"ಮತ್ತೆ ಯಾವಾಗ ಬರ್ತೀರಿ ಈ ಕಡೆ?" ಪಾರ್ವತಿ ತನಗೆ ಸಹಜವಾದ ಗಂಭೀರ ಧ್ವನಿಯಲ್ಲಿಯೇ ಕೇಳಿದಳು.

"ಮುಂದಿನ ಸೋಮವಾರ ಬರಬೇಕಂತ ಮಾಡೀವಿ. ಆಗ ಸರದಾರ್ ಸಾಹೇಬರಿಗಾಗಿ ಹೋಳಿಗೀ ಮಾಡಿರಬೇಕು, ನೋಡು ಮತ್ತ!" ಎಂದು ಚೇಷ್ಟೆಯ ಮಾತು ಆಡಿ ರಾಯಣ್ಣ ನಕ್ಕ, ನಾನೂ ಗಟ್ಟಿಯಾಗಿ ನಕ್ಕುಬಿಟ್ಟೆ. ಪಾರ್ವತಿ ಮಾತ್ರ ಆಗಲೂ ತನ್ನ ಗಾಂಭೀರ್ಯ ಬಿಟ್ಟುಕೊಡದೆ ಮೌನವಾಗಿ ನಿಂತುಕೊಂಡಿದ್ದಳು.

ನಡುಮನೆಯಲ್ಲಿ ನಾವು ಹಾಗೆ ನಕ್ಕದ್ದು, ಸೋಮವಾರ ಸರದಾರಿ ಗಾಗಿ ಹೋಳಿಗೆ ಮಾಡಬೇಕೆಂದು ರಾಯಣ್ಣ ಹೇಳಿದ್ದುದು ಪ್ರಮಾದವಾ ಯಿತೋ ಏನೋ. ಇಂಥ ಮಾತುಗಳಿಗಾಗಿಯೇ ಕಿವಿ ತೆರೆದುಕೊಂಡು ಕುಳಿ ತಿದ್ದ ಗೂಢಚಾರರಾರೋ ಆ ಸುದ್ದಿಯನ್ನು ಶಿರಸ್ತೇದಾರನಿಗೆ ಮುಟ್ಟಸಿರ ಬೇಕು. ಸೋಮವಾರ ರಾಯಣ್ಣನಿಗೆ ಬರಲಿಕ್ಕಾಗಲಿಲ್ಲ. ಗಂಗಾಧರನೊಬ್ಬನೇ ಜಂಗಮ ವೇಷಧಾರಿಯಾಗಿ ಬಂದವನು ಶಿರಸ್ತೇದಾರನ ಬಲೆಯಲ್ಲಿ ಸುಲಭ ವಾಗಿ ಸಿಕ್ಕಿಬಿದ್ದ. ಅವನನ್ನು ಆ ಕೂಡಲೇ ಧಾರವಾಡಕ್ಕೆ ಸಾಗಿಸಲಾಯಿ ತೆಂದು ಗೊತ್ತಾಯಿತು.

ಅಂದಿನಿಂದ ರಾಣಿಯವರ ಮೇಲೆ ಕಾವಲು ಬಲವಾಯಿತು. ವಾಡೆಯೊಳ ಗಿನ ದಾಸದಾಸಿಯರನ್ನು ಹೊರಗೆ ಬಿಡದೆ ಒಳಗೇ ಇರಿಸುವ ವ್ಯವಸ್ಥೆಯಾ ಯಿತು. ಜಂಗಮರ ವೇಷ ಹಾಕಿಕೊಂಡು ಯಾರಾದರೂ ಒಳಗೆ ಹೋಗಿ ಬರು ತ್ತಿದ್ದುದು ತಪ್ಪಿ ಹೋಯಿತು. ಶಿರಸ್ತೇದಾರನಿಗೆ ಭೆಟ್ಟಿಯಾಗಿ, ಗುರುತು ಪರಿಚಯ ಹೇಳಿಕೊಂಡು ಅವನ ಅಪ್ಪಣೆ ಚೀಟಿ ದೊರಕಿಸಿಕೊಂಡೇ ರಾಣಿ ಯವರ ದರ್ಶನಕ್ಕೆ ಹೋಗುವುದೆಂದು ನಿಶ್ಚಿತವಾಯಿತು. ಅರ್ಥಾತ್, ಇಂಥ ನಿರ್ಬಂಧಗಳಿದ್ದಾಗ ರಾಯಣ್ಣನಾಗಲಿ, ನಾನಾಗಲಿ, ವೀರಪ್ಪನವರಾಗಲಿ ಅಲ್ಲಿಗೆ ಹೋಗುವಂತಿರಲಿಲ್ಲ. ಮನಸ್ಸಿನಲ್ಲಿಯೇ ಹಳಹಳಿಸುತ್ತ ಸುಮ್ಮನಿರದೆ ಬೇರೆ ವಿಧಿಯಿರಲಿಲ್ಲ.

ಹಾಗೆ ತಿಂಗಳೊಂದು ಕಳೆದುಹೋಯಿತು. ಈ ಅವಧಿಯಲ್ಲಿ ಅವ್ವನವರ ಬೇನೆ ಇನ್ನೂ ವಿಷಮಿಸಿದೆಯೆಂದು ಸುದ್ದಿ ಬಂದಿತ್ತು. ಹದಿನೈದು ಇಪ್ಪತ್ತು ದಿನಗಳಿಂದ ಅವರು ಮಂಚ ಬಿಟ್ಟು ಕದಲಿರಲೇ ಇಲ್ಲವಂತೆ. ರಾತ್ರಿ ಊಟವ ನ್ನಂತೂ ಅವರು ಎಂದೋ ಬಿಟ್ಟುಬಿಟ್ಟಿದ್ದರು. ಈಗೊಂದು ತಿಂಗಳಿನಿಂದ ಹಣ್ಣಿನ ರಸವೂ ಪಚನವಾಗುತ್ತಿರಲಿಲ್ಲವಂತೆ. ಯಾವುದೋ ಉಪಾಯದಿಂದ ವಾಡೆಯಿಂದ ಹೊರಬಿದ್ದು ಅನುಟೂರಿಗೆ ಬಂದು ನನ್ನನ್ನು ಭೆಟ್ಟಿಯಾದ ಪಾರ್ವತಿ ಅಳುತ್ತಳುತ್ತಲೇ ಈ ವಿಷಯವನ್ನೆಲ್ಲ ತಿಳಿಸಿದಳು.

"ಅವ್ವನವರ ಮೈಯಲ್ಲಿ ಈಗ ಏನೇನೂ ಶಕ್ತಿಯುಳಿದಿಲ್ಲ, ಚನ್ನಬಸಣ್ಣ. ಎರಡು ಮಾತಾಡಲಿಕ್ಕೆ ಕೂಡಾ ತ್ರಾಸ ಆಗತೈತಿ. ಆದರೂ ಇಂಥಾದ್ದರಾಗೂ ಅವರು ಧೈರ್ಯ ಬಿಟ್ಟಿಲ್ಲ ನೋಡಣ್ಣ. ರಾಯಣ್ಣ ಬಂದಿದ್ದನೆ? ಚನ್ನಬಸಣ್ಣ

ಬಂದಿದ್ದನೆ? ಅಂತ ಕೇಳೇ ಕೇಳುತಿರತಾರ."

"ನಾವೂ ಏನಾರ ಸಾಹಸಾ ಮಾಡಿ, ವಾಡೆಯು ಗೋಡೆ ಜಿಗಿದಾದರೂ ಒಮ್ಮೆ ಹೋಗಿ ಅವ್ವನವರನ್ನ ನೋಡಿ ಬರಬೇಕಂತ ವಿಚಾರ ಮಾಡೀವಿ."

"ಛೆ, ಛೆ, ಅಂಥಾ ಹುಚ್ಚತನ ಮಾತ್ರ ಮಾಡಬ್ಯಾಡ್ರಿ. ಹಂಗೇ ಮಾಡಿ ಸರದಾರರೊಬ್ಬರು ವೈರಿಗಳ ಕೈಯಾಗ ಸಿಕ್ಕಿಬಿದ್ದರು. ಈಗ ಅವ್ವನವರ ಆಶೆ ಇರೂದು ನಿಮ್ಮಿಬ್ಬರ ಮ್ಯಾಲ. ನೀವೂ ಸಿಕ್ಕಿರಂದರ ಮುಗಿದೇ ಹೋಯ್ತು. ಶಿರಸ್ತೆದಾರ ಅಂತೂ ಹಗಲೂ ರಾತ್ರಿ ಕಣ್ಣಾಗ ಎಣ್ಣೀ ಹಾಕ್ಕೊಂಡು ಕಾವಲು ನಡೆಸಿದಾನ. ಪಹರೇದವರನ್ನೂ ಹೆಚ್ಚು ಮಾಡ್ಯಾರ. ಗುರುತಿಲ್ಲದ ಜಂಗಮರು ಫಕೀರರು ಯಾರೇ ಬಂದರೂ ಹಿಡಿಯಬೇಕಂತ ಹುಕುಂ ಹೊರಟೈತಂತೆ" ಎಂದಳು ಪಾರ್ವತಿ.

"ಅವ್ವನವರ ಔಷಧೋಪಚಾರಕ್ಕೆ ಏನು ವ್ಯವಸ್ಥಾ ಮಾಡ್ಯಾರ ಸಾರಕ್ಕಾ?"

"ಅವರೇನ ಮಾಡುತಾರೆ? ಏನೂ ಇಲ್ಲ. ಅವ್ವನವರು ನೆಟ್ಟಗಾಗೂದು ಅವರಿಗೆಲ್ಲಿ ಬೇಕಾಗೈತಿ? ಅವ್ವನವರಿಗೂ ಔಷಧದ ಮ್ಯಾಲ ವಿಶ್ವಾಸ ಇಲ್ಲ. ದೇವರ ಮ್ಯಾಲ ಭರೋಸೆ ಇಟ್ಟು ಕೂತಾರೆ. ಈಗ ಅವರು ನೆಟ್ಟಗಾದರೆ ಗುರು ಸಿದ್ಧೇಶ್ವರನ ದಯದಿಂದಲೇ ಆಗಬೇಕು." ಪಾರ್ವತಿ ಅಷ್ಟು ಹೇಳಿ, ಒಂದು ಕ್ಷಣ ಸುಮ್ಮನಿದ್ದು, ಸಂಕೋಚದ ಸ್ವರದಲ್ಲಿ ಕೇಳಿದಳು:

"ಸರದಾರರದೇನಾರ ಸುದ್ದಿ ಐತೇನಣ್ಣಾ?"

"ಇಲ್ಲವಾ. ಧಾರವಾಡ ಕಿಲ್ಲೇದಾಗ ಇಟ್ಟ್ಯಾರಂತೆ ಅವರನ್ನ. ಅಲ್ಲಿಗೆ ಹೋಗಿ ನೋಡಿದರ ಸುದ್ದಿ ತಿಳೀಬೇಕು. ನಾವು ಅತ್ತ ಹೋದರ ನಮ್ಮನ್ನೂ ಹಿಡಿಯತಕ್ಕವರೇ, ಹೌದೋ ಅಲ್ಲೋ?"

"ಅದೂ ಖರೆ, ದೇವರ ಮನಸಿನಾಗಿದ್ದರೆ ಅವರು ಇಂದಲ್ಲ ನಾಳೆ ಬಿಡುಗಡೆ ಹೊಂದಿ ಬಂದಾರು. ಮತ್ತೆ ನಮಗೆಲ್ಲಾ ಚಲೋ ದಿವಸ ಬಂದಾವು" ಎಂದಳು ಪಾರ್ವತಿ.

ರಾಣಿಯವರ ಬೇನೆ ದಿನದಿಂದ ದಿನಕ್ಕೆ ಉಗ್ರವಾಯಿತೇ ಹೊರತು ಕಡಿಮೆಯಾಗಲಿಲ್ಲ. ಶಿರಸ್ತೇದಾರರ ಅಪ್ಪಣೆ ಪಡೆದು ಕಲ್ಮಠದ ಸ್ವಾಮಿಗಳು ಹೊಂಗಲಕ್ಕೆ ಹೋಗಿ ರಾಣಿಯವರನ್ನು ಕಂಡುಬಂದರು. ಅವರು ಹೇಳಿದುದರ

ಮೇಲಿಂದ ಅವ್ವನವರು ಇನ್ನು ಜೀವಿಸುವುದು ಕಠಿಣವೆಂದೇ ತೋರಿತು. ಅವರ ಬೇನೆಯ ಸಮಾಚಾರ ಕಿತ್ತೂರ ನಾಡಿನಲ್ಲೆಲ್ಲ ಪಸರಿಸಿ ಜನರನ್ನು ದುಃಖದಲ್ಲಿ ಮುಳುಗಿಸಿತು.

ಕಡೆಗೆ, ಒಂದು ಶುಕ್ರವಾರ ಅವರು ಅತ್ಯವಸ್ಥರಾಗಿರುವರೆಂದು ಸುದ್ದಿ ಬಂತು. ಕಲ್ಮಠದ ಸ್ವಾಮಿಗಳನ್ನು ಮತ್ತೆ ಹೊಂಗಲಕ್ಕೆ ಕರೆಯಿಸಿಕೊಳ್ಳಲಾಯಿತು. ರಾಣಿಯ ಅಂತ್ಯದರ್ಶನಕ್ಕಾಗಿ ಬಂದ ನಾಡಿನ ಮುಖ್ಯಮುಖ್ಯ ಜನರನ್ನು ವಾಡೆಯೊಳಗೆ ಬಿಟ್ಟರಾದರೂ ನಮ್ಮಂಥ ಸಾಧಾರಣ ಜನರನ್ನು ಮಾತ್ರ ಬಿಡಲಿಲ್ಲ. ಕಡೆಗೂ ರಾಯಣ್ಣನಾಗಲಿ ನಾನಾಗಲಿ ಅವ್ವನವರನ್ನು ಜೀವಂತ ಸ್ಥಿತಿಯಲ್ಲಿ ನೋಡಲು ಶಕ್ಯವಾಗಲಿಲ್ಲ. ಶುಕ್ರವಾರ ಸಂಜೆ ಹೊಂಗಲಕ್ಕೆ ಬಂದು ಕಲ್ಮಠದಲ್ಲಿ ಕಾದು ಕುಳಿತಿದ್ದವರಿಗೆ ಮರುದಿವಸದ ಸಾಯಂಕಾಲ ಸೂರ್ಯಾಸ್ತವಾಗುವ ಹೊತ್ತಿಗೆ ಕಿತ್ತೂರಿನ ಲಕ್ಷ್ಮಿಯಂತಿದ್ದ ರಾಣಿಯವರು ಕೊನೆಉಸಿರು ಬಿಟ್ಟವಾರ್ತೆ ಗೊತ್ತಾಯಿತು. ರವಿವಾರ ಬೆಳಗ್ಗೆ ಅವರ ಶರೀರಕ್ಕೆ ಸ್ನಾನಮಾಡಿಸಿ, ಮಡಿಬಟ್ಟೆ ತೊಡಿಸಿ, ವಾಡೆಯಿಂದ ಹೊರಗೆ ಸಾಗಿಸಿ, ಕಲ್ಮಠಕ್ಕೆ ತೆಗೆದುಕೊಂಡು ಬಂದು ಪಡಸಾಲೆಯಲ್ಲಿ ಮಂಟಪ ಕಟ್ಟಿ ಕೂಡಿಸಲಾಯಿತು. ಆ ದಿನವಿಡೀ ಕಿತ್ತೂರನಾಡಿನ ಬೇರೆಬೇರೆ ಊರುಗಳಿಂದ ಗಂಡಸರೂ ಹೆಂಗಸರೂ ಧಾವಿಸಿ ಬಂದು ಅವ್ವನವರ ಅಂತ್ಯದರ್ಶನ ಪಡೆದು ಬಿಕ್ಕುತ್ತಬಿಕ್ಕುತ್ತ ಕುಳಿತುಕೊಂಡರು. ರಾತ್ರಿ ನೂರಾರು ಭಜನಾಮೇಳಗಳು ದೇವರ ಭಜನೆಮಾಡುತ್ತ ರಾಣಿಯವರ ಆತ್ಮಕ್ಕೆ ಶಾಂತಿ ಕೋರುತ್ತಿದ್ದುವು. ಸೋಮವಾರ ಬೆಳಗ್ಗೆ ಒಂದು ಒಳ್ಳೆಯ ಮುಹೂರ್ತದಲ್ಲಿ ಕಲ್ಮಠದ ಅಂಗಳದಲ್ಲಿಯೇ ಅಮ್ಮನವರ ಪಾರ್ಥಿವ ಶರೀರವನ್ನು ಸಮಾಧಿ ಮಾಡಿದುದಾಯಿತು. ಆಗಲೂ ಪರದೇಶಿಗಳು ತಮ್ಮ ಎಚ್ಚರದಲ್ಲಿಯೇ ಇದ್ದರು. ಅತ್ತೆಗೆ ಮಣ್ಣು ಕೊಡಲು ವಾಡೆಯಿಂದ ಹೊರಗೆ ಬಂದ ವೀರಮ್ಮ ರಾಣಿ ಮತ್ತು ಜಾನಕೀದೇವಿಯವರ ಸುತ್ತಲೂ ಬಿಚ್ಚುಗತ್ತಿಯ ಸೈನಿಕರ ಭದ್ರ ಕಾವಲು ಏರ್ಪಡಿಸಿದ್ದರು.

ಹೆತ್ತ ತಾಯಿಗಿಂತಲೂ ಹೆಚ್ಚಿನವರಾಗಿದ್ದ ಅವ್ವನವರನ್ನು ಕಳೆದುಕೊಂಡು ಅನಾಥರಂತಾಗಿ ಮಧ್ಯಾಹ್ನದ ಸಮಯಕ್ಕೆ ಸಂಗೊಳ್ಳಿಗೆ ಬಂದು ಮುಟ್ಟಿದೆವು. ಮಲಪ್ರಭೆಯಲ್ಲಿ ಮಿಂದು ಮನೆಗೆ ಬರುತ್ತಲೂ ರಾಯಣ್ಣನನ್ನು

ತಬ್ಬಿಕೊಂಡು ಹಾಡಿ ಹಾಡಿ ಅಳತೊಡಗಿದಳು ಕೆಂಚವ್ವ. ಶನಿವಾರದ ಸಂಜೆಯಿಂದ ನಾವಿಬ್ಬರೂ ಊಟಮಾಡಿರಲಿಲ್ಲವಾದರೂ ಈಗಲೂ ಅನ್ನದಮೇಲೆ ಆಸೆಯಾಗಲಿಲ್ಲ. ಕೆಂಚವ್ವನ ಒತ್ತಾಯದಿಂದ ಸ್ವಲ್ಪ ರೊಟ್ಟಿ ತಿಂದು ರಾಯಣ್ಣನ ಹೊಲದ ಕಡೆ ಹೊರಟು ಬಂದೆವು. ಹರಗಿದ ಹೊಲದಲ್ಲಿನ ಕೋಲಿ ಆರಿಸುತಲಿದ್ದ ಸಿದ್ದಣ್ಣ, ತಮ್ಮನನ್ನು ನೋಡುತ್ತಲೂ ಹತ್ತಿರಬಂದು, ಮಾತನಾಡಿದ.

"ಈಗ ಬಂದ್ಯೇನೋ ರಾಯಾ ? ಎಲ್ಲಾ ಮುಗೀತೂ?"

"ಮುಗೀತಲ್ಲ?" ಎಂದ ರಾಯಣ್ಣ.

"ಮಾತಾಯಿ, ನಮ್ಮವ್ವ ದೇವರಪಾದ ಸೇರಿಕೊಂಡಳು. ಇತ್ತನೋಡಿದರೆ ಕುಲಕರ್ಣಿ ಒಂದೇಸಮನೇ ಕಾಡಾಕ ಹತ್ತಿದಾನ. ರಾಯ ಎಲ್ಲಿ ಹೋದ? ಅಂತ ಒದರಿಕೊಂತ ದಿವಸಕ್ಕೆ ಇಪ್ಪತ್ತು ಸಾರಿ ಬರತಾನೆ ಫಕೀರ."

"ಇನ್ನೇನ ಅವನ ಬಾಯೇ ಬಂದು ಮಾಡಿ ಬಿಡೂ ಪ್ರಸಂಗ ಬಂತು!" ಎಂದ ರಾಯಣ್ಣ.

"ಮತ್ತೆ ಅಂಥಾದ್ದೇನಸರ ಮಾಡಿ ಕುಂತೀ ಮಾರಾಯಾ! ಮನೀಮುಂದಿ ಎಲ್ಲಾ ಊರು ಬಿಡೂ ಪಾಳಿ ಬಂದೀತು!" ಎಂದ ಸಿದ್ದಣ್ಣ.

"ನಾನೊಬ್ಬಾಂವ ಏನರ ಮಾಡಿದರೆ ನಿಮ್ಮ ಮ್ಯಾಲ್ಯಾಕ ಸಂಕಟ ಬರತೈತಿ? ಹೋದರ ನಾನೊಬ್ಬಾಂವ ಹೋಗತೀನಿ. ನೀನೇನ ಕಾಳಜೀ ಮಾಡಬ್ಯಾಡ," ಎಂದು ಅಣ್ಣನನ್ನು ಸಂತೈಸಿದ ರಾಯಣ್ಣ.

"ಇನ್ನುಮ್ಯಾಲಾದರೂ ಪಿರೀ ಪಿರೀ ತಿರುಗೂದು ಬಿಟ್ಟು, ಹಳಬಕೀ ಮಾಡಿಕೊಂತ ಆರಾಮ ಇರಲ್ಲ ರಾಯಾ?" ಎಂದ ಸಿದ್ದಣ್ಣ.

"ಹುಮ್! ಹಂಗೇ ಮಾಡಿದರಾತು!" ಎಂದು ವ್ಯಂಗ್ಯವಾಗಿ ಹೇಳಿ ಸಮೀಪದಲ್ಲಿದ್ದ ಬನ್ನಿಯ ಗಿಡದ ಕಡೆ ನಡೆದ ರಾಯಣ್ಣ.

ಕೆಲಹೊತ್ತು ಇಬ್ಬರೂ ಮೌನವಾಗಿ ಕುಳಿತಿದ್ದೆವು. ಸಿದ್ದಣ್ಣ ಮತ್ತೆ ಕೋಲಿ ಒಟ್ಟುಗೂಡಿಸುವ ಕಾಯಕದಲ್ಲಿ ನಿರತನಾಗಿದ್ದ.

ಹೊಂಗಲದ ದಿಕ್ಕಿನ ಕಡೆಗೆ ದೃಷ್ಟಿಸುತ್ತ ರಾಯಣ್ಣ ನಿಧಾನವಾಗಿ ಮಾತನಾಡಿದ.

"ಕಿತ್ತೂರಿನ ರಾಜ್ಯ ಮತ್ತೆ ಗಳಿಸಬೇಕಂತ ಆಶಾ ಇಟ್ಟುಕೊಂಡೇ ತೀರಿಕೊಂಡ್ರು ಅವ್ವನವರು. ನಾನೂ ಸರದಾರ್ ವೀರಪ್ಪನವರೂ ಕೂಡಿ ಏನಾರ

ಮಾಡೇವು ಅಂತ ಅವರು ನಂಬಿದ್ರು. ಅವರು ಜೀವದಿಂದಿರೂ ತನಕ ನಮ್ಗ ಗಂತೂ ಏನು ಮಾಡಾಕಾಗಲಿಲ್ಲ....ಇನ್ನಮ್ಯಾಲ ಏನಾಗತೈತ್ಯೋ ನೋಡ ಬೇಕು."

"ಇದನ್ನೇನ ಬಿಡೂದು ಬ್ಯಾಡ ರಾಯಣ್ಣಾ. ನಮ್ಮ ಜೀವ ಹೋದರೂ ಚಿಂತಿಲ್ಲ. ಕಿತ್ತೂರಿನ ರಾಜ್ಯ ಮತ್ತೆ ಕಟ್ಟೇತಿರೂಣು" ಎಂದು ನಾನು ಹೇಳಿದೆ.

"ನಾಳೆ ನಾಡದ್ದು ಕೊಳ್ಳಕ್ಕೆ ಹೋಗಿ ಸರದಾರ ಸಾಹೇಬರನ್ನು ಭೆಟ್ಟಿ ಯಾಗಿ ಬರೂಣಾಂತ. ನಮ್ಮ ಈ ಸಿದ್ದಣ್ಣನದೇ ನನಗೆ ಚಿಂತಿ. ನನ್ನಿಂದಾಗಿ ಇವನ ಮ್ಯಾಲೂ ಏನಾರ ಸಂಕಟ ಬರಬಾರದೂ ಅಂತ...."

"ಬರೂದೆಲ್ಲಾ....ಬರೂದs ಅಲ್ಲ ರಾಯಣ್ಣಾ? ಮನೆಮಾರು ಹೊಲಾ ಎಲ್ಲಾ ಜಪ್ತಿ ಮಾಡುತಾರ. ಮನಿಯವರು ಊರುಬಿಟ್ಟು ಹೊಟ್ಟೀ ತುಂಬಿಸಿ ಕೊಳ್ಳೂದಕ್ಕ ಬ್ಯಾರೆ ಎತ್ತರ ಹೋಗಬೇಕಾಗುತೈತಿ."

"ನಮ್ಮಾಕಿ ತನ್ನ ತವರು ಮನಿಯಾಗಿರೂದು ಒಂದು ಅನುಕೂಲನೇ ಆಗೈತಿ ಅನ್ನು. ನನಗೆ ಏನs ಬಂದರೂ ಆಕಿಗೆ ಏನೂ ಆಗೂದಿಲ್ಲ. ಅದೊಂದು ಚಿಂತೆಯಿಲ್ಲ ನನಗೆ. ನಿನಗ ಹಂಗಲ್ಲಲ್ಲ ಚನ್ನಬಸೂ? ಹೆಂಡರುಮಕ್ಕಳದಾರ. ಅವರನ್ನು ನೋಡಬೇಕಾಗತೈತಿ."

"ಅಂಥಾ ಭಾರ ಏನಿಲ್ಲ ಬಿಡಪ್ಪಾ ನನ್ನ ಮ್ಯಾಲೂ. ನಮ್ಮತ್ತಿ ಮಾವ ಗಟ್ಟಿ ಇದಾರ. ಅಂಥಾದ್ದೇನಾರ ಸಂಕಟ ಬಂದರೆ ಎಲ್ಲಾರನೂ ನೋಡಿ ಕೊಂತಾರೆ." ಎಂದು ನಾನು ಹೇಳಿದೆ.

"ಹಂಗಾರ ನಾಳೆ ನಸುಕಿನಾಗ ಹೊರಡೂಣೇನ ಕೊಳ್ಳಕ್ಕ?" ಎಂದು ರಾಯಣ್ಣಾ ಕೇಳುತ್ತಿದ್ದಂತೆಯೇ ದೂರದಿಂದ ಹಳಬ ಫಕೀರನ ಆಕೃತಿ ಕಾಣಿಸಿ ಕೊಂಡಿತು.

"ರಾಯಾ....ಓ ರಾಯಾ....ಕುಲಕರ್ಣಿ ಕರೀತಾನಪೋ...."

ರಾಣಿಯವರು ತೀರಿಕೊಂಡು ಎರಡು ತಿಂಗಳು ಆಗಿ ಹೋಗಿದ್ದರೂ ಸರದಾರ್ ವೀರಪ್ಪನವರ ಹತ್ತಿರ ಹೋಗಿ ಬರಲು ಅನುಕೂಲವಾಗಿರಲಿಲ್ಲ. ಕುಲಕರ್ಣಿ ನನಗೆ ಸ್ವಲ್ಪವೂ ಬಿಡುವು ಕೊಡುತ್ತಿರಲಿಲ್ಲ. ರೈತರಿಂದ ಸರಕಾರೀ ಕಂದಾಯ ವಸೂಲ್ಮಾಡುವ ದಿನಗಳಾದುದರಿಂದ ಬೆಳಗಿನಿಂದ ರಾತ್ರಿಯ ವರೆಗೂ ಕೈತುಂಬ ಕೆಲಸವಿರುತ್ತಿತ್ತು. ವಾರದಲ್ಲೆರಡು ಸಲವಾದರೂ ಸಂಪಗಾವಿಗೆ ಹೋಗಿ ಬರಬೇಕಾಗುತ್ತಿತ್ತು. ನಡೆದಷ್ಟು ದಿವಸ ನಡೆಯಲಿ, ಯೋಗ್ಯ ಪ್ರಸಂಗ ಬಂದಾಗ ನೋಡಿಕೊಳ್ಳೋಣ-ಎಂದು ನಾನೂ ಸಮಾಧಾನದಿಂದಿದ್ದೆ.

ಈ ಮಧ್ಯೆ ಚಿಕ್ಕರಾಣಿ ಜಾನಕೀದೇವಿಯವರೂ ತೀರಿಕೊಂಡ ಸುದ್ದಿ ಗೊತ್ತಾಯಿತು. ಅವರ ಅಂತ್ಯವಿಧಿಗಾಗಿ ಹೊಂಗಲಕ್ಕೆ ಹೋಗುವುದೂ ಶಕ್ಯವಾಗಲಿಲ್ಲ ಚೆನ್ನಬಸಪ್ಪನೊಬ್ಬನೇ ಹೋಗಿ, ಮಣ್ಣು ಕೊಟ್ಟು ಕೈಮುಗಿದು ಬಂದ. ಪಹರೆಯವರ ಕಣ್ಣು ತಪ್ಪಿಸಿ, ವೀರಮ್ಮ ರಾಣಿಯವರನ್ನು ಗುಪ್ತವಾಗಿ ಕಂಡು ಮಾತನಾಡಿ ಬಂದುದಾಗಿಯೂ ಹೇಳಿದ. ಕಿತ್ತೂರು ರಾಜ್ಯ ಮತ್ತೆ ಪಡೆಯುವ ಬಗೆಗೆ ವೀರಮ್ಮಾಜಿ ಇನ್ನೂ ಆಸೆಯಿಟ್ಟುಕೊಂಡಿರುವರಂತೆ. ಅವರ ದತ್ತುಪುತ್ರ ಮಾಸ್ತಮರಡಿಯ ಶಿವಲಿಂಗಪ್ಪನನ್ನು ಮುಂದೆ ಮಾಡಿಕೊಂಡು ದಂಡು ಕಟ್ಟಿ, ಬಂಡು ಹೂಡಬೇಕೆಂದು ನನಗೆ ತಿಳಿಸಲು ಚೆನ್ನಬಸಪ್ಪನಿಗೆ ಹೇಳಿದರಂತೆ

ಒಂದು ದಿನದ ಮಟ್ಟಿಗೆ ಬಿಡುವು ಮಾಡಿಕೊಂಡು ಕೊಳ್ಳಕ್ಕೆ ಹೋಗಿ ವೀರಪ್ಪನವರನ್ನು ಕಂಡು, ಚಿಕ್ಕರಾಣಿಯ ಅಪ್ಪಣೆಯ ಬಗೆಗೆ ತಿಳಿಸಿ, ಮುಂದಿನ ಕ್ರಮವನ್ನು ಕುರಿತು ನಿಶ್ಚಯಿಸಿಕೊಂಡು ಬರಬೇಕೆಂದರೆ ಕುಲಕರಣಿ ಬಿಡಲಿಲ್ಲ. ಇತ್ತ, ನನ್ನ ಬದಲು, ಹಳಬಕಿಯ ಕೆಲಸ ಮಾಡಲು ಸಿದ್ದಣ್ಣನೂ ತಯಾರಿಲ್ಲ. ಇಂಥ ಸ್ಥಿತಿಯಲ್ಲಿ ಕುಲಕರಣಿಯ ಮಾತು ಮೀರಿ ಹೊರಟು ಹೋಗುವುದೆಂದರೆ ಹಳಬಕಿಯ ಹೊಲವನ್ನು ಕಳೆದುಕೊಳ್ಳಲು ಸಿದ್ಧವಾಗಿರಬೇಕಾಗುತ್ತದೆ. ಕುಟುಂಬದ ಆಧಾರವಾಗಿ ಉಳಿದಿರುವುದೆಂದರೆ ಇದೊಂದೇ ಹೊಲ. ಇದೂ ಹೋಯಿತೆಂದರೆ ಮುಂದೆ ಗತಿ ಏನು? ನಾವು ಕುರುಬರೆಂಬುದೇನೋ ನಿಜ. ಆದರೆ ನಮ್ಮ ಹತ್ತಿರ ಕುರಿಗಳೂ ಹೆಚ್ಚಾಗಿಲ್ಲ. ಕೊಳ್ಳಬೇಕೆಂ

ವರೆ ಹಣ ಬೇಕು, ಈಗ ಅದೂ ಇಲ್ಲ. ಹೊಲದಿಂದ ಬಂದದ್ದೆಲ್ಲ ಹೊಟ್ಟೆಗೇ ಹೊರಟುಹೋಗುತ್ತದೆ. ಒಂದು ವರ್ಷದಿಂದಲೂ ಕುಲಕರ್ಣಿ ಕಂದಾಯಕ್ಕಾಗಿ ಪೀಡಿಸುತ್ತಿದ್ದಾನೆ. ಅದಕ್ಕೂ ನಮ್ಮಲ್ಲಿ ಹಣವಿಲ್ಲ.

ಮನೆತನದ ಸ್ಥಿತಿ ಇಷ್ಟು ಬಿಕ್ಕಟ್ಟಿನದಾಗಿರುವಾಗ ನನ್ನ ಕರ್ತವ್ಯವೇನು? ಎಂದೂ ಒಮ್ಮೊಮ್ಮೆ ವಿಚಾರ ಬರುತ್ತದೆ. ಕಳೆದು ಹೋದ ರಾಜ್ಯವನ್ನು ಮತ್ತೆ ಕಟ್ಟುವುದು ನನ್ನಂಥ ಬಡವರಿಂದ ಶಕ್ಯವೇ ? ಎಂದೂ ಅನ್ನಿಸುತ್ತದೆ. ದೊಡ್ಡ ದೊಡ್ಡ ಗೌಡರು, ಜಮೀನ್ದಾರರು, ವತನದಾರರು, ಮಲ್ಲಸರ್ಜ ದೇಸಾಯರ ಆಪ್ತೇಷ್ಟರು ಎಲ್ಲರೂ ತಣ್ಣಗೆ ಕುಳಿತಿರುವಾಗ ನನ್ನಂಥ ಒಬ್ಬ ಶೇತಸನದಿ ಬಂಡು ಹೂಡುವಂಥ ಸಾಹಸಕ್ಕೆ ತೊಡಗುವುದು ಜಾಣತನವೇ? ಹಣದ ಬಲವೂ ಇಲ್ಲ, ಜನದ ಬಲವೂ ಇಲ್ಲ. ಎಲ್ಲವನ್ನೂ ಹೇಗೋ ಒದಗಿಸಿಕೊಳ್ಳ ಬೇಕು. ಹೇಗೆ? ನಾನು ಅತ್ತ ಆ ಕಾರ್ಯಕಕ್ಕೆ ನಿಂತರೆ ಇತ್ತ ನಮ್ಮ ಮನೆತನವೆಲ್ಲ ತೊಂದರೆಗೀಡಾಗುವುದು. ಅಣ್ಣ, ಅತ್ತಿಗೆ, ಅಣ್ಣನ ಮಗ, ತಾಯಿ ಎಲ್ಲರೂ ಅನ್ನಾನ್ನಗತಿಕರಾಗುವರು. ಯಾರಿಗೆ ಗೊತ್ತು ? ಈ ಊರನ್ನೇ ಬಿಡುವ ಪ್ರಸಂಗವೂ ಬಂದೀತು. ಆಮೇಲೆ ಎಲ್ಲಿಗೆ ಹೋಗಬೇಕು? ಏನನ್ನು ಮಾಡ ಬೇಕು?

ಈ ಬಗೆಯ ಪರಸ್ಪರ ವಿರುದ್ಧವಾದ ವಿಚಾರಗಳಲ್ಲಿ ಮನಸ್ಸು ತಾಕ ಲಾಡುತ್ತಿದ್ದಂತೆಯೇ ಮೊನ್ನೆ ಮಧ್ಯಾಹ್ನ ಕುಲಕರ್ಣಿಗೂ ನನಗೂ ದೊಡ್ಡ ಜಗಳವಾಯಿತು.

ಹಳಬರ ಭೂಮಿಯನ್ನೆಲ್ಲ ಪುನಃ ಅಳೆದು ನೋಡಬೇಕೆಂದು ಮೇಲಿನಿಂದ ಹುಕುಂ ಬಂದಿದೆಯಂತೆ. ಅದೇನು ನಿಜವೋ ಸುಳ್ಳೋ ಯಾರು ಬಲ್ಲರು! ಅಂತೂ ನಿನ್ನೆ ಮುಂಜಾನೆ ನಮ್ಮನ್ನೆಲ್ಲ ಹೊರಡಿಸಿಕೊಂಡು ಹೋಗಿ ರಕ್ತ ಮಾನೇದ ಹೊಲದ ಅಳತೆ ಮಾಡಿದ ಕುಲಕರ್ಣಿ. ಪುಸ್ತಕದಲ್ಲಿರುವುದಕ್ಕಿಂತ ಮೂರು ಮಾರು ಅಳತೆ ಹೆಚ್ಚಾಯಿತಂತೆ. ಈ ಹೆಚ್ಚಿನ ಭೂಮಿಗಾಗಿ ಆರು ವರ್ಷಕ್ಕೆ ಮೂವತ್ತೆರಡು ರೂಪಾಯಿ ಪಾಳೆ ಹೆಚ್ಚು ಕೊಡಬೇಕಾಗುವುದೆಂದೂ ಆತ ಹೇಳಿದ. ಕಿತ್ತೂರು ರಾಜ್ಯ ಇರುವವರೆಗೆ ಇಂಥ ಕಾಟವಾವುದೂ ನಮ ಗಿರಲಿಲ್ಲ. ನನ್ನನ್ನು ಮತ್ತಷ್ಟು ಪೀಡಿಸುವುದಕ್ಕೆಂದೇ ಕುಲಕರ್ಣಿ ಇದೊಂದು ಹೊಸ ಆಟ ಹೂಡಿದ್ದುದು ಸ್ಪಷ್ಟವಾಗಿದ್ದಿತು.

"ವರಸಾ ವರಸಾ ಪಾಳಿ ಹೆಚ್ಚು ಮಾಡಿಕೊಂತ ಬಂದರ ನಾವು ಎಲ್ಲಿಂದ ತಂದುಕೊಡೂಣು? ನಮ್ಮ ಕೈಯಿಂದೇನ ಆಗಾಕಿಲ್ಲ" ಎಂದು ನಾನು ಹೇಳಿದೆ.

"ಕಾಯದೇ ಪ್ರಕಾರ ಕೊಡಬೇಕಾಗ್ತದ. ಕೊಡದಿದ್ದರ ಮನೀ ಜಪ್ತಿ ಮಾಡಿ ತಗೋತಾರ," ಎಂದ ಕುಲಕರ್ಣಿ.

"ನಮ್ಮಜ್ಜ ರೋಗಪ್ಪಣ್ಣ ಇಷ್ಟು ಹಪ್ತೆ ಕೊಟ್ಟಾಂವಲ್ಲ. ನಮ್ಮಪ್ಪ ಭರ ಮಪ್ಪಣ್ಣ ಕೊಟ್ಟಾಂವಲ್ಲ. ಈಗ ನಾವೂ ಕೊಡೂದಿಲ್ಲ. ಏನಾಗತೈತೋ ಆಗಲಿ," ನಾನೂ ನಿಷ್ಠುರದ ಧ್ವನಿಯಲ್ಲಿ ಹೇಳಿದೆ.

"ಕುಂಪಣೀ ಸರ್ಕಾರದ ಕೈ ನಿನಗಿನ್ನೂ ಗೊತ್ತಾಗಿಲ್ಲ ರಾಯಾ. ಅದಕ್ಕೇ ಹಿಂಗೆಲ್ಲಾ ವಾದ ಹಾಕುತಿದ್ದೀ. ಸುಮ್ಮಸ್ಸ ನಾ ಹೇಳಿದಂಗೆ ಕೇಳಿಕೊಂಡಿದ್ದರೆ ನಿನಗೇನೂ ತ್ರಾಸ ಆಗೂದಿಲ್ಲ ತಮ್ಮಾ," ಎಂದು ನಾಟಕದ ಧ್ವನಿಯಲ್ಲಿ ಹೇಳಿದ ಕುಲಕರ್ಣಿ.

ಅವನ ಕಪಟದ ಮಾತುಗಳಿಗೆ ಮರುಳಾಗಲು ನಾನೇನು ಅಜ್ಞನಾಗಿರಲಿಲ್ಲ.

"ಏನಾರ ಒಂದು ನೆವಾ ಮಾಡಿ ಪಾಳೀ ಹೆಚ್ಚು ಮಾಡಿದರ ನಾವು ಸಾಪ ಸಾಪ ಕೊಡೂದಿಲ್ಲ. ತಿಳಕೊಂಡಿರ್ರಿ." ಎಂದು ಸ್ಪಷ್ಟವಾಗಿ ಹೇಳಿದೆ. ೩೪-೬-೭

ಕುಲಕರ್ಣಿ ಜಡಪಡಿಸುತ್ತಲೇ ಕುದುರೆ ಏರಿ ಊರಿಗೆ ಹೊರಟ. ಹಳಬನಾದ ನಾನು ಅವನ ಸಂಗಡವೇ ಹೋಗಬೇಕಾಗಿದ್ದಿತು. ಹೊಳೆಯ ಹತ್ತಿರ ಬರುತ್ತಲೂ ಆತ ಕುದುರೆಯಿಂದಿಳಿದು ಲಗಾಮನ್ನ ನನ್ನ ಕೈಗೆ ಕೊಟ್ಟು ತಾನು ಸ್ನಾನಕ್ಕೆ ನಿಂತ. ಬಿಸಿಲಿನಲ್ಲಿ ಅಲೆದು ಬೇಸರವಾಗಿದ್ದುದರಿಂದ ಒಂದರ್ಧ ತಾಸು ಹೊಳೆಯ ನೀರಿನಲ್ಲಿ ಮೀಯಬೇಕೆಂಬ ಬಯಕೆ ನನಗೂ ಇದ್ದಿತಾದರೂ ಕುಲಕರ್ಣಿಯ ಸ್ನಾನ ಮುಗಿಯುವ ವರೆಗೆ ನಾನು ನೀರಿಗಿಳಿಯುವಂತಿರಲಿಲ್ಲ. ಎಂಟು ಹತ್ತು ನಿಮಿಷಗಳಲ್ಲಿಯೇ ಜಳಕದ ಶಾಸ್ತ್ರ ಮುಗಿಸಿ ಮಡಿ ಧೋತರ ಉಟ್ಟುಕೊಂಡು ಮೇಲೆ ಬಂದವನೇ ಕುಲಕರ್ಣಿಯೆಂದ:

"ಕಲ್ಲ ಮ್ಯಾಲ ಪಂಜಿ ಬಿಟ್ಟೇನಿ. ಅದನ್ನಷ್ಟು ಒಕ್ಕೊಂಡು ಬಾ ಹೋಗೋ ರಾಯಾ!"

ಕತ್ತಿಯ ಕಾಯಕದ ಬಂಟನಾದ ನಾನು ಮೈಲಿಗೆ ಪಂಜಿ ಒಗೆದುಕೊಡುವುದೆಂದರೇನು? ನನ್ನ ಸಿಟ್ಟು ನೆತ್ತಿಗೇರಿತು.

"ನಿನ್ನ ಪಂಜಿ ಒಕ್ಕೊಡಾಕ ನಾನೇನ ನಿನ್ನ ಮಡಿವಾಳ ಅಲ್ಲ. ಬೇಕಾದರೆ ಒಕ್ಕೋ. ಸಾಕಾದರೆ ಬಿಡು."

ನನ್ನಿಂದ ಅಂಥ ಉತ್ತರ ಬಂದೀತೆಂದು ಆತ ನಿರೀಕ್ಷಿಸಿದ್ದಂತಿರಲಿಲ್ಲ. ಅವನೂ ಸಿಟ್ಟಿನಿಂದಲೇ ಹೇಳಿದ :

"ಏನ ಸೊಕ್ಕಿನ ಕುರುಬ ಹುಟ್ಟಿದೆಲೇ ಸಂಗೊಳ್ಳ್ಯಾಗ? ನಿನಗೇನ ವತನದ ಹೊಲಾ ಉಳೀಬೇಕೋ ಬ್ಯಾಡೋ? ಉಳೀಬೇಕಂತಿದ್ದರ ಸುಮ್ಮನ ನನ್ನ ಪಂಜಿ ತೊಳೆದುಕೊಡು."

ನಾನು ಸರಸರನೆ ಕಲ್ಲಿನ ಹತ್ತಿರ ಹೋಗಿ ಆತನ ಪಂಜೆಯನ್ನೆತ್ತಿ ಅವನ ಮೈಮೇಲೆ ಎಸೆದು ಆವೇಶದಲ್ಲಿಯೇ ಹೇಳಿದೆ :

"ವತನದ ಹೊಲಾ ಇರೂದು ಸರಕಾರೀ ಚಾಕರೀ ಸಲುವಾಗಿ. ನಿನ್ನ ಪಂಜಿ ಅಂಗಿ ಒಕ್ಕೊಡಾಕ ಅಲ್ಲ. ಇದೊಂದು ಬರೆ ಬಿಡ್ತೀನಿ ನಿನ್ನ. ಮತ್ತೊಮ್ಮೆ ಇಂಥಾ ಕೆಲಸ ಹೇಳಿ ಅಪಮಾನ ಮಾಡಿದಿಯಂದರ ನಿನ್ನ ಕಡದು ಹೊಳ್ಯಾಗ ಒಗದಬಿಡ್ತೀನಿ. ಗೊತ್ತಾತಾ ?"

ನನಗೆ ಗೊತ್ತಾಗದಂತೆಯೇ ನನ್ನ ಕೈ ಕತ್ತಿಯನ್ನು ಒರೆಯಿಂದ ಹಿರಿಯಲು ಮುಂದಾಗಿರಬೇಕು. ಅದನ್ನು ಕಂಡುಕೊಂಡ ಬಾಳಪ್ಪ ಗಡಗಡನೆ ನಡುಗುತ್ತ ಕುದುರೆ, ಪಂಜೆ ಎಲ್ಲವನ್ನೂ ಅಲ್ಲಿಯೇ ಬಿಟ್ಟು, ಬರಿ ಮೈಯಲ್ಲಿಯೇ ಓಡಿಹೋದ. ಕುದುರೆಯೂ ನಿಧಾನವಾಗಿ ನಡೆಯುತ್ತ ಅವನ ಹಿಂದಿನಿಂದ ಹೊರಟಿತು.

ಅನಂತರ ನಾನು ಮಡುವಿಗಿಳಿದು ಮನದಣಿಯೆ ಈಸಾಡಿದೆ. ಬಿಸಿಲಿನ ತಾಪ ಮಾಯವಾಗಿ ನೀರಿನ ತಂಪು ಆವರಿಸುತ್ತಲೂ ನನ್ನ ಕೋಪವೂ ಇಳಿದು ಹೋಯಿತು. ಮನೆಗೆ ಬಂದು ಊಟ ಮಾಡುತ್ತಿದ್ದಂತೆ, ಹೊಳೆಯ ಮೇಲೆ ನಡೆದುದೆಲ್ಲವನ್ನೂ ಅವ್ವನಿಗೆ ವಿವರಿಸಿ ಹೇಳಿದೆ. ನನ್ನ ಹಡೆದವ್ವನಲ್ಲವೇ ಆಕೆ ? ನಾನು ತೋರಿಸಿದ ಸ್ವಾಭಿಮಾನವನ್ನು ಆಕೆಯೂ ಪ್ರಶಂಸಿಸಿದಳು.

"ಚಲೋ ಬುದ್ಧೀ ಕಲಿಸಿದಿ ಆ ಸೊಕ್ಕಿನ ಕುಲಕರ್ಣಿಗೆ! ಇನ್ನೊಮ್ಮೆ ನಿನಗೆ ಇಂಥಾ ಕೆಲಸಾ ಹೇಳಿದರೆ ನೋಡು ಅವ !" ಎಂದಳು.

"ಹೇಳಲಿಕ್ಕಿಲ್ಲ. ಆದರೆ ಒಳಗೊಳಗೇ ಏನಾರ ಪಿತೂರಿ ಮಾಡಿ ಮತ್ತೇ ನಾರ ಕಾಟ ಕೊಡತಾನೆ."

"ಏನ ಮಾಡ್ತಾನೋ ಮಾಡಲಿ! ನೋಡಿಬಿಡೋಣಂತೆ ಒಂದ ಕೈ!" ಎಂದು ಧೈರ್ಯದಿಂದಲೇ ಹೇಳಿದಳು ಅಪ್ವ.

ಊಟ ಮುಗಿಸಿ, ಸ್ವಲ್ಪಹೊತ್ತು ವಿರಮಿಸಿಕೊಳ್ಳುತ್ತಿರುವಂತೆಯೇ ಫಕೀರ ಓಡಿಬಂದು, ಕುಲಕರ್ಣಿ ಕರೆಯುತ್ತಿರುವನೆಂದು ತಿಳಿಸಿದ. ನಾನು ಸಮಾಧಾನದಿಂದಲೇ ಎದ್ದು, ಮುಖ ತೊಳೆದುಕೊಂಡು, ರುಮಾಲು ಸುತ್ತಿ, ಕತ್ತಿ ಬಿಗಿದುಕೊಂಡು ಚಾವಡಿಗೆ ಬಂದೆ.

ಮಧ್ಯಾಹ್ನ ಹೊಳೆಯ ಮೇಲೆ ನಡೆದ ಜಗಳದ ಬಗೆಗೆ ಒಂದು ಮಾತನ್ನೂ ಆಡಲಿಲ್ಲ ಕುಲಕರ್ಣಿ. ಲಕೋಟೆಯೊಂದನ್ನು ಕೈಗೆ ಕೊಟ್ಟು ಅದನ್ನು ಆದಷ್ಟು ಬೇಗ ಸಂಪಗಾವಿಯ ಕಚೇರಿಗೆ ತಲುಪಿಸಲು ತಿಳಿಸಿದ. ಅದು ಸರ್ಕಾರೀ ಕೆಲಸವಾದುದರಿಂದ ನಾನು ಅನುಮಾನ ಮಾಡುವಂತಿರಲಿಲ್ಲ. ಮತ್ತೆ ಮನೆಗೆ ಬಂದು ಸಂಪಗಾವಿಗೆ ಹೋಗಿ ಬರುವುದಾಗಿ ತಾಯಿಗೆ ತಿಳಿಸಿ ತುರುಮಂದೆಯ ಬಳಿ ಬರುತ್ತಿದ್ದಂತೆಯೇ ಬಿಚ್ಚುಗತ್ತಿ ಚನ್ನಬಸಪ್ಪ ಸಿಕ್ಕಿದ. ಇಬ್ಬರೂ ಮಾತನಾಡುತ್ತಲೇ ಸಂಪಗಾವಿಯ ಹಾದಿ ತುಳಿಯತೊಡಗಿದೆವು. ಹೊಳೆಯ ಮೇಲೆ ಬಾಳಪ್ಪನಿಗೂ ನನಗೂ ನಡೆದ ಚಕಮಕಿಯ ವಿಷಯ ವನ್ನೆಲ್ಲ ತಿಳಿಸುತ್ತಲೂ ಚನ್ನಬಸಪ್ಪ ಚಿಂತೆಯ ಸ್ವರದಲ್ಲಿ ಹೇಳಿದ :

"ಕುಲಕರ್ಣಿ ನಿನ್ನ ಸುಮ್ಮನs ಬಿಡೂವಂಗ ಕಾಣೂದಿಲ್ಲ ರಾಯಣ್ಣಾ. ಏನರ ಘಾತ ಮಾಡುವವನೇ."

"ಏನ ಮಾಡಬಹುದಂತೀ ?"

"ನಾನು ನೀನು ಎಲ್ಲಾ ಕತ್ತಿ ಕಟಾರಿಯ ಮಂದಿ. ಎದುರಾಎದುರು ನಿಂತು ಮಾಡೂದು ಮಾಡುತೀವಿ. ಕುಲಕರ್ಣೀದು ಯಾವಾಗಲೂ ಒಳಹೊಡೆತ. ಅವ ಯಾವಾಗ ಏನ ಮಾಡ್ಯಾನು ಅನ್ನೂದನ್ನ ಯಾರೂ ಹೇಳೂದು ಶಕ್ಯ ಇಲ್ಲ."

"ಅವ ಏನ ಮಾಡತಾನೋ ಮಾಡಲಿ. ನಾನಂತೂ ಎಲ್ಲಾದಕೂ ತಯಾರಾಗೇ ನಿಂತೀನಿ. ನಮ್ಮವ್ವನೂ ಅಂಜುವಾಕಿಯಲ್ಲ. ಸಿದ್ದಣ್ಣನೇ ಸ್ವಲ್ಪ ಪುಕ್ಕ."

"ಅಂತೂ ಹುಷಾರಿಯಿಂದಿರಪಾ ರಾಯಣ್ಣಾ. ಕಚೇರ್ಯಾಗೆ ಯಾರರ ಏನರ ಅಂದರೆ ಒಂದೀಟು ತಡಕೋ. ಸಿಟ್ಟಾಗಿ ಏನರ ಅಂದುಬಿಡಬ್ಯಾಡ."

"ಹುವ್, ನಾ ಬರೂತನಕ ಒಂದೀಟು ಮನೀಕಡೆ ಜೋಕೆಯಿಂದಿರಪಾ. ಇವತ್ತ ಬರ್ತೇನೋ ನಾಳೆ ಬರ್ತೇನೋ ಯಾಂಬಲ್ಲ!" ಎಂದು ಚನ್ನಬಸಪ್ಪ ನನ್ನು ಬೀಳ್ಕೊಂಡು ಸಂಪಗಾವಿಗೆ ಬಂದೆ.

ಪಡಸಾಲೆಯಲ್ಲಿ ಕುಳಿತಿದ್ದ ಕಾರಕೂನ ಗೋವಿಂದಪ್ಪ ನನ್ನನ್ನು ಇರಿಯುವ ಹೋರಿಯಂತೆ ಕೆಕ್ಕರಿಸಿ ನೋಡಿದ.

"ಏನೋ ? ಯಾಕೆ ಬಂದಿ ?"

"ಕುಲಕರ್ಣೇರು ಲಕೋಟೀ ಕೊಟ್ಟಾರ."

ಲಕೋಟಿಯನ್ನು ಕೈಗೆ ತೆಗೆದುಕೊಂಡು, ಅದರ ಮೇಲಿನ ವಿಳಾಸ ಓದಿಕೊಂಡು, ಮತ್ತೆ ನನ್ನ ಕೈಗೆ ಕೊಟ್ಟು ಗೋವಿಂದಪ್ಪನೆಂದ :

"ಸೀದಾ ಮಾಮಲೇದಾರ ಸಾಹೇಬರಿಗೇ ಮುಟ್ಟಬೇಕು ಇದು. ಸಾಹೇಬರು ಒಳಗದಾರ. ನೀನss ಹೋಗಿ ಕೊಡು."

ಟೊಣೆಯನಂತಿದ್ದ ಮಾಮಲೇದಾರ ಕುರ್ಚಿಯ ಮೇಲೆ ಕುಳಿತಿದ್ದ. ತುಸು ದೂರದಲ್ಲಿ ತಳವಾರನೊಬ್ಬ ನಿಂತುಕೊಂಡು ಗಾಳಿ ಬೀಸುತ್ತಿದ್ದ.

ಲಕೋಟಿಯನ್ನೊಡೆದು ಒಳಗಿನ ಕಾಗದ ಓದಿಕೊಂಡು ಮಾಮಲೇದಾರ ನನ್ನನ್ನು ದಿಟ್ಟಿಸಿ ನೋಡುತ್ತ ಕೇಳಿದ :

"ರಾಯಾ ಅಂದರೆ ನೀನೇ ಏನೋ?"

"ಹೌದ್ರಿ."

"ಸಂಗೊಳ್ಳಿಯ ಕುಲಕರ್ಣಿಯನ್ನ ನೀ ಕಡಿಯಲಿಕ್ಕೆ ಹೋಗಿದ್ದಿಯಂತಲ್ಲ ?"

ನಡೆದ ಘಟನೆಯ ಬಗೆಗೆ ನಾನು ಸ್ಪಷ್ಟೀಕರಿಸಲು ಧ್ವನಿಯೆತ್ತುತ್ತಿದ್ದಂತೆಯೇ ಮಾಮಲೇದಾರ ಸಿಪಾಯರನ್ನು ಕೂಗಿ,

"ಈ ಪುಂಡನ್ನ ಕಟಾಂಜನದಾಗ ಹಾಕಿರ್‍ಯೋ" ಎಂದು ಅಪ್ಪಣೆ ವಿಧಿಸಿದ. ನಡೆದುದೇನೆಂಬುದನ್ನು ಸರಿಯಾಗಿ ತಿಳಿದುಕೊಳ್ಳದೆ, ಶಿಕ್ಷೆ ವಿಧಿಸುವ ಆ ಅನ್ಯಾಯವನ್ನು ಕಂಡು ಮೈಯೆಲ್ಲ ಕುದಿಯಿತಾದರೂ ಆ ಸಂದರ್ಭದಲ್ಲಿ ನಾನೇನನ್ನೂ ಮಾಡುವಂತಿರಲಿಲ್ಲ.

ನಾಲ್ಕೈದು ಜನ ಸಿಪಾಯಿಗಳು ನನ್ನನ್ನು ಸುತ್ತುವರಿದು ಅಲ್ಲಿಂದ ಸಾಗಿಸಿಕೊಂಡೊಯ್ದು ಕಬ್ಬಿಣದ ಸಳಿಗಳಿಂದ ನಿರ್ಮಿತವಾಗಿದ್ದ ಕಟಾಂಜನದ ಒಳಗೆ, ಎಂದರೆ ಸೆರೆಯಲ್ಲಿ ದೂಡಿದರು.

ಸೆರೆಮನೆಯ ಸಹವಾಸ ನನಗೆ ಹೊಸದೇನೂ ಅಲ್ಲ. ಕಿತ್ತೂರಿನ ಯುದ್ಧದಲ್ಲಿ ನಮಗೆ ಸೋಲಾದ ನಂತರ ಇನ್ನಿತರ ಅನೇಕ ಸೈನಿಕರ ಜೊತೆಗೆ ನನ್ನನ್ನೂ ಹಿಡಿದೊಯ್ದು ಧಾರವಾಡದ ಕೋಟೆಯಲ್ಲಿ ಒಂದು ವರ್ಷದವರೆಗೂ ಇಟ್ಟಿದ್ದರು. ನನ್ನ ಕೈಕಾಲುಗಳಿಗೆ ಕಬ್ಬಿಣದ ಸಂಕೋಲೆಗಳನ್ನೂ ಹಾಕಲಾಗಿತ್ತು. ಅನಂತರ ವಿಚಾರಣೆ ನಡೆದು, ಅನೇಕರ ಜೊತೆಗೆ ನನಗೂ ಬಿಡುಗಡೆಯಾಗಿತ್ತು. ಅಂದಿನ ಪರಿಸ್ಥಿತಿ ಬೇರೆ. ಕಿತ್ತೂರನ್ನುಳಿಸಿಕೊಳ್ಳುವುದಕ್ಕಾಗಿ ನಾವು ಪರದೇಶಿಗಳ ವಿರುದ್ಧ ಹೋರಾಡಿದ್ದೆವು. ಯುದ್ಧದಲ್ಲಿ ಗೆದ್ದವರಾದ ಅವರು ನಮ್ಮನ್ನು ಬಂಧಿಸಿ ಸೆರೆಗೆ ಹಾಕುವುದೂ ಸಹಜವಾಗಿತ್ತು. ಆದರೆ ಈ ಬಾರಿ ನನ್ನ ಅಪರಾಧವೇನೂ ಇರದಿದ್ದರೂ, ನನ್ನ ಸ್ಪಷ್ಟೀಕರಣ ಕೇಳಿಕೊಳ್ಳುವ ಗೊಡವೆಗೂ ಹೋಗದೆ, ದಬ್ಬಾಳಿಕೆಯಿಂದ ಸೆರೆಗೆ ದೂಡಲಾಗಿತ್ತು.

ಅದೊಂದು ರಾತ್ರಿ, ಮತ್ತೊಂದು ರಾತ್ರಿ ಅಲ್ಲಿಯೇ ಕಳೆಯಿತು. ನನಗೆ ಎರಡು ಹೊತ್ತು ಊಟಕ್ಕೆ ಕೊಡುತ್ತಿದ್ದರಾದರೂ ಮನಸ್ಸಿನ ಕಳವಳದಿಂದಾಗಿ ನನಗೆ ಅದಾವುದೂ ಹಿಡಿಸುತ್ತಿರಲಿಲ್ಲ. ಮೂರನೆಯ ದಿನ ಕಾರಕೂನನೊಬ್ಬ ಕಟಾಂಜನದ ಹೊರಗೆ ನಿಂತು ಹೇಳಿದ :

"ಸಾಹೇಬರಿಗೆ ನಿನ್ನವ್ಯಾಲ ದಯಾ ಹುಟ್ಟಿ ನಿನ್ನ ಜಾಮೀನ ಮ್ಯಾಲ ಬಿಡೂದಕ್ಕ ತಯಾರಾಗ್ಯಾರ ರಾಯಾ. ಇಲ್ಲಿ ನಿನಗೆ ಜಾಮೀನಾಗುವವರ್ಯಾರಾದರೂ ಇದ್ದರೆ ಹೇಳು. ಕರಸ್ತೀವಿ."

"ಸಂಪಗಾವಿಯೊಳಗ ನನಗೆ ಗುರುತು ಪರಿಚಯ ಇಲ್ಲ. ಇಂಥಲ್ಲಿ ಜಾಮೀನಾಗುವವರ್ಯಾರು?"

"ಹಂಗಾದರ ನಿನ್ನ ನಸೀಬ!" ಎಂದಿಷ್ಟೇ ಹೇಳಿ ಕಾರಕೂನ ಹೊರಟು ಹೋದ.

ನನ್ನನ್ನು ಸೆರೆಯಲ್ಲಿರಿಸಿದ ಸುದ್ದಿ ಕಚೇರಿಗೆ ಬಂದು ಹೋಗುತ್ತಿದ್ದ ಜನರಿಗೆಲ್ಲ ಗೊತ್ತಾಗಿರಬೇಕು. ಅಂದು ಮಧ್ಯಾಹ್ನ ಯಾವುದೋ ಕೆಲಸಕ್ಕಾಗಿ ಅಲ್ಲಿಗೆ ಬಂದ ಅಮಟೂರ ಸೈದನವರ ಬಾಳಾಸಾಹೇಬನಿಗೆ ನನ್ನ ವಿಷಯ ತಿಳಿಯುತ್ತಲೂ ಆತ ಮಾಮಲೇದಾರನಿಗೆ ಭೆಟ್ಟಿಯಾಗಿ, ನನ್ನ ಸಲುವಾಗಿ ತಾನು ಜಾಮೀನಾಗುವೆನೆಂದು ತಿಳಿಸಿದ. ಆ ಪ್ರಕಾರ ಆತ ಕಾಗದ ಬರೆದು

ಸಹಿ ಹಾಕಿ ಕೊಡುತ್ತಲೂ ನನ್ನನ್ನು ಕಟಾಂಜನದಿಂದ ಬಿಡುಗಡೆ ಮಾಡಿದರು.

ಅಮಟೂರ ಬಾಳಾಸಾಹೇಬ ನನ್ನ ಹತ್ತಿರದ ಗೆಳೆಯರಲ್ಲೊಬ್ಬ. ಚೆನ್ನಮ್ಮ ರಾಣಿಯವರ ವೈಗಾವಲ ಪಡೆಯಲ್ಲಿ ಅವನೂ ನನ್ನ ಜೊತೆಗಿದ್ದ. ಕೊತ್ತಲದ ಮೇಲಿಂದ ಗುಂಡು ಹಾರಿಸಿ ಧಾರವಾಡದ ಕೆಂಪುಮೋರೆಯ ಸಾಹೇಬನನ್ನು ಕೊಂದವನೇ ಈ ಬಾಳಾಸಾಹೇಬ. ಮುಸಲ್ಮಾನರ ಪದ್ಧತಿಯಂತೆ ಅವನದು ಅಳಿಯಲಾರದ ಏಕನಿಷ್ಠೆ. ಎಂತಲೇ, ಬಿಳಿಯರ ಸಾಹೇಬನನ್ನು ಆತ ಹೊಡೆದ ವಿಷಯ ಯಾರಿಗೂ ತಿಳಿಯಗೊಡದೆ ಅವನ ಪ್ರಾಣ ಉಳಿಸಿಕೊಂಡಿದ್ದರು ರಾಣಿಯವರು. ಕಿತ್ತೂರ ಸೈನ್ಯ ಚದುರಿಹೋದ ಮೇಲೆ ಆತ ತನ್ನ ಊರಿಗೆ ಹೋಗಿ ಹೊಲಮನೆ ನೋಡಿಕೊಳ್ಳುತ್ತಲಿದ್ದ.

ಬಾಳಾಸಾಹೇಬನಿಗೆ ಕೃತಜ್ಞತೆಯಿಂದ ನಮಸ್ಕಾರ ಮಾಡಿ ತಕ್ಷಣವೇ ಸಂಪಗಾವಿ ತ್ಯಜಿಸಿ ಸಂಗೊಳ್ಳಿಗೆ ಹೊರಟು ಬಂದೆ. ನಾನು ಓಣಿಯಲ್ಲಿ ನಡೆದು ಬರುತ್ತಿದ್ದಂತೆ ಜನರು ನನ್ನನ್ನು ಮಿಕಿಮಿಕಿ ನೋಡತೊಡಗಿದರು. ಸಂಪ ಗಾವಿಯ ಕಚೇರಿಯಲ್ಲಿ ನನ್ನನ್ನು ಕೊಳೆಯಹಾಕಿ ಕುಲಕರ್ಣಿ ಇಲ್ಲಿಯೂ ಏನೋ ಘಾತ ಮಾಡಿರಬಹುದೇ? ಎಂದೆನಿಸತೊಡಗಿತು. ಚಾವಡಿಯಲ್ಲಿ ಕುಲಕರ್ಣಿ ಇರಲಿಲ್ಲ. ಕಂಬಕ್ಕೊರಗಿ ತೂಕಡಿಸುತ್ತಿದ್ದ ಫಕೀರನನ್ನೆಬ್ಬಿಸಿ ಕೇಳಿದೆ :

"ಯಾಕೋ ಫಕೀರಾ, ಏನ ಸುದ್ದಿ? ಬಾಳಪ್ಪ ಎಲ್ಲಿ ಹೋಗ್ಯಾನ?"

ಫಕೀರ ಗಡಬಡಿಸಿ ಎದ್ದು ತೊದಲುತ್ತ ಕೊಸಲುತ್ತ ಹೇಳಿದ :

"ಬಾಳಪ್ಪ? ಅವನೆಲ್ಲಿ ಹೋಗ್ತಾನ? ಇರಬೋದು ಮನ್ಯಾಗ...."

"ನನ್ನ ಅತ್ತ ಕಳಿಸಿ ಇತ್ತ ಏನಾರ ಗದ್ದಲಾ ಮಾಡ್ಯಾನೋ ಏನ ಮತ್ತೆ?"

"ನಂಗೇನ ಗೊತ್ತಿಲ್ಲಪಾ ರಾಯಣ್ಣಾ. ನಂದೇನ ತಪ್ಪಿಲ್ಲಪಾ. ನನ್ನ ಮ್ಯಾಲ ಸಿಟ್ಟಾಗಬ್ಯಾಡಪಾ........" ಎಂದು ಆರ್ತಸ್ವರದಲ್ಲಿ ಕೂಗಿಕೊಂಡು ಫಕೀರ ತನ್ನ ಕೋಲು ಅವಚಿಕೊಂಡು ಅಂಜಿದ ನಾಯಿಯಂತೆ ಓಡಿಹೋದ.

"ಕುಲಕರ್ಣಿ ಏನೋ ಭಯಂಕರ ಕೃತ್ಯ ಮಾಡಿರಲೇಬೇಕು," ಎಂದು

ಕೊಳ್ಳುತ್ತ ಒತ್ತರದಿಂದ ಕಾಲು ಹಾಕುತ್ತ ಮನೆಗೆ ಬಂದೆ. ಎದುರಿಗಿನ ಮನೆಯ ಮುಂದೆ ತಂಬಾಕು ಸೇದುತ್ತ ಕುಳಿತಿದ್ದ ತಿಮ್ಮ ನನ್ನನ್ನು ನೋಡುತ್ತಲೂ ಥಟ್ಟನೆದ್ದು ಒಳಗೆ ಹೋದ.

"ಅವ್ವಾ! ಅವ್ವಾ!" ಎಂದು ಕರೆಯುತ್ತಲೇ ನಾನು ಒಳಗೆ ಬಂದೆ. ಪಡಸಾಲೆಯಲ್ಲಿನ ಕೌದಿಯ ಮೇಲೆ ಬಿದ್ದುಕೊಂಡಿದ್ದ ಅವ್ವ ನನ್ನ ಧ್ವನಿ ಕೇಳಿಸುತ್ತಲೂ ಎದ್ದು ಬಂದು ನನಗೆ ತೆಕ್ಕೆ ಹಾಕಿಕೊಂಡು ಅಳತೊಡಗಿದಳು.

ಅವ್ವ ಬಿಕ್ಕುತ್ತ ಬಿಕ್ಕುತ್ತಲೇ ಹೇಳಿದಳು :

"ನೀ ಸಂಪಗಾವಿಗೆ ಹೋದಕೂಡಲೇ ಬಾಳ್ಯಾ ನನ್ನ ಕರಿಸಿ ಪಾಳೇದ ರೂಪಾಯಿ ತಂದುಕೊಡಂತ ಕೇಳಿದಾ.... ನನ್ನ ಹತ್ತಿರ ಎಲ್ಲಿದಾವ ರುಪಾಯಿ ? ರಾಯಾ ಬರಲಿ—ಕೊಡ್ತಾನಂತ ನಾ ಹೇಳಿದಿನಿ. ರಾಯಾ ಇನ್ನೆಲ್ಲಿ ಬರ್ತಾನ ? ಅವನ್ನ ಹಾಕೀವಿ ಸೆರಿಮನಿಯಾಗ. ರುಪಾಯಿ ತಂದುಕೊಡು–ಇಲ್ಲದಿದ್ದರೆ ನಿನ್ನ ಬಿಡೂದಿಲ್ಲಂತ ಹೇಳಿದ. ನಾಳೆ ನಾಡಿದು ತಂದುಕೊಡ್ತೀನಿ ಅಂದರೂ ಬಿಡಲಿಲ್ಲ. ಚಾವಡಿಯ ಎದುರು ನಿಲ್ಲಿಸಿ ನನ್ನ ಬೆನ್ನಮ್ಯಾಲ ಕಲ್ಲು ಹೇರಿಸಿದ...."

ಕರಕರನೆ ಹಲ್ಲು ಕಡಿಯುತ್ತ ನಾನೆಂದೆ.

"ಎಲ ಎಲಾ ! ನನ್ನ ಹಡದವ್ವಗ ಇಂಥ ಅಪಮಾನ ಮಾಡಿದನೇ ? ಇದರ ಸೇಡು ತೀರಿಸಿಕೊಳ್ಳದಿದ್ದರೆ ನಿನ್ನ ಹೊಟ್ಯಾಗ ನಾ ಹುಟ್ಟಿ ಏನುಪಯೋಗ ?"

"ಅಷ್ಟರಾಗ ಪ್ಯಾಟಾರ ಹಣಮು ಚಾವಡಿಗೆ ಬಂದ. ಅವಗ ಹೇಳಿ ಚನ್ನಬಸೂನ್ನ ಕರೆಸಿದ್ನಿ. ಅವ ಬಂದು ಪಾಳೇದ ರೊಕ್ಕಕ್ಕೆ ಜಾಮೀನಾಗಿ ನನ್ನ ಡುಬ್ಬದ ಮೇಲಿನ ಕಲ್ಲು ತೆಗೆಸಿದಾ. ನನ್ನ ಮಗ ರಾಯಾ ಬರಲಿ, ನಿನ್ನ ಚೆಂಡು ಹೊಡಸ್ತೀನಿ-ಅಂತ ಹೇಳಿ ಮನಿಗೆ ಬಂದಿನಿ" ಎಂದು ಹೇಳಿ ಮತ್ತೆ ನನ್ನನ್ನು ತಬ್ಬಿಕೊಂಡು ಬಿಕ್ಕಳಿಸತೊಡಗಿದಳು ಅವ್ವ.

"ಸಿದ್ದಣ್ಣ ಏನೂ ಮಾಡಲಿಲ್ಲೇನವ್ವಾ ? ಅವ ಎಲ್ಲಿದಾನೆ ಈಗ ?"

"ಅದಾನ ಹೊಲದಾಗ. ಅವಗೇನು ಮಾನಾ ಅಪಮಾನಾ ಎರಡೂ

ಅಪ್ಪಾ! ನನ್ನ ಕೈಯಾಗಂತೂ ರೊಕ್ಕ ಇಲ್ಲ. ಗೌಡ ಕುಲಕರ್ಣೀರೆಂದರೆ ಊರಿನ ತಾಯಿ ತಂದಿ ಇದ್ದಂಗೆ. ಅವರ ಸಂಗಡ ಜಗಳ ಮಾಡದಃ ಅವರು ಹೇಳಿದಂಗ ಕೇಳಿಕೊಂಡಿದ್ದರೆ ಇಂಥಾ ಪರಸಂಗ ಯಾಕೆ ಬರುತ್ತಿತ್ತು ಅಂದ!"

"ಇರಲಿ. ಅವ ಯಾವಾಗಲು ಹಂಗೇ. ನಾನಿದೀನಲ್ಲ ಬಾಳ್ಯಾನ್ನ ನೋಡಿ ಕೊಳ್ಳಾಕೆ.....ಅವನ ಕರುಳು ಕೊಯ್ದು ತಂದು ನಿನ್ನ ಕಾಲಮ್ಯಾಲ ಚೆಲ್ಲುತೀನಿ" ಎಂದು ಹೇಳಿ ಅಪ್ಪನನ್ನು ಸಮಾಧಾನಗೊಳಿಸಿ ಮತ್ತೆ ಚಾವಡಿಗೆ ಬಂದೆ.

ಚಾವಡಿಯಲ್ಲಿ ಕಸ ಹೊಡೆಯುತ್ತಲಿದ್ದ ಫಕೀರನನ್ನು ಕುರಿತು ಹೇಳಿದೆ:

"ಹೋಗು ಫಕೀರಾ. ನಿನ್ನ ಕುಲಕರ್ಣೀನ ಕರಕೊಂಡು ಬಾ. ಪಾಳಿ ಕೊಡೂದಕ್ಕ ರಾಯಣ್ಣ ಬಂದಾನಂತ ಹೇಳು."

"ಬಾಳಪ್ಪಣ್ಣ ಮನ್ಯಾಗಿಲ್ಲಂತೆ ರಾಯಣ್ಣ."

ಫಕೀರ ಸುಳ್ಳು ಹೇಳುತ್ತಿದ್ದುದು ಸ್ಪಷ್ಟವಾಗಿತ್ತು: ಅವನನ್ನು ಹಿಡಿದು ಕಪಾಳಿಗೆ ಎರಡು ಬಿಗಿಯುತ್ತಲೂ ಅವನ ನಾಲಗೆ ಸತ್ಯವನ್ನು ಸುರತೊಡಗಿತು.

"ಬಡೀಬ್ಯಾಡೋ ರಾಯಣ್ಣಾ. ನಂದೇನು ತಪ್ಪಿಲ್ಲ ಇದರಾಗ........"

"ಬಾಳ್ಯಾ ಮನ್ಯಾಗದಾನೋ ಇಲ್ಲೋ? ಖರೇ ಹೇಳು."

"ಅದಾನಪಾ....ಅದಾನ...."

"ಮತ್ತೆ? ಇಲ್ಲಂತ ಯಾಕೆ ಹೇಳ್ದಿ?"

ಗಡಗಡನೆ ನಡುಗುತ್ತಲಿದ್ದ ಆ ದುರ್ಬಲ ಮನುಷ್ಯನನ್ನು ಹೊಡೆಯುವುದಕ್ಕೆ ಹೇಸಿಕೆಯೆನಿಸಿತು. ಅವನನ್ನು ಅಲ್ಲಿಯೇ ಬಿಟ್ಟು, ಹಿರಿದ ಕತ್ತಿಯನ್ನು ಝಳಪಿಸುತ್ತ ಕುಲಕರ್ಣಿಯ ಮನೆಗೆ ಧಾವಿಸಿದೆ. ನಾನು ಅಲ್ಲಿಗೆ ಮುಟ್ಟು ವಷ್ಟರಲ್ಲಿಯೇ ಮನೆಯ ಹೆಬ್ಬಾಗಿಲನ್ನು ಮುಚ್ಚಿ ಗಟ್ಟಿಯಾಗಿ ಅಗುಳಿ ಹಾಕಿದ್ದರು. ಹಳೆಯ ಕಾಲದ ಭದ್ರವಾದ ಬಾಗಿಲು. ಅದನ್ನು ತಕ್ಷಣ ಮುರಿಯುವುದು ಕಠಿಣವೇ ಆಗಿತ್ತು. ಎಂತಲೇ, ನಾನು ಹಿತ್ತಿಲಿನ ಕಡೆಗೆ ಹೋಗಿ, ಆಳೆತ್ತರದ ಗೋಡೆಯ ಮೇಲಿಂದ ಜಿಗಿದು ಅಡುಗೆಯ ಮನೆಗೆ ನುಗ್ಗುವಷ್ಟರಲ್ಲಿಯೇ ಕುಲಕರಣಿಯ ಹೆಂಡತಿ ಗೋದಾಬಾಯಿ ಓಡಿಬಂದು ನನ್ನ ಕಾಲುಗಳನ್ನು ಹಿಡಿದುಕೊಂಡಳು.

"ಬಿಡ್ರಿ. ಅವ್ವಾವರು ಬಿಡ್ರಿ. ನನ್ನ ತಡೀಬ್ಯಾಡ್ರಿ. ನನ್ನ ತಾಯಿಯ ಡುಬ್ಬದ ಮ್ಯಾಲ ಕಲ್ಲು ಹೇರಿಸಿ ಭಯಂಕರ ಅಪಮಾನ ಮಾಡಿದಾನ ಬಾಳಾ. ಅವನ್ನ ಕಡಿದು ತುಂಡು ತುಂಡು ಮಾಡುವತನಕ ನನ್ನ ಸಿಟ್ಟು ಇಳಿಯೂ ಹಂಗಿಲ್ಲ."

ಆದರೆ, ನಾನೆಷ್ಟು ಕೊಸರಿಕೊಂಡರೂ ಗೋದಾಬಾಯಿ ನನ್ನ ಕಾಲು ಬಿಡಲಿಲ್ಲ. ಒಳಗಿನಿಂದ ಹುಡುಗರು ಅಳುತ್ತಳುತ್ತ ಬಂದು ತಾಯಿಯ ಸುತ್ತ ನೆರೆದರು. ನನ್ನ ಕಾಲುಗಳ ಮೇಲೆ ಹಣೆಯಿರಿಸಿ ಬಿಕ್ಕುತ್ತ ಗೋದಾಬಾಯಿ ಯೆಂದಳು.

"ಇದೊಂದ ಸಲ ಕ್ಷಮಾ ಮಾಡಿ ನನ್ನ ಮಂಗಲಸೂತ್ರ ಉಳಿಸಪಾ ರಾಯಣ್ಣಾ. ಅವರ ತಪ್ಪು ಹೊಟ್ಯಾಗ ಹಾಕಿಕೋ. ಅವರು ಇನ್ನಮ್ಯಾಲ ಇಂಥಾದ್ದೇನೂ ಮಾಡದಂಗ ನೋಡಿಕೊಂತೀನಿ. ನಾನೇ ಸ್ವತಾ ಬಂದು ನಿಮ್ಮವ್ವನ ಕಾಲ ಹಿಡಿದು ಕೇಳಿಕೊಂತೀನಿ. ನಾನೂ ನಿನ್ನ ತಂಗಿ ಅಂತ ತಿಳುಕೋ ರಾಯಣ್ಣಾ. ಸೆರಗೊಡ್ಡಿ ಬೇಡಿಕೊಂತೀನಿ. ನನ್ನ ಕುಂಕುಮ ಉಳಿಸು...."

ಆ ಸಾಧ್ವಿಯ ಕಣ್ಣೀರಿನಿಂದ ನನ್ನ ಕಾಲು ಒದ್ದೆಯಾಗುತ್ತಿದ್ದಂತೆ ನನ್ನ ರೊಚ್ಚು ಮೆಲ್ಲಮೆಲ್ಲನೆ ಇಳಿಯತೊಡಗಿತು. ಶರಣು ಬಂದವರನ್ನು ಕ್ಷಮಿಸಿ ಬಿಡುವುದು ಶೂರರ ಧರ್ಮ. ಕುಲಕರ್ಣಿಯೇನು ಸ್ವತಃ ಶರಣು ಬಂದಿರಲಿಲ್ಲ. ಆದರೂ, ಆತನ ಹೆಂಡತಿ ನನ್ನ ಕಾಲುಗಳ ಮೇಲೆ ಹಣೆಯಿಟ್ಟು ಕೇಳಿಕೊಳ್ಳುವಾಗ ಇದೊಂದು ಸಲ ಕ್ಷಮಿಸಿಬಿಡದೆ ಬೇರೆ ವಿಧಿಯಿರಲಿಲ್ಲ.

ಕತ್ತಿಯನ್ನು ಒರೆಗೆ ಸೇರಿಸಿ ಮನೆಗೆ ಬಂದೆ. ಮಕ್ಕಳನ್ನೂ ಕಟ್ಟಿಕೊಂಡು ನನ್ನ ಹಿಂದಿನಿಂದಲೇ ಬಂದ ಗೋದಾಬಾಯಿ ನನ್ನ ತಾಯಿಯ ಕಾಲುಗಳನ್ನು ಹಿಡಿದುಕೊಂಡು ಕ್ಷಮೆ ಯಾಚಿಸಿದಳು.

"ಇದೊಂದ ಸಲ ಹೋಗಲಿ ಬಿಡು ರಾಯಣ್ಣಾ. ಅವಗೇನೂ ಮಾಡ ಬ್ಯಾಡ. ಈ ಹೆಣ್ಣುಮಗಳ ಮಾರೀ ನೋಡಿ ಸುಮ್ಮನಿರೋಣು. ಅವನ ಪಾಪದ ಫಲಾ ಅವ ಉಣ್ಣತಾನ............" ಎಂದಳು ಅವ್ವ.

## ೧೩ · ಬಿಚ್ಚುಗತ್ತಿ ಚೆನ್ನಬಸಪ್ಪ

ತಾಯಿ ಕೆಂಚವ್ವನ ಬೆನ್ನ ಮೇಲೆ ಕಲ್ಲು ಹೇರಿಸಿ ಅತ್ಯಾಚಾರ ಮಾಡಿದ ಕುಲಕರ್ಣಿ ಎಂಟು ಹತ್ತು ದಿವಸ ಮನೆಯಿಂದ ಹೊರಗೇ ಬರಲಿಲ್ಲ. ಅವನ ಹೆಂಡತಿ ರಾಯಣ್ಣನಿಗೆ ಶರಣು ಬಂದದ್ದರಿಂದ ಅವನ ಜೀವವೇನೋ ಉಳಿಯಿತು. ಕುಲಕರ್ಣಿ ಇನ್ನು ಮೇಲಾದರೂ ಬುದ್ಧಿ ಕಲಿತು ರಾಯಣ್ಣನ ಜೊತೆಗೆ ಚೆನ್ನಾಗಿ ನಡೆದುಕೊಂಡಾನೆಂದು ನಾವು ಭಾವಿಸಿದ್ದೆವು. ಆದರೆ, ಕುಲಕರ್ಣಿದು ಹುಟ್ಟಾ ವಕ್ರಬುದ್ಧಿ. ರಾಯಣ್ಣನನ್ನೂ ಆತನ ಮನೆಯವರನ್ನೂ ಪೂರ್ಣವಾಗಿ ನಾಶಗೊಳಿಸಬೇಕೆಂದೇ ಆತ ಸಂಕಲ್ಪಿಸಿಕೊಂಡಹಾಗಿತ್ತು. ಎಂತಲೇ, ಒಳಗೊಳಗೇ ತಯಾರಿ ಮಾಡಿಕೊಂಡು ತನ್ನ ಆಳು ಮಗ ಭರಮನನ್ನು ಹುರಿದುಂಬಿಸಿ, ಬೆಳೆದು ನಿಂತಿದ್ದ ರಾಯಣ್ಣನ ಹೊಲದಲ್ಲಿ ತನ್ನ ಎಂಟೂ ಎತ್ತು ಮೇಯಲು ಬಿಡಿಸಿದ.

ಸಿದ್ದಣ್ಣನ ಮಗ ಹನುಮನಿಂದ ಈ ಸುದ್ದಿ ತಿಳಿದ ಕೂಡಲೆ ರಾಯಣ್ಣ ಹೊಲಕ್ಕೆ ಧಾವಿಸಿದ. ಸ್ವಲ್ಪ ಹೊತ್ತಿನಲ್ಲಿಯೇ ನನಗೂ ಈ ವಿಷಯ ಗೊತ್ತಾದುದರಿಂದ ನಾನೂ ಓಡಿಬಂದೆ. ಬೇರೆಯವರ ಬೆಳೆಯಲ್ಲಿ ಎತ್ತು ಬಿಟ್ಟು ಭರಮ ತಪ್ಪು ಮಾಡಿದ್ದನಾದರೂ ಅದನ್ನೊಪ್ಪಿಕೊಳ್ಳದೆ ರಾಯಣ್ಣನ ಸಂಗಡ ವಾದ ಹೂಡುತ್ತ ನಿಂತಿದ್ದ. ಹಾಗೆ ಮಾಡುವುದು ಸರಿಯಲ್ಲವೆಂದು ನಾನು ಬುದ್ಧಿ ಹೇಳಿದರೂ ಆತ ಗಮನಿಸಲಿಲ್ಲ.

"ಇನ್ನೊಮ್ಮೆ ಎತ್ತು ಬಿಟ್ಟಿಯೆಂದರ ಪರಿಣಾಮ ನೆಟ್ಟಗಾಗೂದಿಲ್ಲ ನೋಡು" ಎಂದ ರಾಯಣ್ಣ.

"ನೀ ಮಾಡಾಂವರ ಏನ?" ಭರಮ ಉದ್ಧಟತನದಿಂದ ಸವಾಲು ಹಾಕಿದ.

"ಏನ ಮಾಡತೀನನ್ನೂದು ಮಾಡಿದಾಗs ತಿಳೀತೈತಿ!" ಎಂದ ರಾಯಣ್ಣ.

"ಇದೇನ ನಿಮ್ಮ ಚೆನ್ನವ್ವನ ರಾಜ್ಯಾ ಅಲ್ಲ–ನೀ ಹೇಳಿದಂಗ ಕೇಳಾಕ. ಮೊನ್ನೆ ಹೋಗಿ ಬಿದ್ದಿದ್ದೆಲ್ಲ ಸಂಪಗಾಂವ್ಯಾಗ ಮೂರು ದಿವಸ? ಮತ್ತ ಅದೇ ಪಾಳಿ ಬರತೈತಿ. ತಿಳುಕೊಂಡಿರು."

ಮಾಡಬಾರದ ತಪ್ಪು ಮಾಡಿಯೂ ಇಂಥ ಅಹಂಕಾರದ ಮಾತು ಆಡುತ್ತಿದ್ದರೆ ಯಾರು ಸಹಿಸಿಕೊಳ್ಳಲಿಕ್ಕಾಗುತ್ತದೆ? ಭರಮುನನ್ನು ಹೆಡಮುರಿಗೆ ಬಿಗಿದು ಕಟ್ಟಿ ಹೊಲದ ಆಚೆ ಎಸೆದು, ಕುಲಕರ್ಣಿಯ ಎತ್ತುಗಳನ್ನು ಹೊಡೆದುಕೊಂಡು ಅದೇ ರಾತ್ರಿ ಹೊಂಗಲಕ್ಕೆ ಹೋಗಿ ಕಟುಕರ ಇಮಾಮ ಸಾಬನಿಗೆ ಆರು ನೂರು ರೂಪಾಯಿಗಳಿಗೆ ಮಾರಿದೆವು. ಹೊಲದ ಹಸ್ತೆ ನಾಲ್ಕು ನೂರು ರೂಪಾಯಿ ಕೊಡುವುದಿದ್ದು ಅದನ್ನು ಕೊಟ್ಟು ಬಿಡಲು ತಿಳಿಸಿ ಕೆಂಚವ್ವನ ಹತ್ತಿರ ಹಣ ಕೊಟ್ಟೆವು.

ನಾವು ಎತ್ತುಗಳನ್ನು ಹೊಡೆದುಕೊಂಡೊಯ್ದ ಸುದ್ದಿ ಕುಲಕರ್ಣಿಗೆ ಆ ರಾತ್ರಿಯೇ ಗೊತ್ತಾಗಿತ್ತು. ಅವನೂ ಸುಮ್ಮನೆ ಕುಳಿತಿರಲಿಲ್ಲ. ರಾತ್ರಿಯಲ್ಲಿಯೇ ಹಳಬರನ್ನು ಕಳಿಸಿ, ಮಾಮಲೇದಾರನಿಗೆ ತರಕಾರು ಸಲ್ಲಿಸಿ, ರಾಯಣ್ಣನನ್ನೂ ನನ್ನನ್ನೂ ಬಂಧಿಸುವ ಅಪ್ಪಣೆ ದೊರಕಿಸಿದ್ದನಂತೆ. ಇಂದಿಗೆ ಅವನಿಗೂ ನಮಗೂ ಪ್ರತ್ಯಕ್ಷವಾಗಿಯೇ ಜಗಳಕ್ಕಾರಂಭವಾದಂತಾಯಿತು. ಹೊಂಗಲದಿಂದ ಹಿಂತಿರುಗಿ ಬಂದವರೇ ರಾತ್ರಿ ಊಟ ಮುಗಿಸಿಕೊಂಡು, ಕುಲಕರ್ಣಿಯ ಹೊಲಕ್ಕೆ ಹೋಗಿ ಅಲ್ಲಿ ಸಂಗ್ರಹಿಸಿಟ್ಟ ಆತನ ಮೇವಿನ ಬಣವೆಯನ್ನು ಸುಟ್ಟು ಹಾಕಿದೆವು. ಸುದ್ದಿ ಕೇಳಿ ಕುಲಕರ್ಣಿ ಶಂಖವಾದ್ಯ ಮಾಡುತ್ತ ಹೊಲಕ್ಕೆ ಓಡಿಬರುವುದರೊಳಗಾಗಿ ನಾವು ದೂರ ಹೋಗಿ ತಲೆಮರೆಸಿಕೊಂಡಿದ್ದೆವು.

ಅದೇ ರಾತ್ರಿ ಬೆಳವಡಿಗೆ ಬಂದು ಒಡ್ಡರ ಯಲ್ಲನಾಯಕನನ್ನು ಭೆಟ್ಟಿಯಾದೆವು. ನನ್ನನ್ನೂ ರಾಯಣ್ಣನನ್ನೂ ಹುಡುಕುವುದಕ್ಕಾಗಿ ಸಂಪಗಾವಿಯ ಸಿಪಾಯಿಗಳು ಬೆಳವಡಿಗೂ ಬಂದು ಹೋದದ್ದು ಗೊತ್ತಾಯಿತು. ಅಂದು ಮಧ್ಯರಾತ್ರಿಯ ವರೆಗೂ ಯಲ್ಲನಾಯಕನ ಮನೆಯಲ್ಲಿಯೇ ಕುಳಿತು ಮುಂದಿನ ಕ್ರಮದ ಬಗೆಗೆ ಚರ್ಚಿಸುತ್ತಿದ್ದೆವು.

"ಸಿಪಾಯರ ಕೈಯಾಗಂತೂ ಸಿಗುವಂತಿಲ್ಲ. ಊರಾಗೂ ಇರುವಂತಿಲ್ಲ. ಸುಮ್ಮನೆ ಗುಡ್ಡಾ ಗಿಡ್ಡಾ ತಿರುಗುತ್ತಾ ಇರೂದೂ ನನ್ನಿಂದಾಗುವಂತಿಲ್ಲ. ದಂಡು ಕೂಡಿಸಿ ಲಢಾಯಿ ಮಾಡಿ ಒಂದು ಕೈ ನೋಡಿಬಿಡೂಣು ಎಂದ ರಾಯಣ್ಣ.

"ದಂಡು ಅಂದಮ್ಯಾಲ ಅವರಿಗೆಲ್ಲಾ ಸಂಬಳಾ ಕೊಡಾಕ ರೊಕ್ಕ ಬೇಕಲ್ಲ? ಊಟ ಉಡಿಗೆ ಕತ್ತಿ ಢಾಲು ಮದ್ದು ಗುಂಡು ಒಂದಾ ಎರಡಾ?

ಎಲ್ಲಾ ಎಲ್ಲಿಂದ ತರೂದು ?" ಎಂದ ಯಲ್ಲನಾಯಕ.

"ಎಲ್ಲಿ ಸಿಗತೈತ್ಯೋ ಅಲ್ಲಿಂದ ತರೂದು. ಶಿವಾಜಿಮಹಾರಾಜರು ರಾಜ್ಯ ಸ್ಥಾಪನಾ ಮಾಡಿದ ಕಥಿ ನಿನಗೆ ಗೊತ್ತಿರಬೇಕಲ್ಲ ಯಲ್ಲಣ್ಣಾ? ಸೆಟ್ಟಿ ಸಾವುಕಾರರನ್ನ ಸುಲಿದು, ಹಣಾ ಕೂಡಿಸಿ ದಂಡು ತಯಾರು ಮಾಡಿದರವರು. ವಿಜಯನಗರ ರಾಜ್ಯ ಸುರೂ ಆದದ್ದೂ ಹಿಂಗೇ ಅಲ್ಲೇನ? ಹುಕ್ಕಬುಕ್ಕ ಅನ್ನುವ ಕುರುಬರೇ ಅಂಥಾದ್ದೊಂದು ದೊಡ್ಡ ರಾಜ್ಯ ಕಟ್ಟಿ ಆಳಿದ್ದರು. ನಾವೂ ಪ್ರಯತ್ನ ಮಾಡಿದರೆ ದಂಡು ಕೂಡಿಸಿ ಪರದೇಶಿಗಳನ್ನು ಹೊರಗೆ ಹಾಕಿ ಕಿತ್ತೂರ ರಾಜ್ಯ ಮತ್ತೆ ಗಳಿಸಬಹುದು" ಎಂದ ರಾಯಣ್ಣ.

"ಹೆಂಗಾದರೂ ಯುಕ್ತೀ ಮಾಡಿ ಚಿಕ್ಕರಾಣಿಯವರನ್ನ ಭೆಟ್ಟಿಯಾಗಿ ಅವರ ಆಶೀರ್ವಾದ ತಕ್ಕೊಂಡು ಬರಬೇಕಲ್ಲ ರಾಯಣ್ಣಾ?" ಎಂದ ಯಲ್ಲನಾಯಕ.

"ಅವರ ಭೆಟ್ಟಿ ಸಿಗೂದು ಬಹಳ ಕಠಿಣಪಾ. ಗುರುತದವರ್‍ಯಾರನ್ನೂ ವಾಡೇದೊಳಗೆ ಬಿಡೂದಿಲ್ಲ. ಗಂಗಾಧರಪ್ಪ ಸಿಕ್ಕಾಗಿನಿಂದ ಪಹರೆ ಬಿಗಿಮಾಡ್ಯಾರ" ಎಂದ ರಾಯಣ್ಣ.

ಥಟ್ಟನೆ ವಿಚಾರವೊಂದು ಹೊಳೆದು ನಾನು ಹೇಳಿದೆ :

"ಜಂಗಮರ ಸೋಗು ಹಾಕೂದು ಬಿಟ್ಟು ಅಡಿಗೀ ಮಾಡುವ ಹೆಂಗಸರ ಹೆಂಗ ವೇಷ ಬದಲಿಸಿ ವಾಡೆದೊಳಗೆ ಹೋಗಿ ಬರಲಿಕ್ಕೆ ಶಕ್ಯ ಆದೀತಲ್ಲ ರಾಯಣ್ಣಾ ?"

"ಹೌದೌದು. ಹಂಗ ಮಾಡಾಕ ಬಂದೀತು. ಅಡಿಗೆಮಾಡುವ ಹೆಣ್ಣಾಳು ಗಳೇನ ಹಗಲೂ ರಾತ್ರಿ ವಾಡೇದೊಳಗss ಇರುವವರಲ್ಲ. ರಾತ್ರಿಯಾತು ಅಂದರೆ ಊರಾಗಿರುವ ತಮ್ಮ ತಮ್ಮ ಮನಿಗೆ ಹೋಗುವವರೇ. ಅವರ ಪೈಕಿ ಒಬ್ಬಿಬ್ಬ ರನ್ನ ಒಡಕೊಂಡು ಅವರ ಬದಲು ನಾವು ಹೋಗಿ ಬರೂಣಂತ," ಎಂದ ರಾಯಣ್ಣ.

"ಅದೇನೋ ಸರಿಯಾತಪಾ. ಆದರss ಈ ಸೋಗ್ ಹಾಕೂದರಾಗಿರುವ ಗೋಳು ಅಂದರ ಒಂದss! ಇಷ್ಟುದಿವಸ ಪ್ರೀತಿಯಿಂದ ಬೆಳೆಸಿದ ಮೀಸಿ ಬೋಳಿಸಬೇಕಾಗುತ್ತೈತಿ...." ಎಂದು ನಗುತ್ತ ನುಡಿದ ಯಲ್ಲನಾಯಕ.

ಕಡೆಯ ಬಾರಿಗೆ ಹೆಂಡಿರು ಮಕ್ಕಳ ಮುಖನೋಡಿ ಬರುವದಾಗಿ ಹೇಳಿ ನಾನು ಅಮಟೂರಿಗೆ ನಡೆದೆ. ಎತ್ತಿನ ಗದ್ದಲ ನಡೆದಂದಿನಿಂದ ನಾನು ಮನೆಗೇ ಬಂದಿರಲಿಲ್ಲ. ನನ್ನ ಹೆಂಡತಿಯೇನೋ ಬಹಳ ಧೈರ್ಯಸ್ಥಳೇ ಅನ್ನಬೇಕು, ರಾಯಣ್ಣನ ಗೆಳೆತನ ಮಾಡಿ ನಾನು ಊರೂರು ಅಲೆಯುತ್ತಿದ್ದಾಗಲೂ ಆಕೆ ಯೊಬ್ಬಳೇ ಹೊಲಮನೆಗಳ ಭಾರ ಹೊತ್ತು ಎಲ್ಲವನ್ನೂ ಸುಸೂತ್ರವಾಗಿ ನಡೆಸಿಕೊಂಡು ಬಂದಿದ್ದಳು.

ಮಧ್ಯರಾತ್ರಿಯಲ್ಲಿ ನಾನು ಮನೆಗೆ ಬಂದುದನ್ನು ಕಂಡು ಆಕೆಗೇನೂ ಆಶ್ಚರ್ಯವಾಗಲಿಲ್ಲ. ರಾಯಣ್ಣನ ಜೊತೆಯಲ್ಲಿ ನಾನು ಅಲ್ಲಿ ಇಲ್ಲಿ ಅಲೆಯು ತ್ತಿದ್ದುದು ಆಕೆಗೆ ಗೊತ್ತೇ ಇದ್ದಿತು.

ಮಕ್ಕಳೆಲ್ಲ ಮಲಗಿ ನಿದ್ರಿಸುತ್ತಿದ್ದರು. ಹೆಂಡತಿಯೇ ಎದ್ದು ಬಂದು ಬಾಗಿಲು ತೆರೆದು ನನ್ನನ್ನು ಬರಮಾಡಿಕೊಂಡಳು.

"ಕೈ ಕಾಲು ತೊಳೆದುಕೊಳ್ರಿ, ಊಟ ಮಾಡೀರಂತೆ. ಹಸಿದುಬಂದಿರ ಬೇಕು."

"ಇಲ್ಲಿಲ್ಲ. ಊಟ ಮಾಡೀನಿ ಆಗಲೇ" ಎಂದು ಹೇಳಿ, ಆಕೆಯನ್ನು ಹತ್ತಿರ ಕೂಡ್ರಿಸಿಕೊಂಡು, ಪ್ರೀತಿಯಿಂದ ಆಕೆಯ ತಲೆಯ ಮೇಲೆ ಕೈಯಾಡಿ ಸುತ್ತ ಮಾತನಾಡಿದೆ.

"ನನ್ನ ಸಲುವಾಗಿ ಎಷ್ಟು ಕಾಳಜೀ ಮಾಡುತ್ತೀಯಲ್ಲ? ಹೊರಗೆ ತಿರು ಗಾಡುವಾಗ ನಾನೇನ ಉಪವಾಸ ಇರತೀನೇನ? ನೀನಿನ್ನೂ ಉಂಡಿಲ್ಲಂತ ಕಾಣತೈತಿ?"

"ನೀವು ಬಂದಮ್ಯಾಲ ಉಂಡರಾತಂತ ಬಿಟ್ಟಿದ್ದಿನಿ."

"ಊಹೂಂ. ಹಿಂಗೆಲ್ಲಾ ಮಾಡಬಾರದಂತ ಎಷ್ಟು ಸರೆ ಹೇಳಿಲ್ಲ ನಾ? ನನ್ನ ಹಾದೀ ಕಾಯದ ಉಂಡು ಮಲಗಿಬಿಡಬೇಕು. ಹೋಗು. ಮೊದಲು ಉಂಡು ಬಾ, ಹೋಗು. ಆಮ್ಯಾಲ ಸಾವಕಾಶವಾಗಿ ಕುಂತು ಮಾತಾ ಡೋಣು."

"ಸರಿರಾತ್ರಿ ಆಗಿ ಹೋತು. ಇನ್ನೇನ ಮಾತು? ಮಲಕೊಂಡು ನಿದ್ದೀ ಮಾಡಿರಲ್ಲ?" ಎಂದಳಾಕೆ.

"ಮೊದಲು ನೀ ಉಂಡು ಬಾ" ಎಂದು ಹೇಳಿ ಆಕೆಯನ್ನು ಕಳಿಸಿದೆ. ಗುಡಾರದ ಮೇಲೆ ಕೌದಿ ಹೊದ್ದುಕೊಂಡು ಮಲಗಿದ್ದ ಮಕ್ಕಳ ಮುಖಗಳನ್ನು

ನೋಡುತ್ತಿದ್ದಂತೆ ಎದೆಯಲ್ಲಿ ಕಳವಳ ಉಕ್ಕಿ ಬಂದಿತು. ಹಿರಿಯ ಮಗನಿಗೆ ಇನ್ನೂ ಎಂಟು ವರ್ಷ. ಉಳಿದಿಬ್ಬರು ಚಿಕ್ಕವರು. ಹಿರಿಯ ಹುಡುಗ ದೊಡ್ಡವನಾಗಿ ಮನೆತನದ ಭಾರ ವಹಿಸಿಕೊಳ್ಳಬೇಕಾದರೆ ಇನ್ನೂ ೧೦ ವರ್ಷ ಬೇಕು. ಅದು ವರೆಗೆ ನನ್ನ ಹೆಂಡತಿಯೇ ಇವರೆಲ್ಲರ ಯೋಗಕ್ಷೇಮ ನೋಡಿಕೊಳ್ಳಬೇಕಾಗುವುದು. ಆಕೆಯೇನೋ ಸಮರ್ಥಳೇ ಆಗಿದ್ದಾಳೆ. ಆಕೆಯ ತವರು ಮನೆಯೂ ಇದೇ ಊರಲ್ಲಿಯೇ ಇರುವುದೊಂದು ಸುದೈವದ ವಿಷಯ. ಕಠಿಣ ಪ್ರಸಂಗ ಬಂದಾಗಲೆಲ್ಲ ಆಕೆಯ ಅಣ್ಣ-ತಮ್ಮಂದಿರೂ ಸಹಾಯ ಮಾಡುತ್ತಾರೆ. ಆದರೂ....ಆದರೂ....

ಎಳೆಮಕ್ಕಳಿಂದೊಡಗೂಡಿದ ಕುಟುಂಬವನ್ನು ಹೆಂಡತಿಯ ವಶಕ್ಕೊಪ್ಪಿಸಿ ಬಿಟ್ಟು ಹೀಗೆ ಹೊರಟು ಹೋಗುವುದು ಸರಿಯಾಗಬಹುದೇ? ಈಗ ಹೋದರೆ ಮತ್ತೆ ಬರುವುದು ಯಾವಾಗಲೋ? ಒಂದು ವೇಳೆ ಬಂದರೂ ಬರಬಹುದು, ಬಾರದೆಯೂ ಇರಬಹುದು. ಇನ್ನು ಮುಂದೆ ಪರದೇಶೀಯರ ವಿರುದ್ಧ ಪ್ರತ್ಯಕ್ಷವಾದ ಯುದ್ಧವನ್ನೇ ಹೂಡಬೇಕಾಗುವುದು. ಯುದ್ಧವೆಂದ ಮೇಲೆ ಯಾವುದರದೂ ಭರವಸೆಯಿರುವುದಿಲ್ಲ. ನಾವು ಗೆದ್ದರೂ ಗೆಲ್ಲಬಹುದು. ಸೋತರೂ ಸೋಲಬಹುದು. ಅಥವಾ....ಪ್ರಾಣ ತ್ಯಜಿಸುವ ಪ್ರಸಂಗವೂ ಬರಬಹುದು. ಇಲ್ಲವೆ, ಪರದೇಶಿಗಳ ಕೈದಿಗಳಾಗಿ ಯಾವುದಾದರೊಂದು ದೂರದ ಕೋಟೆಯಲ್ಲಿ ಕೊಳೆಯಬೇಕಾದ ಪ್ರಸಂಗವೂ ಬರಬಹುದು. ಅಂತೂ ಇಂತೂ, ನಾನೀಗ ಮನೆಯ ಆಸೆಯನ್ನು ಬಿಟ್ಟುಕೊಟ್ಟೇ ಹೊರಡಬೇಕು.

ಇದಾವುದನ್ನೂ ಅರಿಯದೆ ಸುಖನಿದ್ರೆಯಲ್ಲಿ ತಲ್ಲೀನರಾಗಿದ್ದ ಮಕ್ಕಳ ಮುಗ್ಧ ಮುಖಗಳನ್ನು ನೋಡುತ್ತಿದ್ದಂತೆ ಕತ್ತು ಬಿಗಿದುಬಂದಿತು. ತುಟಿಗಳನ್ನು ಬಿಗಿಯಾಗಿ ಕಚ್ಚಿ ಹಿಡಿದು, ಕಳವಳವನ್ನು ಹತ್ತಿಕ್ಕಿಕೊಂಡು ಅಲ್ಲಿಂದ ಹೊರಟು ಪಡಸಾಲೆಗೆ ಬಂದೆ.

ಹೆಂಡತಿ ಊಟ ಮುಗಿಸಿ ಬಂದಳು. ಮತ್ತೆ ಆಕೆಯ ಹತ್ತಿರ ಕುಳಿತು, ನಿಧಾನವಾಗಿ ಮಾತು ತೆಗೆದೆ :

"ನಾನೀಗ ಒಂದು ಗಂಡಾಂತರದ ಕೆಲಸಕ್ಕೆ ಹೊರಟು ನಿಂತೀನಿ. ಆದರಿಂದ ಪಾರಾಗಿ ಬಂದರೆ ಮತ್ತೆ ನಿಮ್ಮ ನಮ್ಮ ಭೆಟ್ಟಿಯಾಗಬೇಕು. ಇಲ್ಲದಿದ್ದರಿಲ್ಲ...."

"ಮತ್ತೀನ ಲಢಾಯಿಗೆ ಹೊರಟೇರೇನ ?" ಎಂದು ಆಕೆ ನಗುತ್ತಲೇ ಕೇಳಿದಳು.

"ಹೌದು. ನಿನಗ ಹೆಂಗ ಗೊತ್ತಾತು ?"

"ಊರಾಗ ಮಂದಿ ಮಾತಾಡುತ್ತಿದ್ದಾರೆ. ನಿಮ್ಮನ್ನೂ ರಾಯಣ್ಣನನ್ನೂ ಹಿಡೀಬೇಕಂತ ಹುಕುಂ ಹೊರಟೈತಂತಲ್ಲ ? ನಿನ್ನೆ ಇಡೀ ದಿವಸವೆಲ್ಲಾ ಹಳ ಬರು ತಿರುಗೇ ತಿರುಗಿದ್ರು ಮನೀಗೆ, ನೀವೆಲ್ಲದೀರಿ ಅಂತ ಹುಡುಕಿಕೊಂಡು. ನಾನೂ ಇರಲಿಲ್ಲ ಮನ್ಯಾಗ. ಹೊಲದಿಂದ ಸಂಜೀ ಕಡೆ ಬಂದಿನಿ. ಸಂಗೊಳ್ಳಿ ಕುಲಕರ್ಣಿಗೂ ನಿಮಗೂ ಏನೋ ವೈರ ಬಿದ್ದವಂತಲ್ಲ ?"

ನಡೆದ ಘಟನೆಗಳ ಬಗೆಗೆ ಸ್ವಲ್ಪದರಲ್ಲಿಯೇ ವಿವರಿಸಿ ಹೇಳಿ ಮತ್ತೆ ನಾನೆಂದೆ :

"ಇನ್ನ ಮ್ಯಾಲ ರಾಯಣ್ಣನೂ ನಾನೂ ಗುಪ್ತವಾಗಿ ತಿರುಗಬೇಕಾಗ ತೈತಿ. ಲಢಾಯಿಯೂ ಆಗಬಹುದು. ದೇವರು ಮನಸ್ಸು ಮಾಡಿದರೆ ಮತ್ತೆ ಮನಿಗೆ ಬಂದು ನಿಮ್ಮೆಲ್ಲರ ಮಾರೀ ನೋಡೇನು, ಇಲ್ಲದಿದ್ದರಿಲ್ಲ."

"ದೇವರು ಮನಸು ಮಾಡೇ ಮಾಡತಾನ. ಸಂಶಯದ ಮಾತು ನೀವ್ಯಾಕ ಮಾತಾಡತೀರಿ ? ಲಢಾಯಿ ಅಂದರೆ ನಮಗೇನು ಹೊಸಾದಲ್ಲಲ್ಲ ? ಕಿತ್ತೂರ ಚನ್ನವ್ವನ ರಾಜ್ಯ ಉಳಿಸಾಕೂ ನೀವು ಹೋಗಿ ಬಂದಿದ್ದಿರಲ್ಲ ?"

"ಈಗೂ ನಾವು ಲಢಾಯಿ ಮಾಡೂದು ಅದಕ್ಕೆಂತಲೇ. ಈಗ ಅವ್ವ ನವರು ಇರದಿದ್ದರೂ ಅವರ ಮೊಮ್ಮಗ ಅದಾನಲ್ಲ? ಅವನ್ನ ಮತ್ತೆ ಕಿತ್ತೂರ ಗಾದಿಯ ಮ್ಯಾಲ ಕೂಡ್ರಿಸೂದಕ್ಕ ನಾನೂ ರಾಯಣ್ಣ ಪ್ರಯತ್ನ ನಡೆಸೀವಿ."

"ಹಂಗಾರ ಬಾಳ ಚಲೋ ಆತಲ್ಲ? ಆರಾಮವಾಗಿ ಹೋಗಿ ಬರ್ರಿ" ಎಂದಳು ನನ್ನ ವೀರ ಪತ್ನಿ.

ಆಕೆಯ ಧೈರ್ಯವನ್ನೂ ಕೆಚ್ಚೆದೆಯನ್ನೂ ಕಂಡು ನನಗೇ ಆಚ್ಚರಿಯೆನ್ನಿ ಸಿತು. ಇತರ ಸಾಧಾರಣ ಹೆಂಗಸರಂತೆ ಆಕೆ ಅಳಲಿಲ್ಲ, ಗೋಳಾಡಲಿಲ್ಲ.... ಹೊಯ್ದಾಡುತ್ತಿದ್ದ ನನ್ನ ಮನಸ್ಸು ತಕ್ಷಣವೇ ಸ್ಥಿರವಾಯಿತು. ನನ್ನ ನಿಶ್ಚಯ ಮತ್ತಷ್ಟು ಬಲಗೊಂಡಿತು.

ನನಗೆ ಎಲ್ಲಾ ದೃಷ್ಟಿಯಿಂದಲೂ ಅನುರೂಪಳಾಗಿದ್ದ ಆ ಸತಿಯನ್ನು

ಮನಃಪೂರ್ವಕವಾಗಿ ಹರಸಿ ಹೊರಟು ನಿಂತೆ. ಕಡೆಯ ಗಳಿಗೆಯಲ್ಲಿ ಮಾತ್ರ ಆಕೆಯ ಕಣ್ಣುಗಳು ಒದ್ದೆಯಾದಂತೆ ಕಾಣಿಸಿತು. ನನ್ನ ಅಡಿಗಳಿಗೆರಗುತ್ತ, ಗದ್ಗದ ದನಿಯಲ್ಲಿ ಅವಳೆಂದಳು.

"ಹೋಗಿ ಬರ್ರಿ, ಮನೀಕಡೆ ಚಿಂತೀ ಮಾಡಬ್ಯಾಡ್ರಿ. ನಾನೆಲ್ಲಾ ನೋಡಿ ಕೊಂತೀನಿ. ದೇವರು ನಿಮ್ಮನ್ನು ಕಾಪಾಡಲಿ."

# ೧೪ ರಾಯನಾಯಕ

ವೀರಮ್ಮ ರಾಣಿಯವರನ್ನು ಭೆಟ್ಟಿಯಾಗಲು ಎರಡು ಮೂರು ದಿನ ಪ್ರಯತ್ನಿಸಿದರೂ ಯಶ ದೊರೆಯಲಿಲ್ಲ. ಗುರುತು ಪರಿಚಯವಿಲ್ಲದ ಜಂಗಮ ರನ್ನೇ ಆಗಲಿ, ಸ್ತ್ರೀಯರನ್ನೇ ಆಗಲಿ ವಾಡೆಯೊಳಗೆ ಬಿಡಕೂಡದೆಂದು ಮಾಮಲೇದಾರ ಕಟ್ಟುಸಿಟ್ಟಾದ ಅಪ್ಪಣೆ ಕೊಟ್ಟಿರುವನಂತೆ. ಅನೇಕ ವರ್ಷ ಗಳಿಂದ ಬಲು ಪ್ರೀತಿಯಿಂದ ಬೆಳೆಸಿಕೊಂಡು ಬಂದಿದ್ದ ಮೀಸೆಯನ್ನೂ ಬೋಳಿಸಿಬಿಟ್ಟು, ಹೆಂಗಸರಂತೆ ಸೀರೆ ಉಟ್ಟುಕೊಂಡು ಹೋದರೂ ವ್ಯರ್ಥ ವಾಯಿತು. ದ್ವಾರಪಾಲಕರಿಗೆ ಲಂಚ ಕೊಟ್ಟು ಪ್ರವೇಶ ದೊರಕಿಸಲು ಪ್ರಯತ್ನ ಪಟ್ಟಿದ್ದೂ ಆಯಿತು. ಅವರು ಹಣವನ್ನೇನೋ ತೆಗೆದುಕೊಂಡರಾದರೂ ನಮ್ಮನ್ನು ಒಳಗೆ ಬಿಡಲಿಲ್ಲ.

ಇನ್ನೇನು ಮಾಡುವುದೆಂದು ಯೋಚಿಸುತ್ತ ಹೊಂಗಲದಲ್ಲಿಯೆ ಎರಡು ದಿನ ಅಲೆಯುತ್ತಿದ್ದೆವು. ಚೆನ್ನಮ್ಮ ರಾಣಿಯವರ ದಾಸಿ ಪಾರ್ವತಿಯಾದರೂ ಭೆಟ್ಟಿಯಾದರೆ ಆಕೆಯ ಮೂಲಕ ಚಿಕ್ಕ ರಾಣಿಯವರಿಂದ ಸಂದೇಶ ದೊರಕಿಸ ಬಹುದೆಂದು ಬಗೆದು ಪಾರ್ವತಿಯ ಮನೆಗೆ ಬಂದೆವು. ಪಾರ್ವತಿಯ ತಾಯಿ ನೀಲವ್ವ ನಮ್ಮನ್ನು ಈ ಸ್ತ್ರೀ ವೇಷದಲ್ಲಿ ಗುರುತಿಸುವುದು ಶಕ್ಯವಿರಲಿಲ್ಲ.

"ಬರ್‍ರಿವಾ, ಬರ್‍ರಿ, ಕೂಡ್ರಿ, ಯಾವೂರವರು?" ಎಂದು ಆರಂಭಿಸಿದಳು ನೀಲವ್ವ.

ಹೆಣ್ಣು ಸೋಗಿನಲ್ಲಿ ಸ್ವಲ್ಪ ಮೋಜು ಮಾಡುವ ಲಹರಿ ಬಂದಿರಬೇಕು ಚನ್ನಬಸಪ್ಪನಿಗೆ. ಹೆಂಗಸರನ್ನೂ ನಾಚಿಸುವಂತೆ ಮುರುಕ ಮಾಡುತ್ತ ಆತ ನೆಂದ :

"ನಾವು ಬಾಗೇವಾಡಿಯವರು ಅತ್ತೆವ್ವ. ನಮ್ಮ ತಮ್ಮಗ ಹೆಣ್ಣು ನೋಡಾಕಂತ ಬಂದೀವಿ."

"ಹಿಂಗೇನ? ಚಲೋ ಆತಲ್ಲ ? ನೀವಿಬ್ರೇ ಬಂದೀರೋ ? ಗಂಡಸರು ಬಂದಂಗೆ ಕಾಣೂದಿಲ್ಲಾ?" ಎಂದಳು ನೀಲವ್ವ.

"ಬಂದಾರವ್ವಾ. ಪ್ಯಾಟ್ಯಾಗ ಹೋಗ್ಯಾರ. ನಮಗೆ ನಿಮ್ಮ ಪಾರ್ವತವ್ವನ ಗುರುತೈತಿ. ಅದಕ್ಕ ಇಲ್ಲೇ ಉಂಡರಾತಂತ ಬಂದೀವಿ."

"ಬಾಳ ಚಲೋ ಮಾಡಿದಿರಿ. ಪಾರ್ವತಿ ವಾಡೇಕ್ಕ ಹೋಗ್ಯಾಳ. ಇನ್ನೇನ ಅಕಿ ಬರೂದು ಸಂಜೀಕಡೆ. ಗಡಾ ಗಡಾ ಅಡಗೀ ಮಾಡತೇನ. ನಿಮ್ಮ ಗಂಡಸರು ಬಂದಮ್ಯಾಲ ಉಂಡೀರಂತೆ" ಎಂದು ಹೇಳಿ ನೀಲವ್ವ ಎದ್ದು ಅಡಿಗೆಯ ಮನೆಗೆ ಹೋದಳು.

ಇಷ್ಟು ತಮಾಷೆಯೇ ಸಾಕೆಂದು ನನಗನಿಸಿತು. ನೀಲವ್ವ ನಮ್ಮ ಗಂಡಸರಿಗಾಗಿ ಕಾಯುತ್ತ ಕೂಡ್ರಬಾರದಲ್ಲ? ಪಕ್ಕದಲ್ಲಿದ್ದ ಕೋಣೆಗೆ ಹೋಗಿ, ನಾವು ತೆಗೆದುಕೊಂಡು ಬಂದಿದ್ದ ಗಂಟು ಬಿಚ್ಚಿ, ನಮ್ಮ ಉಡುಪು ಧರಿಸಿದೆವು. ನಮಗೆ ಕುಡಿಯುವ ನೀರು ಕೊಡಲು ಪಡಸಾಲೆಗೆ ಬಂದ ನೀಲವ್ವ ನಮ್ಮನ್ನು ನೋಡಿ, ಚಕಿತಳಾಗದಿರಲಿಲ್ಲ. ನಾವು ಸ್ತ್ರೀವೇಷದಲ್ಲಿ ಬರಲು ಕಾರಣವೇನೆಂಬುದು ಆಕೆಗೂ ಥಟ್ಟನೆ ಹೊಳೆದಿರಲು ಸಾಕು. ಹೊರಬಾಗಿಲು ಮುಚ್ಚಿ ಅಗುಳಿ ಹಾಕಿ, ನಮಗೆ ನೀರಿನ ತಂಬಿಗೆ ಕೊಡುತ್ತ ನೀಲವ್ವನೆಂದಳು.

"ಈ ಮುದಕೀನ ಮೋಸ ಮಾಡೂದು ಅಷ್ಟು ಸುಲಭ ಅಲ್ಲಪ್ಪಾ. ರಾಯಣ್ಣಾ. ನೀವು ಖರೇ ಹೆಂಗಸರಿರಲಿಕ್ಕಿಲ್ಲಂತ ನನಗೂ ಸಂಶಯ ಬಂದಿತ್ತು ಆಗಲೇ."

"ವಾಡೇದ ಸಿಪಾಯಿಗಳಿಗೂ ಸಂಶಯ ಬರಲಿಲ್ಲಂತ! ನಿನಗೆಂಗ ಗೊತ್ತಾತವಾ?" ಎಂದ ಚನ್ನಬಸಪ್ಪ.

"ಹೆಂಗಸರದು ಹೆಂಗಸರಿಗೆ ಗೊತ್ತಾಗತೈತಿ. ಅವಕ್ಕೇನ ತಿಳೀಬೇಕು ಮೂಳಗೋಳಿಗೆ!" ಎಂದಳು ನೀಲವ್ವ.

"ಇದೇನ ಆಟಾ ನಡಿಸೀಯೋ ರಾಯಣ್ಣಾ? ಮೀಸೀನೂ ಬೋಳಿಸಿ ಬಿಟ್ಟೀಯಲ್ಲ?"

"ಚಿಕ್ಕರಾಣಿಯವರನ್ನ ಭೆಟ್ಟಿಯಾಗಬೇಕಂತ ಇದನ್ನೆಲ್ಲಾ ಮಾಡಬೇಕಾತವ್ವ."

"ಭೆಟ್ಟಿ ಆತೂ?"

"ಇಲ್ಲ. ವಾಡೇದೊಳಗ ಯಾರನ್ನೂ ಬಿಡೂದಿಲ್ಲ."

"ಈಗೊಂದು ವಾರದಿಂದ ಹಿಂಗ ಬಂದೋಬಸ್ತ್ ಮಾಡ್ಯಾರಂತಪ್ಪಾ. ವಾಡೇದೊಳಗ ಕೆಲಸ ಮಾಡುವ ಆಳುಕಾಳುಗಳನ್ನ ಒಳಗ ಬಿಡ್ತಾರ. ಅವರೂ ಹರೀವತ್ತ ಹೋದರಂದರ ಹೊಳ್ಳಿ ಬರೂದು ಸಂಜೀಕಡೇನs. ಅವರಮ್ಯಾಲೂ

ಸಿಪಾಯಿಗಳು ಕಣ್ಣಿಟ್ಟಿದ್ದಾರಂತ. ನಮ್ಮ ಮನಿಯ ಮುಂದೂ ಆಗಾಗ ಅಡ್ಯಾಡ್ಡಿಡತಾರ."

ಹೊತ್ತು ಮುಳುಗಿ ಕತ್ತಲಾದ ಮೇಲೆ ಪಾರ್ವತಿ ಬಂದಳು. ಅನೇಕ ತಿಂಗಳುಗಳಿಂದ ನಾವು ಆಕೆಯನ್ನು ನೋಡಿರಲಿಲ್ಲ. ಗಂಗಾಧರನ ಬಂಧನದ ಚಿಂತೆಯೊಂದು, ಹಿರಿಯ ರಾಣಿಯ ಮರಣದ ಚಿಂತೆಯೊಂದು. ಹೀಗಾಗಿ ಪಾರ್ವತಿ ಅರ್ಧಕ್ಕರ್ಧ ಇಳಿದು ಹೋಗಿದ್ದಳು. ನಮ್ಮನ್ನು ನೋಡುತ್ತಲೂ ಆಕೆಗೆ ಸಹಜವಾಗಿಯೇ ಅಳು ಉಕ್ಕಿ ಬಂದಿತು. ನಮಗೂ ಕಣ್ಣು ಒದ್ದೆಯಾಯಿತು.

"ಅವ್ವನವರಂತೂ ಹೋಗಿಬಿಟ್ರು. ನಾ ಪರದೇಶಿಯಾದಿನಿ. ಏನೋ ಚಿಕ್ಕರಾಣಿಯವರು ದೊಡ್ಮನಸು ಮಾಡಿ ತಮ್ಮ ಹತ್ತರ ಇಟ್ಟುಕೊಂಡಾರ, ಆದರ ಅವರಿಗೂ ಸುಖಾ ಇಲ್ಲ. ಹಗಲೂ ರಾತ್ರೀ ಕಿತ್ತೂರಿನದ ಚಿಂತಿ!" ಎಂದಳು ಪಾರ್ವತಿ.

ಮರುದಿನ ಸಂಜೆ ಚಿಕ್ಕರಾಣಿಯವರಿಂದ ಸಂದೇಶ ಬಂತು. ಪಾರ್ವತಿಯ ಜೊತೆಗೆ ಐದುನೂರು ರೂಪಾಯಿಗಳನ್ನೂ ಅವರು ಕಳಿಸಿದ್ದರು.

"ಈಗ ಅವರ ಹತ್ತರವೂ ಹೆಚ್ಚು ಹಣ ಇಲ್ಲಂತ. ಈ ತಿಂಗಳ ಪೋಟಗಿ ಬಂದ ಮ್ಯಾಲ ಮತ್ತೆ ಕಳಿಸಿಕೊಡ್ತೀನಂತ ಹೇಳಿದಾರ."

"ಅವರು ಹಣ ಕೊಟ್ಟರೂ ಸರಿ. ಕೊಡದಿದ್ದರೂ ಸರಿ. ನಮಗೆ ಅವರ ಆಶೀರ್ವಾದ ಅಷ್ಟು ಸಿಕ್ಕರೆ ಸಾಕು. ಸವಾಯಿ ಮಲ್ಲಸರ್ಜ ದೊರೆಗಳದು ಏನು ಹೇಳಿದರು ರಾಣೀಸಾಹೇಬರು?"

"ಮಾಸ್ತಮರಡಿಗೆ ಹೋಗಿ ದೊರೆಗಳನ್ನು ಭೆಟ್ಟಿಯಾಗಿ, ಅವರು ಬಂದರೆ ಸಂಗಡ ಕರಕೊಂಡು ಹೋಗಬಹುದಂತ ಹೇಳಿದರು. ಅವರ ಜೀವಕ್ಕೆ ಅಪಾಯ ಆಗದಂಗ ನೋಡಿಕೊಂಡರಾಯ್ತು."

"ಅವರ ಕೂದಲೆಳೆಗೂ ಧಕ್ಕೆ ಆಗದಂತೆ ನೋಡಿಕೊಂತೀವಿ. ನಾವು ಇಷ್ಟೆಲ್ಲಾ ಗದ್ದಲಾ ಮಾಡೂದು ಯಾರ ಸಲುವಾಗಿ? ಕಿತ್ತೂರ ರಾಜ್ಯ ಮತ್ತೆ ಕಟ್ಟಿ, ಸವಾಯಿ ಮಲ್ಲಸರ್ಜರನ್ನ ಪಟ್ಟದಮ್ಯಾಲ ಕುಂಡ್ರುಸೂದಕ್ಕ ಅಲ್ಲಾ?"

"ಚಿಕ್ಕರಾಣಿಯವರು ಇನ್ನೂ ಒಂದ್ಮಾತು ಹೇಳ್ಯಾರ. ಅವರಿಂದಂತೂ ಹೆಚ್ಚಿಂದೇನೂ ಮಾಡೂದಕ್ಕ ಶಕ್ಯ ಇಲ್ಲ. ನೀವು ಶಿವನಗುತ್ತಿಗೆ ಹೋಗಿ ಚಿಕ್ಕ

ರಾಣಿಯವರ ತಂದೆ ಚಂದ್ರಸೇನರಾಜರನ್ನ ಭೆಟ್ಟಿಯಾದರೆ ಅವರು ತಮ್ಮಿಂದ ಶಕ್ಯ ಇರುವ ಸಹಾಯ ಮಾಡಬಹುದು" ಎಂದು ಹೇಳಿ, ವೀರಮ್ಮರಾಣಿಯವರು ಕಳುಹಿಸಿದ್ದ ಅವರ ಮುದ್ರೆಯ ಉಂಗುರವನ್ನೂ ಕೊಟ್ಟಳು ಪಾರ್ವತಿ

ಅದೇ ರಾತ್ರಿ ಅಲ್ಲಿಂದ ಹೊರಟು, ಮತ್ತೆ ಸಂಗೊಳ್ಳಿಗೆ ಹೋಗದೆ ನೇರವಾಗಿ ಕೊಳ್ಳಕ್ಕೆ ಬಂದೆವು. ಸರದಾರ್ ವೀರಪ್ಪನವರೂ ನಮ್ಮ ಹಾದಿಯನ್ನೇ ಕಾಯುತ್ತಿದ್ದ ಹಾಗಿತ್ತು.

ಇತ್ತೀಚೆಗೆ ನಡೆದ ಘಟನೆಗಳ ಬಗೆಗೆ ನಾವು ತಿಳಿಸಿ ಹೇಳುತ್ತಲೂ ವೀರಪ್ಪನವರೂ ಉತ್ಸಾಹದಿಂದ ಮೀಸೆ ಹುರಿಗೊಳಿಸುತ್ತ ಮಾತನಾಡಿದರು.

"ಈಗ ಸುರುವಾದಂತಾತು ಲಢಾಯಿ. ಮೊದಲು ದಂಡು ಕೂಡಿಸಬೇಕು ರಾಯಣ್ಣಾ. ಅದರದೇನು ಮಾಡೀದೀ?"

"ಬೆಳವಡಿ ಅಮಟೂರು ಖುದಾನಪುರದ ಕಡೆ ಗೆಳೇರು ತಯಾರಾಗಿದಾರ ಸರದಾರ ಸಾಹೇಬ್. ನಾವೊಂದು ದಿವಸ ಗೊತ್ತುಮಾಡೂದಷ್ಟs ಸಾಕು. ಎಲ್ಲಾ ಬಂದು ಸೇರಿಕೊಂತಾರ. ಚಿಕ್ಕದೊರೆಗಳನ್ನೂ ಈಗಲೇ ಕರಕೊಂಡು ಬರೂಣೋ ಹೆಂಗ?"

"ಇನ್ನೂ ಸ್ವಲ್ಪ ದಿವಸ ಅವರು ಊರಲ್ಲೇ ಇರಲಿ. ನಾವು ದೊಡ್ಡ ದಂಡು ಕಟ್ಟಿ, ಮದ್ದು ಗುಂಡು ತುಪಾಕಿ ಎಲ್ಲಾ ಕೂಡಿಸಿದ ಮ್ಯಾಲ ದೊರೆಗಳನ್ನು ಕರಕೊಂಡು ಬರೂಣಂತ. ಸಾವಿರಾರು ಮಂದಿಯ ದಂಡು ಅಂದರೆ ಅವರೆಲ್ಲರ ಖರ್ಚಿಗೆ ಲಕ್ಷಾಂತರ ರೂಪಾಯಿ ಬೇಕಾಗುತಾವ. ಅದಕ್ಕೆ ಹೆಂಗ ಮಾಡೂದು ?"

ಚಿಕ್ಕರಾಣಿಯವರು ಕಳಿಸಿಕೊಟ್ಟಿದ್ದ ಐದುನೂರು ರೂಪಾಯಿಗಳನ್ನು ಸರದಾರರ ವಶಕ್ಕೆ ಕೊಡುತ್ತ ನಾನೆಂದೆ :

"ರಾಣೀ ಸಾಹೇಬರು ಆಶೀರ್ವಾದ ಮಾಡಿ ಈಗ ಇಷ್ಟು ಕಳಿಸ್ಯಾರ. ಅವರ ಪುಣ್ಯದ ಬಲದ ಮ್ಯಾಲ ನಾವು ಮುಂದಿನ ಕೆಲಸಾ ಮಾಡಬೇಕು."

"ಜೀವಕ್ಕ ಜೀವ ಕೊಡುವ ಬಂಟರು ಬೇಕಪ್ಪಾ ರಾಯಣ್ಣಾ ಈ ಕೆಲಸಕ್ಕ. ಇಲ್ಲೇ ಸಮೀಪದಾಗ ಬಾಳಗುಂದದ ಕೊಳ್ಳದಾಗ ಹಬಸೀ ಗುಬ್ಬಾನ ಅಂತ ಒಬ್ಬ ದೊಡ್ಡ ಶೂರ ಅದಾನ. ಅವನನ್ನೂ ನಮ್ಮ ಗುಂಪಿಗೆ ಸೇರಿಸಿಕೋಬೇಕು."

ಹಬಸೀ ಗುಬ್ಬಾನನ ಹೆಸರನ್ನು ನಾನೂ ಕೇಳಿದ್ದೆನಾದರೂ ಇದುವರೆಗೆ ಆತನನ್ನು ನೋಡಿರಲಿಲ್ಲ. ಸುತ್ತಲಿನ ಸೀಮೆಯಲ್ಲೆಲ್ಲ ಆತ ದೊಡ್ಡ ದರೋಡೆಗಾರನೆಂದು ಪ್ರಸಿದ್ಧಿ ಪಡೆದಿದ್ದ. ಅವನ ಹೆಸರು ಕೇಳಿದರೇನೇ ಸಾಹುಕಾರ ಜನರು ಥರಥರ ನಡುಗುತ್ತಿದ್ದರು. ಬಡವರಿಗೆ ಮಾತ್ರ ಆತ ಸ್ವಲ್ಪವೂ ತೊಂದರೆ ಕೊಡುತ್ತಿರಲಿಲ್ಲ. ಅದಕ್ಕೆ ಬದಲು, ಕಷ್ಟದಲ್ಲಿದ್ದ ಬಡ ಜನರಿಗೆ ಅಷ್ಟಿಷ್ಟು ಹಣ ಕೊಟ್ಟು ಸಹಾಯ ಮಾಡುತ್ತಿದ್ದ. ಎಂತಲೇ ಅವರೆಲ್ಲರೂ ಅವನನ್ನು ಹಾಡಿ ಹೊಗಳುತ್ತಿದ್ದರು. ಆನೆಯಂತೆ ಬಲಶಾಲಿಯಾಗಿದ್ದ ಗುಬ್ಬಾನನನ್ನು ಜನರು 'ಗಜವೀರ' ಎಂದು ಮೆಚ್ಚಿಗೆಯಿಂದ ಕರೆಯುತ್ತಿದ್ದರು.

ಮಾರನೆಯ ದಿನ ಬಾಳಗುಂದ ಕೊಳ್ಳಕ್ಕೆ ಹೋಗಿ ಗುಬ್ಬಾನನನ್ನು ಭೆಟ್ಟಿಯಾಗಬೇಕೆಂದು ಗೊತ್ತಾಯಿತು. ಶಹಾಪುರಕ್ಕೆ ಹೋಗಿ ತಮ್ಮ ಮನೆಯವರನ್ನು ಕಂಡು, ಒಂದೆರಡು ದಿನ ಇದ್ದು ಬಂದ ವಿಚಾರ ತಿಳಿಸಿ ವೀರಪ್ಪನವರೆಂದರು.

"ನನ್ನ ವೇಷ ಬದಲಾಯಿಸಿಕೊಂಡು ನಾನು ಶಹಾಪುರದಲ್ಲೇ ಬೇರೊಂದು ಮನೆಯಲ್ಲಿ ಇದ್ದರೂ ನಡೆದೀತು. ಸರಕಾರ ಮಾತ್ರ ನನ್ನನ್ನಿನ್ನೂ ಮರೆತಂತೆ ಕಾಣೂದಿಲ್ಲ. ಈ ತೊಂದರೆಯಿಂದ ತಪ್ಪಿಸಿಕೋಬೇಕಾದರೆ ಈ ಸೀಮೆಯನ್ನೇ ಬಿಟ್ಟು ಮನೆಯ ಮಂದಿಯೆಲ್ಲಾ ಸೇರಿಕೊಂಡು ಮೊಗಲಾಯಿ ರಾಜ್ಯಕ್ಕೆ ಹೋಗಿ ಇರಬೇಕಾಗುತ್ತೈತಿ. ನನಗೆ ಮಾತ್ರ ಅದಕ್ಕೆ ಮನಸಿಲ್ಲ. ಶಹಾಪುರದಾಗ ಸದಾಶಿವಪ್ಪನ ವ್ಯಾಪಾರನೂ ಚಲೋ ನಡೆದದ. ಅವರು ಆರಾಮ ಅದಾರ. ಪರದೇಶಿಗಳನ್ನೋಡಿಸೂದಕ್ಕೆ ಇನ್ನೊಮ್ಮೆ ಪ್ರಯತ್ನ ಮಾಡಿ ನೋಡೋದು, ಮುಂದಿಂದು ಮುಂದ ಅಂತ ವಿಚಾರಮಾಡಿ ಮತ್ತೆ ಇಲ್ಲಿಗೆ ಬಂದಿನಿ."

ಮರುದಿವಸ ಬೆಳಗ್ಗೆ ಊಟ ಮುಗಿಸಿಕೊಂಡು ಚೆನ್ನಬಸಪ್ಪನೂ ನಾನೂ ಬಾಳಗುಂದ ಕೊಳ್ಳಕ್ಕೆ ಬಂದೆವು. ಸುತ್ತಲೂ ದಟ್ಟವಾದ ಅರಣ್ಯ. ಆಕಾಶದ ಎತ್ತರಕ್ಕೆ ಬೆಳೆದು ನಿಂತ ಗಿಡಮರಗಳು. ನಟ್ಟನಡುವೆ ಪಾತಾಳದಂಥ ಕೊಳ್ಳ. ನಡುಹಗಲಿನಲ್ಲಿಯೂ ಅಲ್ಲಿ ಸೂರ್ಯಕಿರಣಗಳಿಗೆ ಪ್ರವೇಶವಿರಲಿಲ್ಲ. ಒಂದು ತರದ ಮಬ್ಬುಗತ್ತಲು ಸುತ್ತಲೂ ಕವಿದಿತ್ತು. ಹಬಸಿಗಳು ಯಾವಾಗಲೂ ಇಂಥ ಸ್ಥಳದಲ್ಲಿಯೇ ವಾಸ ಮಾಡುವುದುಂಟು. ಅವರ ದೇಶದಲ್ಲಿ ನಮ್ಮ ದೇಶಕ್ಕಿಂತ

ನೂರು ಪಾಲು ದಟ್ಟವಾದ ಅರಣ್ಯಗಳಿವೆಯಂತೆ. ಅಂಥಾ ಅಟ್ಟಟ್ಟ ಅರಣ ಪಲ್ಲಿಯೇ ಗುಡಿಸಲು ಕಟ್ಟಿಕೊಂಡು ವಾಸ ಮಾಡುವುದು ಇವರ ಪದ್ಧತಿಯಂತೆ. ಹೆಮ್ಮರಗಳ ಮೇಲೆ ಮಂಚಿಕೆ ಕಟ್ಟಿ ಅಲ್ಲಿಯೇ ಇರುವುದೂ ಇದೆ.

ಅಂಥ ಘೋರಾರಣ್ಯದಲ್ಲಿ ಗಜವೀರನನ್ನು ಗೊತ್ತು ಹಚ್ಚುವುದೇನೂ ಸುಲಭವಾಗಿರಲಿಲ್ಲ. ಎರಡು ಮೂರು ತಾಸು ಅಲ್ಲಿ ಇಲ್ಲಿ ಅಲೆದ ಮೇಲೆ ಬಿದಿರ ಮಂಚಿಕೆಯೊಂದರ ಮೇಲೆ ಮಲಗಿಕೊಂಡಿದ್ದ ಹಬಸಿಯೊಬ್ಬನನ್ನು ಕಂಡೆವು. ಆತ ಅದೇ ತಾನೆ ಉಂಡು ಗಾಢನಿದ್ರೆಯಲ್ಲಿ ತಲ್ಲೀನನಾಗಿದ್ದ ಹಾಗಿತ್ತು. ನಾವು ನಾಲ್ಕೈದು ಬಾರಿ ಕೂಗು ಹಾಕಿದರೂ ಆತನಿಗೇನೂ ಎಚ್ಚರವಾಗಲಿಲ್ಲ. ಯಾರ ಭಯವೂ ಇಲ್ಲದೆ ಒಂಟಿಯಾಗಿ ಮಲಗಿ ನಿದ್ರಿಸುತ್ತಿದ್ದ ಆ ಪ್ರಚಂಡ ವ್ಯಕ್ತಿಯನ್ನು ಕಂಡೇ ಆತನೇ ಗಜವೀರನಾಗಿರಬೇಕೆಂದು ನಮಗೆ ನಂಬಿಕೆ ಯಾಯಿತು. ಹುಲಿ ಚಿರತೆಗಳಂಥ ಕ್ರೂರ ಪಶುಗಳಿಂದ ತುಂಬಿದ ಆ ಅಡವಿಯಲ್ಲಿ ಅವನಲ್ಲದೆ ಬೇರೆ ಯಾರೂ ಆ ರೀತಿ ನಿಶ್ಚಿಂತೆಯಿಂದ ನಿದ್ರಿಸುವುದು ಶಕ್ಯವಿರಲಿಲ್ಲ.

ಗಜವೀರನೆಂಬ ಬಿರುದಿಗೆ ಸರಿಯಾಗುವಂತೆ ಆತನ ಶರೀರವೂ ಆನೆಯನ್ನೇ ಹೋಲುತ್ತಿತ್ತು. ತಲೆಯ ಮೇಲೆ ಬಿರುಸಾದ ಉಂಗುರಗೂದಲು. ಮೈಯಲ್ಲಿ ಭಾರೀತೂಕದ ಚಿಲಕತ್ತು. ನಡುವಿನಲ್ಲಿ ಕಠಾರಿ. ಅಂಥ ಜಡವಾದ ಚಿಲಕತ್ತು ಧರಿಸಿಕೊಂಡೇ ಸುಖವಾಗಿ ನಿದ್ರಿಸುತ್ತಿದ್ದ ಗಜವೀರನನ್ನು ಕಂಡು ನನಗೆ ಅಚ್ಚರಿಯೂ ಆಯಿತು, ಮೆಚ್ಚುಗೆಯೂ ಆಯಿತು.

ನಾನು ಡೊಗ್ಗಾಲು ಹಾಕಿ ಜೋರಾಗಿ ಚೀರಲಟ್ಟಿ ಹೊಡೆದಾಗ ಗಜವೀರನಿಗೆ ಎಚ್ಚರವಾಯಿತು. ಅಂಥ ಭಾರವಾದ ಶರೀರವಿದ್ದರೂ ಆತ ಥಟ್ಟನೆದ್ದು "ಅಲೀ!" ಎಂದು ಕೂಗುತ್ತ ಮಂಚಿಕೆಯಿಂದ ಜಿಗಿದು ಬಂದ, ಹುಲಿಯ ಚಪಲತೆಯಿಂದ.

ನಾವಿಬ್ಬರೂ ಕುಳಿತಂತೆಯೇ ಕುರನಾಸು ಮಾಡಿ ಮುಜುರೆ ಸಲಾಮು ಹೊಡೆದೆವು. ಅವನನ್ನು ನಾವು ಈ ಮೊದಲು ನೋಡಿದವರಲ್ಲ. ನಮ್ಮ ಪರಿಚಯ ಆತನಿಗಿರಲಿಲ್ಲ. ಆದರೂ, ನಮ್ಮ ಮುಖದ ಮೇಲೆ ಅವನಿಗೇನು ಕಾಣಿಸಿತೋ ಏನೋ. ನಾವು ಸ್ನೇಹಭಾವದಿಂದಲೇ ಅಲ್ಲಿಗೆ ಬಂದಿದ್ದುದನ್ನು ಅವನು ಹೇಗೆ ತಿಳಿದುಕೊಂಡನೋ ಏನೊ, ನಮ್ಮ

ಮುಜುರೆ ಸ್ವೀಕರಿಸಿ, ಪ್ರತಿಯಾಗಿ ತಾನೂ ಸಲಾಮು ಮಾಡಿ ಆತನೆಂದ:

"ಯಾವೂರವರು ? ಇಷ್ಟು ದೂರ ಬಂದಿರಿ ?"

ನಾವು ನಮ್ಮ ಗುರುತು ಪರಿಚಯ ತಿಳಿಸಿದೆವು. ಕಿತ್ತೂರೇನು ಅವನಿಗೆ ಅಪರಿಚಿತವಾಗಿರಲಿಲ್ಲ. ಸಂಗೊಳ್ಳಿ-ಹೊಂಗಲಗಳನ್ನೂ ಆತ ನೋಡಿದ್ದನಂತೆ. ಅಷ್ಟು ದೂರದಿಂದ ನಾವು ಅವನನ್ನು ಭೆಟ್ಟಿಯಾಗಲು ಬಂದದ್ದೇ ಅವನಿಗೊಂದು ಅಭಿಮಾನದ ವಿಷಯವಾದಂತೆ ಕಾಣಿಸಿತು. ನಾವು ಬಂದುದರ ಉದ್ದೇಶ ತಿಳಿಸುತ್ತಲೂ ನಮ್ಮಿಬ್ಬರನ್ನೂ ಬಂಧುಭಾವದಿಂದ ಅಪ್ಪಿಕೊಂಡು ಆತನೆಂದ :

"ನಾನೇನು ಇವತ್ತೇ ಬರಲಿಕ್ಕೆ ತಯಾರಿದೀನಿ. ಆದರೆ, ಲಢಾಯಿ ಅಂದ ಮ್ಯಾಲ ಸಾವಿರಾರು ಮಂದಿಯ ಸೈನ್ಯ ಬೇಕಾಗುತ್ತದೆ. ಈಗ ನಿಮ್ಮ ಹತ್ತರ ಎಷ್ಟು ಮಂವಿ ಇದಾರ ?"

"ನೂರಿನ್ನೂರು ಮಂದಿ ಆಗಬಹುದು."

"ಕೆಂಪು ಮಾರಿಯವರ ಸಂಗಡ ಲಢಾಯಿ ಅಂದರೆ ಸಣ್ಣ ಮಾತಲ್ಲ ರಾಯಣ್ಣಾ. ಅವರ ವಿರುದ್ಧ ಏನಾದರೂ ಮಾಡಬೇಕಾದರೆ ಮೊದಲು ಮೂರು ಸಾವಿರ ಜನರಾದರೂ ಬೇಕಾಗ್ತಾರೆ" ಎಂದ ಗಜವೀರ.

"ಹೌದಪಾ ಗಜವೀರಾ, ಅದಕ್ಕಾಗೇ ನಾವು ನಿನ್ನ ಹತ್ತರ ಬಂದದ್ದು."

"ಈಗ ನನ್ನ ಗುಂಪಿನಾಗೂ ಬಹಳ ಮಂದಿಯಿಲ್ಲ. ಇಪ್ಪತ್ತು ಮಂದಿ ಅದೀವಿ : ಇನ್ನುಳಿದವರು ಅಲ್ಲಿ ಇಲ್ಲಿ ಹೋಗ್ಯಾರ. ನೀನು ಈಗಿಂದೀಗ ಮೊಗಲಾಯಿ ರಾಜ್ಯಕ್ಕೆ ಹೋಗಿ ಅಲ್ಲಿಂದ ದಂಡು ಕರಕೊಂಡ ಬಂದರ ಚಲೋ" ಎಂದ ಗಜವೀರ.

ಮತ್ತೆ ಆತ ಸಿಳ್ಳು ಹಾಕಿ ತನ್ನ ಸಂಗಡಿಗರನ್ನು ಬರಮಾಡಿಕೊಂಡು ಹಣ್ಣುಹಂಪಲು ತರಿಸಿ ನಮಗೆ ಪ್ರೀತಿಯಿಂದ ತಿನ್ನಿಸಿದ. ಮೊಗಲಾಯಿ ಸೀಮೆಯಿಂದ ದಂಡು ತೆಗೆದುಕೊಂಡು ಬರುತ್ತಲೂ ಅವನಿಗೆ ಸುದ್ದಿ ತಿಳಿಸುವದಾಗಿ ಹೇಳಿ ಅವನನ್ನು ಬೀಳ್ಕೊಂಡು ಕೊಳ್ಳದಿಂದ ಹೊರಟು ಬಂದೆವು.

ಮರುದಿವಸವೇ ನಾನು ಮೊಗಲಾಯಿ ಸೀಮೆಯತ್ತ ಹೊರಟೆ. ವೀರಮ್ಮ ರಾಣಿಯವರ ತಂದೆಯ ರಾಜಧಾನಿಯಾದ ಶಿವಗುತ್ತಿಗೆ ಮುಟ್ಟಲು ಒಂದೂ

ವಾರ ಹಿಡಿಯಿತು. ಆದರೆ, ಸುತ್ತಲೂ ಭದ್ರವಾದ ಕೋಟೆಯಿದ್ದ ಆ ನಗರದಲ್ಲಿ ಪ್ರವೇಶ ಸಿಕ್ಕುವುದೇ ಕಠಿಣವಾಯಿತು. ಅಗಸೆಯ ಬಾಗಿಲುಗಳಲ್ಲೆಲ್ಲ ಬಿಚ್ಚುಗತ್ತಿಯ ಕಾವಲುಗಾರರು ಹಗಲಿರುಳೂ ಪಹರೆ ಮಾಡುತ್ತಿದ್ದರು. ಆ ರಾಜ್ಯದಲ್ಲಿ ಕಳ್ಳಕಾಕರ–ಪುಂಡರ ಹಾವಳಿ ವಿಪರೀತವಾಗಿದ್ದುದರಿಂದ ಗುರುತು ಪರಿಚಯವಿಲ್ಲದ ಅಪರಿಚಿತರನ್ನು ಊರಿನೊಳಗೆ ಸೇರಿಸುತ್ತಿರಲಿಲ್ಲ. ವೀರಮ್ಮ ರಾಣಿಯವರ ಅಪ್ಪಣೆಯ ಪ್ರಕಾರ ನಾನು ಅಲ್ಲಿಗೆ ಬಂದ ವಿಚಾರ ಹೇಳಿಕಳಿಸಿದ ಮೇಲೆ, ರಾಜರಿಂದ ಒಪ್ಪಿಗೆ ದೊರೆತ ತರುವಾಯವೇ ನನಗೆ ಪ್ರವೇಶ ಸಿಕ್ಕಿತು.

ಪ್ರೇಮದ ಪುತ್ರಿಯ ಕಡೆಯಿಂದ ಬಂದವನೆಂಬ ಅಭಿಮಾನದಿಂದ ಚಂದ್ರಸೇನ ರಾಜರು ನನ್ನನ್ನು ಕೂಡಲೇ ಅರಮನೆಗೆ ಕರೆಯಿಸಿಕೊಂಡರು. ಅತಿಥಿಗೃಹದಲ್ಲಿ ಜಳಕ–ಊಟ ತೀರಿಸಿಕೊಂಡು ನಾನು ರಾಜರನ್ನು ಭೆಟ್ಟಿಯಾಗಿ, ಕುಳಿತು ಕುರನಾಸು ಮಾಡಿ ಮುಜುರೆ ಸಲಾಮು ಸಲ್ಲಿಸಿದೆ. ಅರವತ್ತರ ಅಂಚನ್ನು ದಾಟಿದ್ದ ಬಿಳಿಯ ಕೂದಲಿನ ರಾಜರು ಪ್ರೀತಿಯಿಂದ ನನ್ನ ಮೈದಡವಿ ಸಮೀಪದಲ್ಲಿದ್ದ ಆಸನದಲ್ಲಿ ಕುಳಿತುಕೊಳ್ಳಲು ತಿಳಿಸಿದರು.

"ವೀರಮ್ಮಾಜಿ ಆರೋಗ್ಯವೇ ರಾಯನಾಯಕಾ ?"

"ಚಲೋ ಆದಾರ ಪ್ರಭೂ. ಆದರೆ, ಹೇಳ ಕೇಳಿ ಬಂದೀವಾಸ, ಯಾವಾಗಲೂ ಅದೇ ಚಿಂತೆ ಹಚ್ಚಿಕೊಂಡು ಸೊರಗಿ ಹೋಗ್ಯಾರ."

ವೃದ್ಧ ದೊರೆಯ ಮುಖದ ಮೇಲೆ ದುಃಖದ ಮೋಡ ಕವಿಯಿತು. ಮುಖವನ್ನು ಅತ್ತ ಹೊರಳಿಸಿ ಅವರೆಂದರು :

"ಪ್ರೀತಿಯ ಮಗಳ ಸ್ಥಿತಿ ಹೀಗಾಯಿತಲ್ಲಾ ಅಂತ ಕಳವಳಪಡುವದೇ ಆಗಿದೆ. ಆಕೆಗೇನೂ ಸಹಾಯ ಮಾಡುವ ಸ್ಥಿತಿಯಲ್ಲಿ ನಾವಿಲ್ಲ. ದೇವರ ಇಚ್ಛೆಯಿದ್ದಂತೆ ಆಗುತ್ತದೆ ಅಂದುಕೊಂಡು ಸುಮ್ಮನಿರದೆ ಬೇರೆ ಉಪಾಯವಿಲ್ಲ. ಇಲ್ಲಿ ನಮ್ಮ ಪರಿಸ್ಥಿತಿಯೂ ಸರಿಯಾಗಿಲ್ಲ. ಯಾವಾಗಲೂ ಏನಾದರೊಂದು ತೊಂದರೆ ಇದ್ದೇ ಇದೆ. ಏನು ಮಾಡೋಣ ?"

ನಾನು ಬಹಳ ಒತ್ತಾಯಮಾಡಿ ವಿಚಾರಿಸಿದಾಗ ರಾಜರ ತೊಂದರೆಗಳೆಲ್ಲ ತಿಳಿದು ಬಂದುವು. ಮೊಗಲಾಯಿ ನವಾಬನ ರಾಜ್ಯದಲ್ಲಿಯೇ ಶಿವಗುತ್ತಿಯದೂ ಒಂದು ಚಿಕ್ಕ ರಾಜ್ಯ. ನವಾಬನ ಅಪ್ಪಣೆಯಿಲ್ಲದೆ ಇವರು ಯಾರ ವಿರುದ್ಧವೂ ಯುದ್ಧ ಹೂಡುವಂತಿರಲಿಲ್ಲ. ಸ್ವತಃ ಆ ನವಾಬನೇ ಇಂಗ್ರೇಜರ

ಆಶ್ರಿತನಾಗಿದ್ದ. ಅಂಥ ಇಂಗ್ರೇಜರ ವಿರುದ್ಧವಾಗಿ ಚಂದ್ರಸೇನ ರಾಜರು ಒಂದು ಕಿರುಬೆರಳನ್ನೂ ಎತ್ತುವುದು ಶಕ್ಯವಿರಲಿಲ್ಲ.

"ಕಿತ್ತೂರು ರಾಜ್ಯದ ಮೇಲೆ ಇಂಗ್ರೇಜರು ಮಾಡಿದ ಅನ್ಯಾಯ ನೋಡಿ ಕೊಚ್ಚು ಉಕ್ಕಿಬಂದರೂ ನಾವು ಆಗ ಏನೂ ಮಾಡದೆ ಕೈ ಕೈ ಹಿಸುಕಿಕೊಳ್ಳುತ್ತ ಸುಮ್ಮನೆ ಕೊಡ್ರಬೇಕಾಯ್ತು. ಮಗಳನ್ನು ಕರೆದುಕೊಂಡು ಬಂದು ಇಲ್ಲಿಯೇ ಇಟ್ಟುಕೊಳ್ತೀವಂತ ಹೇಳಿದೆವು. ಅದಕ್ಕೂ ಇಂಗ್ರೇಜರು ಒಪ್ಪಲಿಲ್ಲ. ಆಕೆ ಇಲ್ಲಿದ್ದರೆ ನಮ್ಮ ಸಹಾಯ ಪಡೆದು ಮತ್ತೆ ಲಢಾಯಿ ಹೂಡಿ ಕಿತ್ತೂರನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಬಹುದೆಂಬ ಸಂಶಯ ಇರಬೇಕು ಇಂಗ್ರೇಜರಿಗೆ........"

"ರಾಣೀಸಾಹೇಬರನ್ನು ಆಮೇಲೆ ತಾವು ನೋಡಿಯೇ ಇಲ್ಲವೇ ಪ್ರಭು?"

"ಹೊಂಗಲದಲ್ಲಿ ಅವರನ್ನು ತಂದಿಟ್ಟ ಮೇಲೆ ಒಮ್ಮೆ ಹೋಗಿ ಬಂದಿದ್ದೆವು. ಅನಂತರ ಮತ್ತೆ ಹೋಗಲಿಕ್ಕಾಗಿಲ್ಲ. ಎರಡು ನೂರು ಹರದಾರಿ ದೂರದ ಸ್ಥಳ, ಈಚೆಗೆ ನಮಗೂ ವಯಸ್ಸಾಗಿ ಮೊದಲಿನಂತೆ ಮೈಯಲ್ಲಿ ಶಕ್ತಿಯುಳಿದಿಲ್ಲ. ಅಲ್ಲದೆ, ಈ ಪ್ರವಾಸಕ್ಕಾಗಿ ನವಾಬನ ಒಪ್ಪಿಗೆ ದೊರಕಿಸಿಕೊಳ್ಳುವುದೂ ಕಠಿಣವೇ."

"ಪ್ರವಾಸಕ್ಕೂ ಒಪ್ಪಿಗೆ ಬೇಕಾಗ್ತದೆಯೇ ಪ್ರಭು ?"

"ಹೌದಪ್ಪ. ಹಾಗಿದೆ ನಮ್ಮ ಪರಿಸ್ಥಿತಿ" ಎಂದು ಹೇಳುತ್ತ ಚಂದ್ರಸೇನ ರಾಜರು ನಿಟ್ಟುಸಿರಿಟ್ಟರು.

ಕನಕೂರ ಒಕ್ಕಳ ಭರಮನೆಂಬ ಪುಂಡನು ನೂರಿನ್ನೂರು ಮಂದಿಯ ಗುಂಪು ಕಟ್ಟಿಕೊಂಡು ಶಿವಗುತ್ತಿ ರಾಜ್ಯದಲ್ಲಿ ದೊಡ್ಡ ಹಾವಳಿ ನಡೆಸುತ್ತಿದ್ದನೆಂಬ ವಿಷಯ ನನಗೆ ಮರುದಿನವೇ ಗೊತ್ತಾಯಿತು. ರಾಜಧಾನಿಯ ಮೇಲೂ ಆತ ಅನೇಕ ಸಲ ಏರಿಬಂದಿದ್ದನಂತೆ. ರಾಜರು ಎಷ್ಟು ಪ್ರಯತ್ನಿಸಿದರೂ ಆ ಪುಂಡನನ್ನು ಸೋಲಿಸಿ ಸದೆಬಡಿಯಲು ಶಕ್ಯವಾಗಿರಲಿಲ್ಲವಂತೆ. ಆ ಚಿಂತೆಯಿಂದ ರಾಜರು ಹೈರಾಣಾಗಿದ್ದುದು ತಿಳಿಯುತ್ತಲೂ, ಹೇಗಾದರೂ ಸಾಹಸ ಮಾಡಿ ಆ ಪುಂಡನನ್ನು ತೀರಿಸಿಬಿಡಬೇಕೆಂಬ ಆಲೋಚನೆ ನನ್ನ ತಲೆಯಲ್ಲಿ ಪ್ರವೇಶಿಸಿತು. ಸೇನಾಧಿಕಾರಿಗಳೊಡನೆ ಮಾತನಾಡಿ, ಭರಮನ ಬಗೆಗೆ ಎಲ್ಲ ವಿವರಗಳನ್ನೂ

ತಿಳದುಕೊಂಡ ತರುವಾಯ ಒಂದು ಸಂಜೆ ದೊರೆಗಳನ್ನು ಕಂಡು ಈ ವಿಚಾರ ಪ್ರಸ್ತಾಪಿಸಿದೆ.

ಆ ಪುಂಡನನ್ನು ಸದೆಬಡಿಯಲು ನಾನು ಮುಂದಾದುದನ್ನು ಕಂಡು ರಾಜರಿಗೆ ಬಹಳ ಸಂತೋಷವಾಯಿತು. ಆದರೂ ಅವರು ನನಗೆ ಕೂಡಲೇ ಅನುಮತಿ ನೀಡಲಿಲ್ಲ.

"ನಮ್ಮ ರಾಜ್ಯಕ್ಕೆ ಅತಿಥಿಯಾಗಿ ಬಂದಿರುವ ನಿನ್ನನ್ನು ನಾವು ಗಂಡಾಂತರಕ್ಕೀಡು ಮಾಡುವದು ಧರ್ಮವಲ್ಲ ರಾಯಣ್ಣಾ. ನಿನಗೇನಾದರೂ ಅಪಾಯವಾದದ್ದು ಗೊತ್ತಾದರೆ ನಮ್ಮ ಮಗಳಿಗೆಷ್ಟು ದುಃಖವಾಗಲಿಕ್ಕಿಲ್ಲ ?"

"ತಮ್ಮ ಆಶೀರ್ವಾದವಿದ್ದರೆ ನನಗೇನೂ ಆಗುವದಿಲ್ಲ ಪ್ರಭು. ಅಪ್ಪಣೆ ಕೊಡಿರಿ. ಅವನನ್ನು ಮುಗಿಸಿ ಬರುತ್ತೇನೆ," ಎಂದು ನಾನು ಉತ್ಸಾಹದಿಂದ ಹೇಳಿದೆ.

ನಾನು ಮತ್ತೆ ಮತ್ತೆ ಆಗ್ರಹಪಡಿಸುತ್ತಲೂ ದೊರೆಗಳು ಒಪ್ಪಿಕೊಂಡರು. ಆರಿಸಿದ ನೂರು ಜನ ದಂಡಾಳುಗಳನ್ನು ಕರೆದುಕೊಂಡು ಒಂದು ಸಾಯಂಕಾಲ ರಾಜಧಾನಿಯಿಂದ ಹೊರಟು, ಜೊಳಜಗುಡ್ಡದಲ್ಲಿ ಬೀಡು ಬಿಟ್ಟಿದ್ದ ಒಕ್ಕಳ ಭರಮನ ಮೇಲೆ ದಾಳಿ ಮಾಡಲು ಹೊರಟೆ.

# ೧೫

# ರಾಯನಾಯಕ

ಶಿವಗುತ್ತಿಯಿಂದ ಚೊಳಚಗುಡ್ಡಕ್ಕೆ ಅಷ್ಟೇನೂ ದೂರವಿರಲಿಲ್ಲ. ಮೂರು ಹರದಾರಿಯ ಅಂತರವಿರಬಹುದೋ ಏನೋ. ನಮ್ಮ ದಂಡು ಚೊಳಚಗುಡ್ಡದ ಬಳಿ ಬಂದಾಗ ರಾತ್ರಿಯಾಗಿತ್ತು. ಗುಡ್ಡದೋರೆಯಲ್ಲಿದ್ದ ಕಲ್ಲುಬಾವಿಯ ಹತ್ತಿರ ದೀವಟಿಗೆಗಳು ಉರಿಯುತ್ತಿದ್ದುವು. ಅಲ್ಲಿ ಅರ್ಧವರ್ತುಲಾಕಾರವಾಗಿ ಕುಳಿತು ಕೊಂಡು ಭರಮನೂ ಅವನ ಗುಂಪಿನ ಜನರೂ ರಾತ್ರಿಯೂಟದಲ್ಲಿ ತೊಡಗಿದ್ದರು. ಬಂಡೆಗಲ್ಲಿನ ಮೇಲೆ ಕುಳಿತು, ಬಂದೂಕನ್ನು ಹತ್ತಿರ ಇಟ್ಟುಕೊಂಡು, ದೊಡ್ಡ ದೊಡ್ಡ ತುತ್ತುಗಳನ್ನು ನುಂಗುತ್ತಲಿದ್ದ ದಪ್ಪನೆಯ ಆಸಾಮಿಯೇ ಭರಮನೆಂದು ತಿಳಿಯಿತು.

ನಮ್ಮನ್ನು ನೋಡಿಯೂ ನೋಡದಂತೆ ಅವರು ಶಾಂತವಾಗಿ ಊಟ ಮುಂದುವರಿಸಿದರು. ಮೆಲ್ಲಮೆಲ್ಲಗೆ ನಮ್ಮ ಸೈನಿಕರು ಅವರನ್ನು ಸುತ್ತುವರಿದಾಗಲೂ ಅವರಾರೂ ಮಿಸುಕಾಡಲಿಲ್ಲ. ಅವರ ಧೈರ್ಯವನ್ನು ನೋಡಿ ನಾನೂ ಮೆಚ್ಚಿಕೊಳ್ಳಬೇಕಾಯಿತು. ಆದರೂ ಆ ಮೆಚ್ಚುಗೆಯನ್ನು ಹೊರಗೆ ತೋರಿಸದೆ, ಭರಮನನ್ನು ಸಮೀಪಿಸಿ ಮಾತನಾಡಿದೆ:

"ಊಟಾ ಮಾಡಿ ತಯಾರಾಗು ಭರಮಾ. ನಿನ್ನ ಅಂತ್ಯಕಾಲ ಸಮೀಪ ಬಂದೈತಿ."

ದೀವಟಿಗೆಗಳ ಬೆಳಕಿನಲ್ಲಿ ಸಮಾಧಾನದಿಂದ ಊಟ ಮಾಡುತ್ತಿದ್ದ ಭರಮ ಒಮ್ಮೆ ನನ್ನತ್ತ ದೃಷ್ಟಿ ಹೊರಳಿಸಿ ತಿರಸ್ಕಾರದಿಂದ ನಕ್ಕು ನುಡಿದ:

"ಈ ಶೂರ ಭರಮನ ಅಂತ್ಯಕಾಲ ಬಂತಂತ ಹೇಳಲಿಕ್ಕೆ ಸ್ವತಃ ಯಮನೇ ಬರಬೇಕಾಗುತ್ತದೆ. ನಿಮ್ಮಂಥವರು ನನ್ನದೊಂದು ಕೂದಲು ಕೊಂಕಿಸಲೂ ಶಕ್ಯವಿಲ್ಲ."

ಅಷ್ಟು ಹೇಳಿ, ಆತ ಮತ್ತೆ ಅನ್ನದ ಮುದ್ದೆಗಳನ್ನು ಬಾಯಿಗಿಳಿಸತೊಡಗಿದ.

"ನಾ ಯಾರು ಅನ್ನೋದು ನಿನಗಿನ್ನೂ ಗೊತ್ತಾಗಿಲ್ಲ. ಅದಕ್ಕೇ ಇಂಥಾ ಸೊಕ್ಕಿನ ಮಾತು ಆಡುತ್ತೀಯ. ಇಂಗ್ರೇಜರನ್ನೂ ಹಣ್ಣು ಹಣ್ಣು

ಮಾಡಿದ ಕಿತ್ತೂರ ನಾಡಿನ ಬಂಟ ರಾಯನಾಯಕನಿದೀನಿ ನಾ! ಗೊತ್ತಾತೇ?" ಎಂದು ಹೇಳಿದೆ.

ಊಟ ಮುಗಿಸಿ, ನೀರು ಕುಡಿದು, ಕೈ ತೊಳೆದುಕೊಂಡು ಆತ ಮತ್ತೊಮ್ಮೆ ನನ್ನನ್ನು ತೀಕ್ಷ್ಣವಾಗಿ ದಿಟ್ಟಿಸಿ ನೋಡಿದ.

"ನೀ ಕಿತ್ತೂರ ನಾಡವನಾದರೆ ನಾ ಮೊಗಲಾಯಿ ನಾಡವನಿದೀನಿ. ನಾ ನೀ ಅನ್ನೊ ಬಂಟರೂ ಮಣ್ಣು ಮುಕ್ಕಿದಾರ ನನ್ನ ಮುಂದೆ!" ಎಂದು ಆತ ಶಾಂತ ಸ್ವರದಲ್ಲಿಯೇ ಹೇಳಿದ.

"ನಿನ್ನ ಬಂಟತನಾ ಎಷ್ಟದನ್ನೋದು ನೋಡೋಣಂತಲೇ ನಾ ಬಂದೀನಿ," ಎಂದು ನಾನು ಸಮಾಧಾನದಿಂದಲೇ ಹೇಳಿದೆ.

ಭರಮು ಥಟ್ಟನೆದ್ದು ನನ್ನ ಕೈಹಿಡಿದು ಅದುಮಿದ, ಅವನ ತುಟಿಗಳ ಮೇಲೆ ಅಣಕದ ನಗೆ ತೇಲಿಹೋಯಿತು.

"ಈಗಲೇ ಪರೀಕ್ಷೆ ಆಗಬೇಕಂತೀಯೋ? ಅಥವಾ ಊಟ ಗೀಟ ಮುಗಿಸ್ತೀಯೋ? ಅತಿಥಿಯಾಗಿ ಬಂದವನು ವೈರಿಯಾದರೂ ಅತಿಥಿಯೇ. ನಿಮಗೆಲ್ಲರಿಗೂ ಸಾಕಾಗುವಷ್ಟು ಅನ್ನವೂ ಇದೆ!"

"ನೀನು ದೊಡ್ಡ ಮನಸ್ಸಿನವ ಭರಮಣ್ಣಾ. ಆದರೆ, ನಾವೂ ಊಟ ಮುಗಿಸಿಕೊಂಡೇ ಬಂದೀವಿ; ಈಗ ನಮಗೇನು ಹಸಿವಿಲ್ಲ."

"ನಿನ್ನ ದಂಡು ಒಂದು ಕಡೆ ನಿಲ್ಲಲಿ. ನನ್ನ ದಂಡು ಇನ್ನೊಂದು ಕಡೆ ನಿಲ್ಲುತ್ತದೆ. ಅವರವರು ಹೊಡೆದಾಡಿ ಸುಮ್ಮನೆ ರಕ್ತಪಾತವಾಗೋದು ಬೇಡ. ನಾವಿಬ್ಬರೇ ಕಾದಾಡೋಣ. ಮೊದಲೇನು ಕತ್ತಿ ಕಾಳಗವೋ? ಕುಸ್ತಿಯೋ?" ಎಂದ ಭರಮು.

ಕತ್ತಿವರಸೆ, ಮಲ್ಲಯುದ್ಧ ಎರಡರಲ್ಲೂ ನಾನು ಪಳಗಿದವನು. ಭರಮುನೂ ಕೂಡ ಸಾಕಷ್ಟು ನುರಿತವನೇ ಆಗಿದ್ದಂತೆ ತೋರುತ್ತಿತ್ತು. ಆದರೆ, ಆತನದು ಸ್ವಲ್ಪ ದಪ್ಪವಾದ ದೇಹ. ನನ್ನಂಥ ಚಪಲತೆ ಆತನಲ್ಲಿದ್ದಂತೆ ತೋರಲಿಲ್ಲ. ಅದೊಂದು ನನಗೆ ಅನುಕೂಲಕರವಾದ ಅಂಶವೆಂದೇ ಕಾಣಿಸುತ್ತಿತ್ತು. ಅಲ್ಲದೆ, ಆದೇ ತಾನೇ ಊಟ ಮಾಡಿದ್ದುದರಿಂದ ಅವನ ಹೊಟ್ಟೆ ಭಾರವಾಗಿರುವುದು ಸಹಜ. ನಾನಾದರೋ ಮೂರು ತಾಸುಗಳ ಹಿಂದೆ ಉಂಡವನಾದುದರಿಂದ, ಅನಂತರ ಮೂರು ಹರದಾರಿ ನಡೆದು

ಬಂದಿದ್ದುದರಿಂದ ಊಟದ ಜಡತೆಯೆಲ್ಲ ಇಳಿದು ಹೋಗಿ ನನ್ನ ಮೈ ಹಗುರಾಗಿತ್ತು. ಇಂಥ ಸ್ಥಿತಿಯಲ್ಲಿ ನಾನು ಕುಸ್ತಿಯನ್ನೂ ಆಡಬಹುದಾಗಿತ್ತು, ಕತ್ತಿಯನ್ನೂ ತಿರುವಬಹುದಾಗಿತ್ತು. ಎಂತಲೇ ಭರಮನ ಪ್ರಶ್ನೆಗೆ ಉತ್ತರವಾಗಿ ಉಪೇಕ್ಷೆಯಿಂದಲೇ ನಾನೆಂದೆ:

"ಯಾವುದಾದರೂ ಸರಿ. ನಾನೇನು ಎರಡಕ್ಕೂ ತಯಾರು!"

"ಲೋಕವೇ ಕಂಡಿರದ ವೀರಾಧಿವೀರನೋ ನೀ?" ಎಂದು ವ್ಯಂಗ್ಯವಾಗಿ ನುಡಿದು, ನಕ್ಕು, ತನ್ನ ಬಂದೂಕನ್ನ ಬಂಡೆಗಲ್ಲಿನ ಮೇಲಿಟ್ಟು, ತನ್ನ ಜನರ ಕಡೆಗೆ ತಿರುಗಿ ಭರಮ ಹೇಳಿದ:

"ನಮ್ಮಿಬ್ಬರ ಲಢಾಯಿಯಿಂದಲೇ ಸೋಲು-ಗೆಲುವು ಗೊತ್ತಾಗುತ್ತದೆ. ಈ ಕಿತ್ತೂರ ಇಸಮು ಸೋತರೆ ಇವನ ಸೈನ್ಯವೆಲ್ಲಾ ನನ್ನದಾಗ್ತದೆ. ನಾನೇನು ಇವನಿಗೆ ಸೋಲಲಿಕ್ಕಿಲ್ಲ. ಒಂದು ವೇಳೆ ಸೋತರೆ ನೀವೆಲ್ಲಾ ಇವನನ್ನ ನಾಯಕನಂತ ಒಪ್ಪಿ ಇವನ ಅಪ್ಪಣೆ ಪಾಲಿಸಬೇಕು. ಗೊತ್ತಾಯಿತೊ?"

ಅವನ ಸೈನಿಕರು ಮೌನವಾಗಿ ತಲೆ ಕೊಡಹಿ ಸಮ್ಮತಿ ಸೂಚಿಸಿದರು.

ಧಗಧಗನೆ ಜ್ವಲಿಸುತ್ತಿದ್ದ ಪಂಜುಗಳನ್ನು ಹಿಡಿದು ಆಳುಗಳು ಸುತ್ತಲೂ ನಿಂತುಕೊಂಡರು. ಒಂದೆಡೆಗೆ ಭರಮನ ದಂಡು, ಇನ್ನೊಂದೆಡೆಗೆ ನನ್ನ ದಂಡು. ಮಧ್ಯದ ಬಯಲಿನಲ್ಲಿ ನಾನು ಮತ್ತು ಭರಮ. ತೊಟ್ಟುಕೊಂಡಿದ್ದ ಅಂಗಿಯನ್ನು ತೆಗೆದು, ಆತ ಮುಷ್ಟಿಯನ್ನು ಸಾವರಿಸಿಕೊಳ್ಳುತ್ತಲಿದ್ದಂತೆ ನಾನೂ ಅಂಗಿ ತೆಗೆದು ತಯಾರಾಗಿ ನಿಂತುಕೊಂಡೆ.

"ಮುಷ್ಟಿಯುದ್ಧ ಕಲಿತೀಯೋ ಇಲ್ಲೋ?" ಎಂದು ಹಾಸ್ಯವಾಗಿ ಕೇಳಿದ ಭರಮ.

"ನಿನಗೂ ಕಲಿಸಿಕೊಡುವಷ್ಟು ಕಲಿತೀನಿ" ಎಂದು ನಾನೂ ಅಣಕದ ನಗೆಯೊಡನೆ ಹೇಳಿ ಎರಡೂ ಮುಷ್ಟಿಗಳನ್ನು ಬಿಗಿದು ಅವನನ್ನು ಸಮೀಪಿಸಿದೆ. ನಾವಿಬ್ಬರೂ ಕೈ ಕೈ ಕೂಡಿಸಿ, ಪದ್ಧತಿಯಂತೆ ಪರಸ್ಪರರಿಗೆ ನಮಸ್ಕರಿಸಿ ಕಾಳಗಕ್ಕಾರಂಭಿಸಿದೆವು. ಅವನ ಎಡದವಡೆಯ ಮೇಲೆ ನಾನೇ ಮೊದಲಾಗಿ ಒಂದು ಬಲವಾದ ಏಟು ಹಾಕಿದೆ. ಆತ ಚಿರತೆಯಂತೆ ಹಾರಿ ಬಂದು ನನ್ನ ಕೆನ್ನೆಗೆ ಗುದ್ದು ಬಿಗಿದ. ಹಾಗೆ ಆರಂಭವಾದ ಮುಷ್ಟಿಗಳ ಚಕಮಕಿ ಅರ್ಧತಾಸಾದರೂ ನಡೆಯುತ್ತಲೇ ಇತ್ತು. ಭರಮನ ಐದಾರು ಹಲ್ಲು

ಗಳಾದರೂ ಸಡಿಲಾಗಿ ಕಳಚಿ ಬೀಳುವ ಸ್ಥಿತಿಯಲ್ಲಿದ್ದವು. ಅವನ ಎಡಗಣ್ಣಿಗೆ ದೊಡ್ಡ ಗಾಯವಾಗಿ ರಕ್ತ ಸುರಿಯತೊಡಗಿತ್ತು. ನನಗೂ ಒಂದೆರಡು ಚಿಕ್ಕ ಪುಟ್ಟ ಗಾಯಗಳಾಗಿದ್ದುವು, ಗದ್ದ ಒಡೆದಿತ್ತು. ಆದರೆ ಭರಮನಷ್ಟು ಆಯಾಸ ನನಗಾಗಿರಲಿಲ್ಲ. ತನ್ನ ಭಾರೀ ಶರೀರವನ್ನು ಹೊತ್ತು ಅತ್ತಿತ್ತ ನೆಗೆಯಲು ಅಸಮರ್ಥನಾಗಿ ಭರಮ ಪೇಚಾಡುತ್ತಿದ್ದ. ಕಪ್ಪು ಬಣ್ಣದ ಅವನ ದೇಹ ದಿಂದ ಒಂಡೆ ಸಮನೆ ಸುರಿಯುತ್ತಿದ್ದ ಬೆವರು ದೀವಟಿಗೆಗಳ ಬೆಳಕಿನಲ್ಲಿ ಥಳ ಥಳ ಹೊಳೆಯುತ್ತಿತ್ತು. ಕಮ್ಮಾರನ ತಿದಿಯಂತೆ ಆತ ತೀವ್ರಗತಿಯಿಂದ ಉಸಿರು ಬಿಡುತ್ತ ನನ್ನ ಏಟು ತಪ್ಪಿಸಿಕೊಳ್ಳಲು ಹೆಣಗುತ್ತಿದ್ದ. ಅವನಿಗೆ ಪೂರ್ಣವಾಗಿ ದಣಿವಾಗಿದ್ದುದು ನನ್ನ ಲಕ್ಷ್ಯಕ್ಕೆ ಬರುತ್ತಲೂ ನಾನು ಹಠಾತ್ತನೆ ಅವನ ಮೇಲೆರಗಿ ನನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಒಂದು ಹೊಡೆತ ಕೊಟ್ಟೆ. ತಕ್ಷಣವೇ ಅವನ ಮೂಗಿನಿಂದಲೂ ಬಾಯಿಯಿಂದಲೂ ರಕ್ತ ಚಿಲ್ಲನೆ ಚಿಮ್ಮಿ ಬಂದಿತು. "ಶಿವ ಶಿವಾ !" ಎಂದು ಕೂಗಿಕೊಂಡು ಧರೆಗುರುಳಿದ ಭರಮ. ಯಾರೋ ಧಾವಿಸಿ ಹೋಗಿ ನೀರು ತಂದರು. ನಾನೇ ಅವನ ಹತ್ತಿರ ಕುಳಿತು, ಅವನ ಬಾಯಿಯ ಮೇಲಿನ ರಕ್ತವನ್ನೊರೆಯಿಸಿ, ಅಷ್ಟು ನೀರು ಕುಡಿಸಿದೆ. ಮತ್ತೊಮ್ಮೆ "ಶಿವ ಶಿವಾ !" ಎಂದು ಉದ್ಗರಿಸಿ ಭರಮ ಜೀವ ತ್ಯಜಿಸಿದ.

ಒಡನೆಯೇ ನನ್ನ ಸೈನಿಕರೆಲ್ಲ ನನ್ನ ಹೆಸರೆತ್ತಿ ಹರ್ಷದಿಂದ ಜಯ ಜಯಕಾರ ಮಾಡಿದರು. ಸನ್ನೆಯಿಂದಲೇ ಅವರನ್ನು ಸುಮ್ಮನಾಗಿಸಿ ನಾನು ಭರಮನ ಸೈನಿಕರತ್ತ ತಿರುಗಿ ಮಾತನಾಡಿದೆ :

"ನಿಮ್ಮ ನಾಯಕನಂತೂ ತೀರಿಕೊಂಡ. ಅವನ ಮಾತಿನಂತೆ ನೀವು ನನ್ನ ಸೈನ್ಯ ಸೇರಿಕೊಳ್ಳುತ್ತೀರೋ ? ಅಥವಾ ನಿಮ್ಮ ಹಾದಿ ನೀವು ನೋಡಿ ಕೊಳ್ಳುತ್ತೀರೋ ?"

"ಭರಮ ನಾಯಕನ ಅಪ್ಪಣೆಯಂತೆಯೇ ನಾವು ನಿನ್ನ ದಂಡು ಕೂಡಿ ಕೊಳ್ಳುತ್ತೇವಿ. ಅವನ ಮಾತು ನಾವು ಮೀರುವವರಲ್ಲ," ಎಂದು ಆ ಸೈನಿಕರು ಉತ್ತರವಿತ್ತರು.

ಹತ್ತಿರದ ಹಳ್ಳಿಯಿಂದ ಒಂದು ಬಂಡಿ ತರಿಸಿ, ಭರಮನ ಶವವನ್ನು ಅದರಲ್ಲಿರಿಸಿ ಮತ್ತೆ ಶಿವಗುತ್ತಿಗೆ ಪ್ರಯಾಣ ಬೆಳೆಸಿದೆವು. ನಾವು ರಾಜಧಾನಿ

ಯನ್ನು ತಲುಪಿದಾಗ ಬೆಳಗಿನ ಕೋಳಿ ಕೂಗುತ್ತಿತ್ತು. ಪುಂಡ ಭರಮನ ಮರಣದ ವಾರ್ತೆ ಹಾಹಾ ಎನ್ನುವುದರೊಳಗಾಗಿ ಶಿವಗುತ್ತಿಯಲ್ಲಿ ಪಸರಿಸಿ ಜನರು ಸಮಾಧಾನದ ಉಸಿರಿಟ್ಟರು. ಶವದ ಬಂಡಿ ಊರಿನ ಬೀದಿಗಳಲ್ಲಿ ಹೊರಟಿದ್ದಂತೆ ಇಕ್ಕೆಲಗಳಲ್ಲೂ ಜನರು ನೆರೆದು ಕುತೂಹಲದಿಂದ ವೀಕ್ಷಿಸುತ್ತಿದ್ದರು. ನನ್ನ ಸೈನಿಕರು ನನ್ನ ಹೆಸರು ಹೇಳಿ ಜಯಕಾರ ಮಾಡುತ್ತಿದ್ದಂತೆ, ಭರಮನನ್ನು ಹೊಡೆದವರಾರೆಂಬುದು ಜನರಿಗೂ ತಿಳಿದು, ಅವರು ನನ್ನನ್ನು ಆದರದಿಂದ ದಿಟ್ಟಿಸುತ್ತಿದ್ದರು. ನನಗೆ ಮಾತ್ರ ವಿಪರೀತ ಸಂಕೋಚ.

ಅರಮನೆಯ ಹೊರಭಾಗದಲ್ಲಿ ಬಂಡಿ ನಿಲ್ಲಿಸಿ ನಾವು ನಾಲ್ಕಾರು ಜನರು ಮಾತ್ರ ಒಳಗೆ ಹೋಗಿ ದೊರೆಗಳಿಗೆ ನಮಸ್ಕರಿಸಿದೆವು. ಭರಮನ ಮೃತ್ಯುವಿನ ವಾರ್ತೆ ಅವರಿಗೆ ಆ ಮೊದಲೇ ಗೊತ್ತಾಗಿಹೋಗಿತ್ತು. ಎಂತಲೇ, ನನಗೆ ಬಹುಬೆಲೆಯ ಕಂಠೀಸರವೊಂದನ್ನು ಬಹುಮಾನವಾಗಿ ಕೊಟ್ಟಿದಲ್ಲದೆ, ಬಂಗಾರದ ಕಲಾಕುಸುರಿಯ ಕಠಾರಿಯೊಂದನ್ನೂ ಅರ್ಪಿಸಿದರು.

ಅರಮನೆಯ ಹೊರಭಾಗದಲ್ಲಿದ್ದ ಶಿಲಾಮಂಟಪದ ಮೇಲೆ ಭರಮನ ಶವವನ್ನು ಸಿಂಗರಿಸಿ ಇಡಲಾಯಿತು. ಅದೊಂದು ದಿನವಿಡೀ ಊರಿನ ಜನರೆಲ್ಲ ಬಂದು ಅವನನ್ನು ನೋಡಿ ಹೋದರು. ಅದೇ ದಿನ ಸೈನಿಕ ಮರ್ಯಾದೆಯೊಡನೆ ಅವನ ಶರೀರವನ್ನು ಅಗ್ನಿಗರ್ಪಿಸಿದೆವು.

ಮತ್ತೆ ನಾನು ಶಿವಗುತ್ತಿಯಲ್ಲಿ ಬಹಳ ದಿನ ನಿಲ್ಲಲಿಲ್ಲ. ಭರಮನ ದಂಡಿನಲ್ಲಿದ್ದ ೫೦ ಜನರನ್ನೂ ಚಂದ್ರಸೇನ ರಾಜರ ಹತ್ತಿರ ಇದ್ದ ನೂರು ಜನ ಅರಬ್ಬಿ ದಂಡಾಳುಗಳನ್ನೂ ಆರಿಸಿಕೊಂಡೆ. ಅವರೆಲ್ಲರಿಗೂ ಕತ್ತಿ–ಕಠಾರಿ ಗುರಾಣಿ–ಬಿಲ್ಲು–ಬಾಣ ಇತ್ಯಾದಿ ಶಸ್ತ್ರಾಸ್ತ್ರ ಒದಗಿಸಿ, ಖರ್ಚಿಗಾಗಿ ಸಾಕಷ್ಟು ಹಣವನ್ನು ಕೊಟ್ಟು ದೊರೆಗಳು ನನಗೆ ಆಶೀರ್ವಾದ ಮಾಡಿದರು.

"ನಿನ್ನ ಪ್ರಯತ್ನ ಫಲಿಸಲಿ ರಾಯನಾಯಕಾ. ನನ್ನ ಮಗಳು ಮತ್ತೆ ಕಿತ್ತೂರ ರಾಣಿಯಾಗಲಿ."

ನೂರೈವತ್ತು ಮಂದಿಯ ದಂಡು ಕಟ್ಟಿಕೊಂಡು ನೂರಾರು ಹರದಾರಿ ದೂರದ ಸ್ಥಳಕ್ಕೆ ಹೋಗಿ ಮುಟ್ಟುವುದೇನೂ ಸಣ್ಣ ವಿಷಯವಲ್ಲ. ಮೊದಲನೆಯದಾಗಿ ಅವರೆಲ್ಲರಿಗೂ ಹೊತ್ತಿಗೆ ಸರಿಯಾಗಿ ಅನ್ನಾಹಾರ ಒದಗಿಸಬೇಕಾಗುತ್ತದೆ. ಅದೇ ನಮ್ಮ ಮುಖ್ಯ ಸಮಸ್ಯೆ. ಇಂಗ್ರೇಜರಿಗೆ ಗೊತ್ತಾಗದಂತೆ

ನಾವು ಅರಣ್ಯದ ಹಾದಿ ಹಿಡಿದು ಗುಪ್ತ ರೀತಿಯಿಂದ ಪಯಣ ಮಾಡಬೇಕಾದುದರಿಂದ ಆ ಸಮಸ್ಯೆ ಇನ್ನಷ್ಟು ಕಠಿಣವಾಗುತ್ತಿತ್ತು. ಸಮೀಪದ ಹಳ್ಳಿಗಳಲ್ಲಿ ಅಕ್ಕಿ-ಜೋಳ ಕೊಂಡು ಅಡವಿಯ ಓರೆಗಳಲ್ಲಿ ಅಡಿಗೆ ಮಾಡಿ ಊಟ ಮುಗಿಸಬೇಕಾದರೆ ಒಮ್ಮೊಮ್ಮೆ ಮಧ್ಯರಾತ್ರಿ ಕಳೆದು ಹೋಗುತ್ತಿತ್ತು. ಒಂದೊಂದು ಸಲ ಅರಣ್ಯದಲ್ಲಿ ಸಿಕ್ಕುವ ಹಣ್ಣು-ಹಂಪಲು ತಿಂದು, ಚಿಗರೆ-ಮೊಲ-ಹಂದಿ ಇತ್ಯಾದಿ ಪಶುಗಳನ್ನು ಬೇಟೆಯಾಡಿ ಅವುಗಳ ಮಾಂಸದಿಂದಲೇ ಹಸಿವು ನೀಗಿಸಿಕೊಳ್ಳಬೇಕಾಗುತ್ತಿತ್ತು. ಕೆಲವೊಂದು ಹಳ್ಳಿಗಳಿಗೆ ನಾವು ಮುತ್ತಿಗೆ ಹಾಕಿದಾಗ ಅಲ್ಲಿಯ ಜನರು ತಾವಾಗಿಯೇ ಮನೆಮನೆ ಸುತ್ತಿ, ರೊಟ್ಟಿ ಪಲ್ಲೆ ಅನ್ನ ಕೂಡಿಸಿಕೊಂಡು ಬಂದು ನಮಗೆ ಕೊಡುತ್ತಿದ್ದುದೂ ಇತ್ತು. ಹಾಗೆ ಮಾರ್ಗಕ್ರಮಣ ಮಾಡುತ್ತ ನಾವು ಗುಳೇದಗುಡ್ಡ ಎಂಬ ಶ್ರೀಮಂತ ಊರಿಗೆ ಮುಟ್ಟಿದೆವು. ದಂಡಿನ ಭಾರೀ ಖರ್ಚು ನಡೆಸಬೇಕಾದರೆ ಶ್ರೀಮಂತರನ್ನು ಸುಲಿಯದೆ ನಿರ್ವಾಹವಿರಲಿಲ್ಲ. ಆ ಊರಿನ ಲೂಟಿಯ ಕಾಲಕ್ಕೆ ನಮಗೆ ಭಾರೀ ಸಂಪತ್ತು ಪ್ರಾಪ್ತವಾಯಿತು. ಒಂದು ಮನೆಯಲ್ಲಿ ಸಿಕ್ಕಿದ ಬಂಗಾರದ ಗುಂಡುಗರಡಿಗೆಯನ್ನು ಚನ್ನಬಸಪ್ಪನಿಗಾಗಿ ನಾನೇ ಇಟ್ಟುಕೊಂಡೆ.

ಲೂಟಿಯ ಸಾಮಾನುಗಳನ್ನು ನೋಡುತ್ತ ನಾನು ಬೀದಿಯಲ್ಲಿ ನಡೆದಿದ್ದಂತೆ ಎದುರಿನಿಂದ ಮಧ್ಯವಯಸ್ಸಿನ ಹೆಣ್ಣುಮಗಳೊಬ್ಬಳು ಓಡಿಬಂದು ನನ್ನನ್ನು ನಿಲ್ಲಿಸಿದಳು. ನನ್ನ ಸುತ್ತಲಿದ್ದ ಸೈನಿಕರು ಗದರಿಸಿದರೂ ಆಕೆ ಅತ್ತ ಸರಿಯಲಿಲ್ಲ.

"ಏನಕ್ಕಾ, ಏನು ಬೇಕು ನಿನಗೆ ?" ಎಂದು ನಾನು ಮರ್ಯಾದೆಯಿಂದಲೇ ವಿಚಾರಿಸಿದೆ.

"ನಿನ್ನ ಶೂರತನದ ಸುದ್ದೀ ಕೇಳಿ ನನಗೆ ಬಹಳ ಸಂತೋಷ ಆಗ್ಯೆತಿ ರಾಯಣ್ಣಾ. ನೀ ನನ್ನ ತಮ್ಮ ಅಂತ ತಿಳುಕೊಂಡೀನಿ. ನಿನ್ನ ಮನೀಗೆ ಕರಕೊಂಡು ಹೋಗಿ ಆರತೀ ಮಾಡಿ ಕಳಿಸಬೇಕಂತ ಬಂದೀನಿ."

ನನ್ನ ತಂಗಿ ಮಾಯವ್ವನ ನೆನಪು ಬಂದು ನನಗೆ ಹೇಗೆಹೇಗೋ ಆಯಿತು.

"ನಿನ್ನ ಹೆಸರೇ ಹೇಳಲಿಲ್ಲಲ್ಲ ಅಕ್ಕವ್ವಾ ?" ಎಂದೆ.

"ರಡ್ಡೇರ ಬಸವ್ವ ಅಂತಾರಪಾ ನನಗೆ. ಬಾ ತಮ್ಮಾ, ರಾಯಣ್ಣಾ-ಮನೀಗೆ ಬಾ."

ಅದೇ ಬೀದಿಯಲ್ಲಿಯೇ ಇದ್ದ ಬಸವ್ವಕ್ಕನ ಮನೆಗೆ ಬಂದೆವು. ಪಡಸಾಲೆಯಲ್ಲಿ ಕರಿಯ ಕಂಬಳಿ ಹಾಸಿ ನಮ್ಮನ್ನು ಕೂಡ್ರಿಸಿ, ಹಾಲು-ಹಣ್ಣು ತಂದು ಕೊಟ್ಟು, ಆರತಿ ಮಾಡಿ, ನನ್ನ ಹಣೆಗೆ ತಿಲಕವಿಟ್ಟು ಸಂಭ್ರಮದಿಂದ ದೂರ ನಿಂತಳು ಬಸವ್ವ. ಆಕೆಯ ಕೊರಳು ಬರಿಯದಾಗಿದ್ದುದನ್ನು ಗಮನಿಸಿ ನಾನು ಕೇಳಿದೆ :

"ನಿನ್ನ ಕೊಳ್ಳಾಗ ಏನೂ ಇಲ್ಲಲ್ಲ ಬಸವ್ವಕ್ಕಾ ?"

"ಇದ್ದದ್ದೆಲ್ಲಾ ನಿನಗೇ ಕೊಟ್ಟು ಬರಿಗೈಯಾಗೀನಿ ತಮ್ಮಾ!" ಎಂದಳು ಬಸವ್ವ.

ಆಕೆ ವಿಧವೆಯೆಂಬುದಂತೂ ನನಗೆ ಆ ಮೊದಲೇ ಗೊತ್ತಾಗಿ ಹೋಗಿತ್ತು. ಆ ಅನಾಥೆಯ ಸಂಪತ್ತನ್ನು ಅಪಹರಿಸಿಕೊಂಡೊಯ್ದರೆ ನಮಗೆ ಪಾಪ ಬರುವುದು ಖಂಡಿತ.

"ನಿನ್ನದು ಏನೇನು ಲೂಟಿಯಾಗಿದೆ ಬಸವ್ವಕ್ಕಾ?"

"ನಾಲ್ಕು ಗಾಲೀ ಸಂದೂಕ ಬರೀದಾಗ್ಯೆತಿ ತಮ್ಮಾ!" ಎಂದಳು ಬಸವ್ವಕ್ಕ.

ಲೂಟಿಯಾದ ಎಲ್ಲ ವಸ್ತುಗಳನ್ನೂ ಅಲ್ಲಿಗೇ ತರಿಸಿ, ತನ್ನ ಒಡವೆಗಳನ್ನು ಆರಿಸಿಕೊಳ್ಳುವಂತೆ ಬಸವ್ವನಿಗೆ ತಿಳಿಸಿದೆ. ಆಕೆ ತನ್ನದೆಲ್ಲವನ್ನೂ ತೆಗೆದುಕೊಂಡ ಬಳಿಕ, ನನ್ನ ಕಾಣಿಕೆಯೆಂದು ಇನ್ನಷ್ಟು ಆಭರಣಗಳನ್ನು ಆಕೆಗೆ ಅರ್ಪಿಸಿ, ಆರತಿ ಬೆಳಗಿ ನನಗೆ ಶುಭ ಕೋರಿದ ಆ ತಾಯಿಯ ಪಾದ ಮುಟ್ಟಿ ವಂದಿಸಿ ಅಲ್ಲಿಂದ ಹೊರಟೆ.

## ೧೬ ಬಿಚ್ಚುಗತ್ತಿ ಚೆನ್ನಬಸಪ್ಪ

ರಾಯಣ್ಣನೊಬ್ಬನೇ ಮೊಗಲಾಯಿ ಸೀಮೆಗೆ ಹೋಗಿದ್ದವನು ಹದಿನೈದು ಇಪ್ಪತ್ತು ದಿನಗಳಾದರೂ ಹೊರಳಿ ಬಂದಿರಲಿಲ್ಲ. ಎಂತಲೇ, ನನಗೆ ಹಗಲಿರುಳೂ ಅವನದೇ ಚಿಂತೆ. ಒಬ್ಬನೇ ಬೇರೆ ಹೋಗಿದ್ದಾನೆ. ಅದು ದೂರದ ದೇಶ. ಇಂಗ್ರೇಜ ಗೂಢಚಾರರು ಈಗಾಗಲೇ ಅವನನ್ನು ಹುಡುಕಾಡುತ್ತಿದ್ದಾರೆ. ಅವನನ್ನು ಹಿಂಬಾಲಿಸಿಕೊಂಡು ಶಿವಗುತ್ತಿಯವರೆಗೂ ಹೋಗಿ, ಸಂಧಿ ಸಾಧಿಸಿಕೊಂಡು ಆವನನ್ನು ಹಿಡಿಯಲೂ ಸಾಧ್ಯವಾಗಬಹುದಲ್ಲ ? ಒಬ್ಬನೇ ಒಬ್ಬ ರಾಯಣ್ಣ. ಎಂಟು ಹತ್ತು ಜನರ ಮುಂದೆ ಏನು ಮಾಡಬಲ್ಲ? ನಾನಂತೂ ಚಾಲವರಿದು ಹೇಳಿಕೊಂಡೆ–"ನಾನೂ ಬರ್ತೀನಿ ನಿನ್ನ ಸಂಗಡ ರಾಯಣ್ಣಾ. ಒಬ್ಬನೇ ಹೋಗಬ್ಯಾಡಪಾ" ಅಂತ. "ಇಂಥಾ ಕೆಲಸಕ್ಕೆ ಒಬ್ಬನೇ ಹೋಗೂದೇ ಚಲೋ. ಹೆಚ್ಚು ಬೊಬ್ಬಾಟವಾಗದಂಗ ಕೆಲಸ ಮಾಡಿಕೊಂಡು ಬರಲಿಕ್ಕೆ ಬರತೈತಿ" ಎಂದು ಹೇಳಿ ಆತ ಹೊರಟುಹೋದ. ಈಗ ನೋಡಿದರೆ ಇಪ್ಪತ್ತು ಇಪ್ಪತ್ತೈದು ದಿನ ಆದರೂ ತಿರುಗಿ ಬಂದಿಲ್ಲ. ಇಲ್ಲಿ ನಮ್ಮೆಲ್ಲರಿಗೂ ಟುಕುಟುಕಿ. ಸರದಾರ್ ವೀರಪ್ಪನವರಿಗೂ ಚಿಂತೆ ಹಿಡಿದಿದೆ. ಕರವೀರನಿಗೆ ಊಟವೂ ರುಚಿಸುತ್ತಿಲ್ಲ. ಬೆಳವಡಿ ಯಲ್ಲಣ್ಣನಂತೂ ಕುಳಿತಲ್ಲಿ ಕೂಡ್ರುತ್ತಿಲ್ಲ, ನಿಂತಲ್ಲಿ ನಿಲ್ಲುತ್ತಿಲ್ಲ. ಶಿವಗುತ್ತಿಯವರೆಗೂ ಹೋಗಿ ರಾಯಣ್ಣನನ್ನು ಹುಡುಕಿ ಕರೆದುಕೊಂಡು ಬರುವುದಾಗಿ ಹೇಳುತ್ತಾನೆ.

ನಾವೆಲ್ಲ ಹೀಗೆ ಚಿಂತೆಗೊಳಗಾಗುತ್ತಿದ್ದಂತೆಯೇ ಒಂದು ರಾತ್ರಿ ರಾಯಣ್ಣ ಬಂದುಬಿಟ್ಟ, ದಂಡು ಕಟ್ಟಿಕೊಂಡು. ದೂರದ ಪ್ರವಾಸದಿಂದ ದಣಿದಿದ್ದರೂ ಅವನೂ ಅವನ ದಂಡಿನ ಜನರೂ ಹುರುಪಿನಿಂದಲೇ ಇದ್ದರು. ರಾಯಣ್ಣ ಬಂದವನೇ ನನ್ನನ್ನು ಗಟ್ಟಿಯಾಗಿ ಅಪ್ಪಿಕೊಂಡು ನಗುನಗುತ್ತ ಹೇಳಿದ :

"ಗುಳೇದಗುಡ್ಡದಾಗ ನಿನ್ನ ನೆನಪು ಬಂದಿತ್ತು ಚನಬಸೂ. ನಿನಗಾಗಿ ಇದೋ ಏನು ತಂದೀನಿ ನೋಡು." ಆತ ತೆಗೆದುಕೊಟ್ಟ ಬಂಗಾರದ ಕರಡಿಗೆಯನ್ನು ನಾನು ಕೊರಳಲ್ಲಿ ಧರಿಸಿಕೊಂಡೆ. ಅದನ್ನು ನೋಡಿ ನೋಡಿ ರಾಯಣ್ಣ ಸಂತೋಷಪಟ್ಟುಕೊಂಡ.

ನೂರೈವತ್ತು ಜನರೆಲ್ಲರಿಗೂ ಒಂದೇ ಕಡೆಗೆ ಊಟ-ವಸತಿಗಳ ವ್ಯವಸ್ಥೆಮಾಡುವುದು ಸುಲಭವಾಗಿರಲಿಲ್ಲ. ಚೀಲಗಟ್ಟಲೆ ಅಕ್ಕಿ-ಜೋಳ ತರಬೇಕಾಗುತ್ತಿತ್ತು. ಅದರಿಂದಾಗಿ ಇಂಗ್ರೇಜರಿಗೆ ಅನುಮಾನ ಬಂದು, ನಮ್ಮ ಕೆಲಸಕ್ಕೆ ಕಲ್ಲು ಬಿದ್ದೀತೆಂದು ಯೋಚಿಸಿ, ಐವತ್ತು ಜನರ ಒಂದೊಂದು ಗುಂಪು ಮಾಡಿ, ಒಬ್ಬೊಬ್ಬ ನಾಯಕನನ್ನು ನೇಮಿಸಿ, ಬೂರುಣಕಿ, ಹಳ್ಯಾಳ, ಬಾಳಗುಂದ ಗುಡ್ಡಗಳಲ್ಲಿ ಅಡಗಿಸಿಡಬೇಕಾಯಿತು. ಸಿದ್ಧೀ ಸೈನಿಕರ ಗುಂಪಿಗೆ ಗಜವೀರನೇ ದಳಪತಿಯಾದ. ಎಲ್ಲರೂ ತಮ್ಮ ತಮ್ಮ ಧರ್ಮದ ದೇವರು ದಿಂಡರ ಆಣೆ ಮಾಡಿ ರಾಯಣ್ಣನೊಡನೆ ಪೂರ್ಣ ನಿಷ್ಠೆಯಿಂದ ನಡೆದು ಕೊಳ್ಳುವುದಾಗಿ ಪ್ರತಿಜ್ಞೆ ಸ್ವೀಕರಿಸಿದರು. ಗುಳೇದಗುಡ್ಡದ ಲೂಟಿಯ ಸಂಪತ್ತನ್ನು ಸರದಾರ್ ವೀರಪ್ಪನವರ ವಶಕ್ಕೆ ಕೊಟ್ಟು, ಸೈನಿಕರ ಖರ್ಚು ವೆಚ್ಚ ನೋಡಿಕೊಳ್ಳಲು ತಿಳಿಸಲಾಯಿತು. ಬೆಳವಡಿ, ಖೊದಾನಪುರ ಮೊದಲಾದ ಕಡೆಗಳಿಂದ ಹಳಬರೂ ತಳವಾರರೂ ಬಂದು ದಂಡಿಗೆ ಸೇರಿ ಕೊಳ್ಳತೊಡಗಿದರು. ಅವರೆಲ್ಲರಿಗೂ ಕತ್ತಿ – ಗುರಾಣಿ – ಬಂದೂಕಗಳನ್ನು ಕೊಟ್ಟು ಬೇರೆ ಬೇರೆ ತಂಡಗಳಿಗೆ ಸೇರಿಸಲಾಯಿತು. ಹದಿನೈದು ಇಪ್ಪತ್ತು ದಿನ ಕಳೆಯುವಷ್ಟರಲ್ಲಿಯೇ ನಮ್ಮ ಸೈನ್ಯದ ಸಂಖ್ಯೆ ಐದುನೂರಕ್ಕಿಂತ ಅಧಿಕವಾಯಿತು. ಕೆಲಸವಿಲ್ಲದೆ ಅವರನ್ನೆಲ್ಲ ಹಾಗೇ ಕೂಡ್ರಿಸುವುದು ಸರಿಯಾಗಿರಲಿಲ್ಲ. ಎಂತಲೇ, ಮಾಸ್ತಮರಡಿಗೆ ಹೋಗಿ, ವೀರಮ್ಮರಾಣಿಯವರ ದತ್ತುಪುತ್ರನನ್ನು ಕರೆದುಕೊಂಡು ಬಂದ, ಅವನ ಹೆಸರಿನಲ್ಲಿಯೇ ಯುದ್ಧ ಹೂಡುವುದೆಂದು ನಿಶ್ಚಯವಾಯಿತು.

ವೀರಮ್ಮಾಜಿಯವರ ದತ್ತಕಪುತ್ರ ಶಿವಲಿಂಗಪ್ಪನಿಗೆ ಆಗ ಹದಿ ಮೂರೋ ಹದಿನಾಲ್ಕೋ ವರ್ಷ ವಯಸ್ಸಿರಬಹುದು. ರಾಯಣ್ಣನಿ ಗಾಗಲೀ ನನಗಾಗಲೀ ಅವನ ಪರಿಚಯವಿರಲಿಲ್ಲ. ಸರದಾರ್ ವೀರಪ್ಪ ನವರೇನೋ ಅವನನ್ನು ಒಂದೆರಡು ಸಲ ನೋಡಿದ್ದರು. ಕಿತ್ತೂರಿನ ಅರಮನೆಯಲ್ಲಿ ಅವನು ಇದ್ದುದೂ ನಾಲ್ಕೈದು ತಿಂಗಳು ಅಷ್ಟೆ. ಅಲ್ಲದೆ, ಅವನಿಗಾಗ ಏಳೆಂಟು ವರ್ಷ ವಯಸ್ಸು. ಆರು ವರ್ಷಗಳ ಹಿಂದೆ ಯಾವಾ ಗಲೋ ಒಮ್ಮೆ ನೋಡಿದ ಜನರನ್ನು ಅವನು ನೆನಪಿನಲ್ಲಿಟ್ಟುಕೊಳ್ಳುವುದೂ ಅಶಕ್ಯವೇ. ಅವನ ಜನಕ ತಂದೆ ಬಾಳಪ್ಪನ ಪರಿಚಯವೂ ನಮಗಿರಲಿಲ್ಲ. ಆ

ತಂದೆಮಕ್ಕಳನ್ನು ಚೆನ್ನಾಗಿ ಬಲ್ಲವನೆಂದರೆ ಹಿರೇಮಠದ ಸಿದ್ದಯ್ಯಸ್ವಾಮಿ ಯೊಬ್ಬನೇ. ಅವನೂ ಈಚೆಗೆ ನಮ್ಮ ಗುಂಪಿನಲ್ಲಿ ಸೇರಿಕೊಂಡಿದ್ದುದರಿಂದ ಶಿವಲಿಂಗಪ್ಪನನ್ನು ಕರೆದುಕೊಂಡು ಬರುವ ಕೆಲಸಕ್ಕೆ ಅವನನ್ನೇ ಕಳಿಸ ಬೇಕೆಂದು ಗೊತ್ತಾಯಿತು. ಅವನ ಜೊತೆಗೆ ನಾನೂ ಹೊರಟೆ.

ಇಪ್ಪತ್ತು ಜನರು ಕೂಡಿಕೊಂಡು ಕೊಳ್ಳದಿಂದ ಹೊರಟವರು ಕೌಳೀ ಗುಡ್ಡಕ್ಕೆ ಹೋಗಿ ಕತ್ತಲಾಗುವವರೆಗೂ ಅಲ್ಲಿಯೇ ಇದ್ದು, ಕಟ್ಟಿತಂದ ಬುತ್ತಿ ಬಿಚ್ಚಿ ಊಟ ಮುಗಿಸಿ, ಮೂಸ್ತಮರಡಿಗೆ ಬಂದೆವು. ಶಿವಲಿಂಗಪ್ಪನ ಹೆಸರಿನಲ್ಲಿ ಬಂಡು ಏಳಬಹುದೆಂಬ ಸಂಶಯ ಇಂಗ್ರೇಜರಿಗೂ ಇದ್ದುದರಿಂದ ಮೂಸ್ತಮರಡಿಯಲ್ಲಿಯೂ ಅವರ ಗೂಢಚಾರರು ತಳಊರಿದ್ದರೆಂದು ಗೊತ್ತಾಯಿತು. ಅವರಿಗೆ ಸ್ವಲ್ಪವೂ ಸಂದೇಹವುಂಟಾಗದಂತೆ ನಾವು ನಮ್ಮ ಕಾರ್ಯ ಸಾಧಿಸಬೇಕಾಗಿದ್ದಿತು.

ಎಂತಲೇ, ಯಾರಿಗೂ ಗೊತ್ತಾಗದಂತೆ ಹಿತ್ತಿಲಬಾಗಿಲಿನಿಂದ ಗೌಡರ ಮನೆಯನ್ನು ಪ್ರವೇಶಿಸಿದೆವು. ಶಿವಲಿಂಗಪ್ಪನ ತಂದೆಯಾದ ಬಾಳಪ್ಪಗೌಡನೂ ಕಿತ್ತೂರ ರಾಜಮನೆತನಕ್ಕೆ ಸೇರಿದವನು. ಮೂಸ್ತಮರಡಿಯ ಗೌಡಿಕೆ ನೋಡಿಕೊಂಡು ಸಮಾಧಾನದಿಂದ ದಿನಗಳೆಯುತ್ತಿದ್ದ ಆತನಿಗೆ ಬಂಡಾಯದ ವಿಚಾರ ಸ್ವಲ್ಪವೂ ಹಿಡಿಸಲಿಲ್ಲ.

"ಇಂಗ್ರೇಜ ಸರಕಾರ ನೋಡಿದರೆ ಬಹಳ ಪ್ರಚಂಡವಾದದ್ದು. ಅಂಥಾ ಚೆನ್ನಮ್ಮರಾಣಿಗೇ ಅದನ್ನ ಸೋಲಿಸಲಿಕ್ಕಾಗಲಿಲ್ಲ. ಇನ್ನು ನಿಮ್ಮ ಕಡೆಯಿಂದ ಏನಾದೀತು? ಬಾಪೂಸಾಹೇಬರ ಮಾತು ಮೀರಲಾರದೆ ಹುಡುಗನ್ನ ದತ್ತಕ ಕೊಟ್ಟಿದ್ದಾಯ್ತು. ಈಗ ಬಾಪೂಸಾಹೇಬರೂ ಇಲ್ಲ. ಅವರ ರಾಜ್ಯವೂ ಇಲ್ಲ. ದೇವರು ನಮಗೇನು ಕಡಿಮೆ ಮಾಡಿಲ್ಲ. ಇದ್ದದ್ದರಲ್ಲೇ ಉಂಡು ತಿಂದು ಸುಖದಿಂದಿರಬಹುದು. ನಮ್ಮ ಹುಡುಗನ್ನ ಕರಕೊಂಡು ಹೋಗಿ ಇಲ್ಲದ ಗದ್ದಲ ಎಬ್ಬಿಸಿ ನಮ್ಮ ಮನೆತನವನ್ನೆಲ್ಲಾ ಸಂಕಟಕ್ಕೆ ಹಾಕಬೇಡ್ರಿ. ಈಗ ಇರುವ ಗೌಡಿಕೆಯನ್ನೂ ಕಳಕೊಂಡು ಗೋಳಾಡುತ್ತಾ ಕೂಡ್ರಬೇಕಾದೀತು!" ಎಂದು ಆತ ಹೇಳಿದ.

"ಹಾಗೇನೂ ಆಗೂದಿಲ್ಲ ಗೌಡರೇ. ಈ ಸಲ ಚಲೋ ತಯಾರೀ ಮಾಡೀವಿ. ಇಂಗ್ರೇಜರಿಗೆ ಬರೋಬ್ಬರಿ ಹೊಡೆತಾ ಕೊಟ್ಟು ಕಿತ್ತೂರ ರಾಜ್ಯ

ಮತ್ತೆ ಕಟ್ಟೋದು ಖಂಡಿತ. ಅದರಾಗೇನೂ ಅನುಮಾನ ಇಲ್ಲ. ಗಾದಿಯ ಮೂಲಕ ನಮ್ಮ ಸಂಗಡ ಇದ್ದರೆ ಸೈನಿಕರಿಗೆಲ್ಲಾ ಹುರುಪು ಬರ್ತದ. ಜನರೂ ಸಹಾಯ ಮಾಡ್ತಾರ. ಅದಕ್ಕಾಗೇ ನಾವೂ ನಿಮ್ಮ ಹತ್ತರ ಬಂದೀವಿ. ಸವಾಯಿ ಮಲ್ಲಸರ್ಜ ದೊರೆಯನ್ನ ಕಳಿಸಿಕೊಡ್ರಿ.”

ಆಗಲೂ ಬಾಳಪ್ಪಗೌಡ ಒಪ್ಪಿಕೊಳ್ಳಲಿಲ್ಲ. ಒಂದೆರಡು ತಾಸುಗಳವರೆಗೆ ಸಿದ್ದಯ್ಯಸ್ವಾಮಿಯೂ ನಾನೂ ಪರಿಪರಿಯಾಗಿ ತಿಳಿ ಹೇಳಿದ ಮೇಲೆ ಆತ ದಾರಿಗೆ ಬಂದ.

“ಹುಡುಗನನ್ನೇ ಕೇಳೂಣು. ಅವ ಬರಲಿಕ್ಕೆ ತಯಾರಿದ್ದರೆ ಕರಕೊಂಡು ಹೋಗ್ರಿ,” ಎಂದು ಹೇಳಿದ.

ನಿದ್ದೆ ಮಾಡುತ್ತಿದ್ದ ಶಿವಲಿಂಗಪ್ಪನನ್ನು ಎಬ್ಬಿಸಿ ಕರೆದುಕೊಂಡು ಬಂದ. ನಮ್ಮನ್ನು ನೋಡುತ್ತಲೂ ಹುಡುಗ ಸ್ವಲ್ಪ ಅಂಜಿಕೊಂಡಂತೆ ಕಾಣಿಸಿತು. ಆದರೆ ತನಗೆ ಪೂರ್ಣ ಪರಿಚಿತನಾಗಿದ್ದ ಸಿದ್ದಯ್ಯಸ್ವಾಮಿಯನ್ನು ಕಂಡಾಗ ಅವನ ಅಂಜಿಕೆ ಮಾಯವಾಗಿರಬೇಕು.

ವೀರಮ್ಮರಾಣಿಯ ಅಪ್ಪಣೆಯ ವಿಚಾರ ತಿಳಿಸಿ, ಸಿದ್ದಯ್ಯಸ್ವಾಮಿ ಎಲ್ಲ ವಿಷಯವನ್ನೂ ವಿವರಿಸಿ ಹೇಳಿದಾಗ ಶಿವಲಿಂಗಪ್ಪನ ಮುದಖಲ್ಲೂ ಉತ್ಸಾಹದ ಕಳೆ ಮೂಡಿತು. ಎಷ್ಟೆಂದರೂ ಕಿತ್ತೂರ ರಾಜವಂಶದ ರಕ್ತವಲ್ಲವೆ? ಅಲ್ಲದೆ, ಅಂಥ ದೊಡ್ಡ ರಾಜ್ಯದ ಅಧಿಕಾರಿಯಾಗುವುದೆಂದರೆ ಯಾರಿಗೆ ತಾನೆ ಆಸೆಯಾಗುವುದಿಲ್ಲ?

“ಅಪ್ಪಾಜಿ ಕಳಿಸಿದರೆ ಬರ್ತೀನಿ,” ಎಂದನಾತ.

“ಏನಂತೀರಿ ಗೌಡರೆ?” ಎಂದ, ಸಿದ್ದಯ್ಯಸ್ವಾಮಿ.

“ಹುಡುಗ ತಯಾರದಾನಂದ ಮ್ಯಾಲ ನನ್ನದೇನು ಅಡ್ಡಿ? ಕರಕೊಂಡು ಹೋಗ್ರಿ. ಆದರೆ ಅವನಿಗೇನೂ ಅಪಾಯ ಆಗದಂಗ ಜೋಪಾನ ಮಾಡಬೇಕು” ಎಂದ, ಗೌಡ.

“ನೀವು ಅದರ ಕಾಳಜೀ ಬಿಡ್ರಿ, ಗೌಡರೆ. ನಮ್ಮ ದೊರೆಯನ್ನು ನಮ ಪ್ರಾಣಕ್ಕಿಂತ ಹೆಚ್ಚಾಗಿ ನೋಡಿಕೊಳ್ತೀವಿ” ಎಂದು ಸಿದ್ದಯ್ಯಸ್ವಾಮಿ ಭರವಸೆ ಕೊಟ್ಟ.

ಮತ್ತೆ ಹಿತ್ತಿಲ ಬಾಗಿಲಿನಿಂದಲೇ ಹೊರಬಿದ್ದು, ಊರು ತ್ಯಜಿಸಿ ಕೌಳೀ

ಗುಡ್ಡಕ್ಕೆ ಬಂದು ಆ ರಾತ್ರಿ ಅಲ್ಲಿಯೇ ವಸತಿ ಮಾಡಿದೆವು. ಗುಡ್ಡ-ಬೆಟ್ಟ ಅಲೆಯುವ ಅಭ್ಯಾಸ ಶಿವಲಿಂಗಪ್ಪನಿಗಿರಲಿಲ್ಲವಾದುದರಿಂದ ಆತ ಸ್ವಲ್ಪ ಕಿರಿಕಿರಿ ಮಾಡುತ್ತಿದ್ದ. ಮರುದಿವಸ ತೀರ ನಸುಕಿನಲ್ಲಿಯೇ ಎದ್ದು ಅವನನ್ನು ಕುದುರೆಯ ಮೇಲೆ ಕೂಡ್ರಿಸಿಕೊಂಡು ಕೊಳ್ಳಕ್ಕೆ ಬಂದು ಮುಟ್ಟಿದೆವು. ಆ ಕಟ್ಟಡವಿಯನ್ನೂ, ಅದರ ನಡುವೆ ಇದ್ದ ಕೊಳ್ಳವನ್ನೂ ಅಲ್ಲಿಯ ದೇವಾಲಯವನ್ನೂ ಅಲ್ಲಿದ್ದ ಜನರನ್ನೂ ಕಂಡು ಶಿವಲಿಂಗಪ್ಪ ದಿಗಿಲುಗೊಳ್ಳುವುದು ಸ್ವಾಭಾವಿಕವಾಗಿತ್ತು. ಆದರೆ, ಅವನ ಹಿತಚಿಂತಕರಾದ ನಾವೆಲ್ಲರೂ ಜೊತೆಯಲ್ಲಿದ್ದುದರಿಂದ ಅವನು ಭಯಪಟ್ಟುಕೊಳ್ಳಲಿಲ್ಲ.

ಮಾಸ್ತಮರಡಿಯಲ್ಲಿರುವವರೆಗೂ ಶಿವಲಿಂಗಪ್ಪನಿಗೆ ಶಸ್ತ್ರವಿದ್ಯೆಯ ಅಭ್ಯಾಸವಾಗಿರಲಿಲ್ಲ. ಎಂತಲೇ ಆತನಿಗೆ ಕತ್ತಿವರಸೆ, ದೊಣ್ಣೆವರಸೆ, ಧನುರ್ವಿದ್ಯೆ, ಕುದುರೆ ಸವಾರಿ ಕಲಿಸುವ ವ್ಯವಸ್ಥೆಯಾಯಿತು. ಕೆಲದಿನಗಳಲ್ಲಿಯೇ ಆ ಚಿಕ್ಕ ದೊರೆ ತನ್ನ ಹೊಸ ವಾತಾವರಣಕ್ಕೆ ಹೊಂದಿಕೊಂಡು ಹುರುಪಿನಿಂದ ದಿನಗಳೆಯತೊಡಗಿದ.

ನಾವು ಮುಂದಿನ ಕಾರ್ಯಕ್ರಮ ರೂಪಿಸುತ್ತಿದ್ದಂತೆಯೇ ಒಂದು ದಿನ ನಮ್ಮ ಹಳೆಯ ಗೆಳೆಯ ಇನ್‌ಸುಲ್ಲಿ ಸಿದ್ದೀಕ ಎಂಬ ಸೈನಿಕ ಬಂದು ಬಂಡಾರಿ ಬಾಪು ಎಂಬ ತನ್ನ ಮಿತ್ರನ ವಿಷಯ ತಿಳಿಸಿದ. ನಂದಗಡ, ಬೀಡಿ ಮೊದಲಾದ ಕಡೆಗಳಲ್ಲಿ ದೊಡ್ಡ ದರೋಡೆಗಾರನೆಂದು ಹೆಸರಾಗಿದ್ದವನು ಬಾಪು. ಅವನ ಕ್ರೂರತನದ ಕೃತಿಗಳ ಬಗೆಗೆ ನಾವೂ ಕೇಳಿ ತಿಳಿದುಕೊಂಡಿದ್ದೆವು.

ಬಂಡಾರಿ ಬಾಪು ತನ್ನ ಜೊತೆಗಾರರೊಡನೆ ನಮ್ಮ ಗುಂಪಿಗೆ ಸೇರಿಕೊಳ್ಳಲು ಅಪೇಕ್ಷೆಪಟ್ಟು ಸಿದ್ದೀಕನನ್ನು ಕಳಿಸಿದ್ದುದು ಗೊತ್ತಾಗುತ್ತಲೂ ನಾವು ಯೋಚನೆಗೀಡಾದೆವು. ಅವನು ಹೇಳಿ ಕೇಳಿ ದರೋಡೆಗಾರ. ಹಣಕ್ಕಾಗಿ ಅವರಿವರನ್ನು ಸುಲಿಯುವುದೇ ಅವನ ಉದ್ಯೋಗ. ರಾಯಣ್ಣನಾಗಲಿ, ನಾನೇ ಆಗಲಿ, ನಮ್ಮ ಗುಂಪಿನ ಇತರ ಪ್ರಮುಖರಾಗಲಿ ಈ ಮೊದಲು ಎಂದೂ ಅಂಥ ಹೇಯಕೃತ್ಯಕ್ಕೆ ತೊಡಗಿದವರಲ್ಲ. ಇತ್ತೀಚೆಗೆ ನಾವು ಲೂಟಿ ಸುಲಿಗೆ ಮಾಡುತ್ತಿದ್ದುದು ನಿಜವಿದ್ದಿತಾದರೂ ಪರದೇಶಿಗಳನ್ನೋಡಿಸುವ ಒಳ್ಳೆಯ ಉದ್ದೇಶಕ್ಕಾಗಿ ಅದನ್ನು ನಡೆಸಿದ್ದುದರಿಂದ ಅದೆಲ್ಲ ಕ್ಷಮ್ಯವಾಗಿತ್ತು.

ಬಾಪುವಿನಂಥ ಸ್ವಾರ್ಥಪರ ದರೋಡೆಗಾರರನ್ನು ನಮ್ಮೊಡನೆ ಸೇರಿಸಿಕೊಳ್ಳುವುದು ಸರಿಯೇ? ಅಲ್ಲವೇ?

ಅವರ ಸಹವಾಸ ಒಳ್ಳೆಯದಲ್ಲವೆಂದು ನಾನು ಸ್ಪಷ್ಟವಾಗಿ ಹೇಳಿದೆ. ರಾಯಣ್ಣನೂ ಹಾಗೇ ಅಭಿಪ್ರಾಯಪಟ್ಟ. ಆದರೆ, ಹಬಸಿ ಗಜವೀರ ಮಾತ್ರ ವಿರುದ್ಧ ಅಭಿಪ್ರಾಯ ವ್ಯಕ್ತಗೊಳಿಸಿದ.

"ದರೋಡೆಖೋರನಾದರೇನಾಯ್ತು? ಹಾಗೆ ನೋಡಿದರೆ ನಾನೂ ಅವನಂತೆಯೇ ಅಲ್ಲೇನು? ಯುದ್ಧ ಅಂದ ಮೇಲೆ ಇಂಥ ಮಂದಿ ಬೇಕೇ ಬೇಕು. ಅವರನ್ನು ಹಿಡಿತದಲ್ಲಿಟ್ಟುಕೊಂಡರಾಯ್ತು."

ಗಜವೀರನ ಮಾತನ್ನು ನಾವು ಒಪ್ಪಿಕೊಳ್ಳಲೇಬೇಕಾಯಿತು.

ಎರಡು ದಿನಗಳ ತರುವಾಯ ಕೌಳೀಗುಡ್ಡದಲ್ಲಿ ಬಂಡಾರಿ ಬಾಪುನೂ ಅವನ ಸಂಗಡಿಗರಾದ ದೇವಲಟ್ಟಿ ಗುಂಟ್ಯಣ್ಣ, ರಾಣೋಜಿ, ಬೀನನಾಯಕ, ಮುಂಡಗುರ್ತದ ಸುಲೇಮಾನ್ ಮೊದಲಾದವರೂ ಭೆಟ್ಟಿಯಾದರು.

"ಸರಕಾರ ನನ್ನ ಬಗ್ಗೆ ಅಪಪ್ರಚಾರ ನಡೆಸಿದೆ. ಅದಕ್ಕಾಗಿ ನಾವೂ ನೀವೂ ಕೂಡಿದರೆ ನಿಮ್ಮ ಹೆಸರಿನಲ್ಲಿ ನಾನು ಸಾಕಷ್ಟು ಜನರನ್ನು ಕೂಡಿಸ ಬಲ್ಲೆ" ಎಂದು ಹೇಳಿದ ಬಂಡಾರಿ ಬಾಪು. ಕುಳ್ಳಗಿನ, ದಪ್ಪದೇಹದ, ಕ್ರೂರ ಮುಖಮುದ್ರೆಯ ಬಾಪುವನ್ನು ನಂಬುವುದು ಕಠಿಣವೆಂದೇ ನನಗೆ ಆಗಲೂ ಅನಿಸಿತು. ಆದರೂ ಆ ಸಂದರ್ಭದಲ್ಲಿ ನಾವು ಹಿಂದೇಟು ಹಾಕುವಂತಿರಲಿಲ್ಲ. ಮತ್ತೆ ಆಣೆ, ಪ್ರತಿಜ್ಞೆ ಎಲ್ಲ ಮುಗಿದು ಬಾಪು ನಮ್ಮ ಸೈನ್ಯಕ್ಕೆ ಸೇರಿಕೊಂಡ ಹಾಗಾಯಿತು.

ಇಂಗ್ರೇಜರ ಚಲನವಲನಗಳನ್ನು ತಿಳಿದುಕೊಂಡು ವರದಿ ಮಾಡುವುದ ಕ್ಕಾಗಿ ನಾವು ಗೂಢಚಾರರ ತಂಡವೊಂದನ್ನು ಸಂಘಟಿಸಿದ್ದೆವು. ಚಳಿಗಾಲದ ಒಂದು ಸಂಜೆ ನಾವು ಕೊಳ್ಳದಲ್ಲಿ ಬೆಂಕಿ ಕಾಯಿಸುತ್ತ ಕುಳಿತಿದ್ದಂತೆ ನಮ್ಮ ಗೂಢಚಾರರಿಬ್ಬರು ಮಹತ್ವದ ವಾರ್ತೆಯೊಂದನ್ನು ತಂದು ಬೀಡಿಯ ಖಜಾನೆಯಲ್ಲಿ ಸಾಕಷ್ಟು ಹಣ ಕೂಡಿದೆಯೆಂದೂ ಅದನ್ನು ಲೂಟಿ ಮಾಡಲು ಅದೇ ಒಳ್ಳೆಯ ಸಮಯವೆಂದೂ ಹೇಳಿದರು.

ಬೀಡಿಯ ಕಚೇರಿಯ ಮೇಲೆ ದಾಳಿ ಮಾಡುವುದರ ಮೂಲಕ ನಮ್ಮ ಯುದ್ಧಕ್ಕಾರಂಭವಾಯಿತೆಂದು ಹೇಳಬಹುದು. ಮರುದಿವಸ ನಸುಕಿನಲ್ಲಿಯೇ ಎದ್ದು, ಗಂಜಿ ಸೇವಿಸಿ, ಮುನ್ನೂರು ಜನರ ಸೈನ್ಯ ಕಟ್ಟಿಕೊಂಡು ಬೀಡಿಗೆ

ನಡೆದೆವು. ಹಾಡೇ ಹಗಲು ಊರಲ್ಲಿ ಪ್ರವೇಶಿಸಿ ನೇರವಾಗಿ ಮಾಮಲೇದಾರರ ಕಚೇರಿಗೆ ಬಂದೆವು. ನಾವು ದಾಳಿ ಮಾಡುವುದರ ಬಗೆಗೆ ಸರಕಾರೀ ಅಧಿಕಾರಿಗಳಿಗೆ ಯಾವ ತಿಳಿವಳಿಕೆಯೂ ಇರಲಿಲ್ಲವಾದುದರಿಂದ ಆ ಸಮಯದಲ್ಲಿ ಹೆಚ್ಚು ಜನ ಕಾವಲುಗಾರರಿರಲಿಲ್ಲ. ಖಜಾನೆಯನ್ನು ಕಾಯುತ್ತಿದ್ದ ಸಿಪಾಯಿಗಳನ್ನು ಹೊಡೆದೋಡಿಸಿ ನಾವು ಕಚೇರಿಯನ್ನು ಪ್ರವೇಶಿಸುತ್ತಿದ್ದಂತೆ ಬಂದೂಕಧಾರಿಯಾದ ಇನ್ನೊಬ್ಬ ಸಿಪಾಯಿ ನಮ್ಮನ್ನು ಅಡ್ಡಗಟ್ಟಿದ. ಬಂಡಾರಿ ಬಾಪು ಕತ್ತಿ ಹಿರಿದು ಆ ಗಡ್ಡದ ಸಿಪಾಯಿಯನ್ನು ಕತ್ತರಿಸಲು ಮುಂದಾಗುತ್ತಿದ್ದಂತೆ ರಾಯಣ್ಣ ಅವನನ್ನು ತಡೆದು, ಸಿಪಾಯಿಯನ್ನು ಕುರಿತು ಹೇಳಿದ :

"ನಿನ್ನ ಪ್ರಾಣ ತಕ್ಕೊಳ್ಳುವ ಮನಸು ನಮಗಿಲ್ಲ ತಮ್ಮಾ. ಪರದೇಶಿಗಳ ವಿರುದ್ಧ ನಾವು ಲಢಾಯಿ ಸುರುಮಾಡಿದೀವಿ. ನೀನೂ ನಮ್ಮವನೇ. ಈ ಪರದೇಶೀ ಸರಕಾರದ ಚಾಕರಿ ಬಿಟ್ಟು ನಮ್ಮ ಸಂಗಡ ಸೇರಿಕೋ. ದೇವರು ನಿನಗೆ ಒಳ್ಳೇದು ಮಾಡ್ತಾನೆ."

ರಾಯಣ್ಣನ ಆ ಮಾತಿನಿಂದ ಗಡ್ಡದ ಸಿಪಾಯಿಯ ಮನಸ್ಸಿನ ಮೇಲೆ ಪರಿಣಾಮವಾಯಿತೋ ಇಲ್ಲವೋ ತಿಳಿಯದು. ನಮ್ಮ ಸೈನ್ಯದಲ್ಲಿಯೂ ಮುಸಲ್ಮಾನರಿದ್ದೇ ಇದ್ದರು. ಸ್ವತಃ ಗಜವೀರನೇ ಮುಸಲ್ಮಾನನಾಗಿದ್ದ. ಅದೆಲ್ಲಾ ಗೊತ್ತಾದರೂ ಆ ಗಡ್ಡದ ಸಿಪಾಯಿ ಮಾತ್ರ ತನ್ನ ಹಟ ಬಿಟ್ಟುಕೊಡಲಿಲ್ಲ. ಆತ ಬಂದೂಕವನ್ನೆತ್ತಿ ಹಿಡಿದು ಗುಂಡು ಹಾರಿಸಲು ತಯಾರಾಗಿ ನಿಂತಾಗ ಮಾತ್ರ ನಾವು ಅವನನ್ನು ಇರಿಯುವುದು ಅನಿವಾರ್ಯವಾಯಿತು. ಬಾಪು ಬಂಡಾರಿಯ ಒಂದೇ ಕತ್ತಿಯೇಟಿಗೆ ಗಡ್ಡದ ಸಿಪಾಯಿಯ ಕಥೆ ಮುಗಿಯಿತು. ನಾವು ಆಹುತಿ ತೆಗೆದುಕೊಂಡ ವೈರಿಗಳ ಮೊದಲನೆಯ ಸೈನಿಕನೆಂದರೆ ಈತನೇ.

ಸಿಪಾಯಿಯ ಹೆಣ ಬಿದ್ದ ಬಳಿಕ ನಮಗೆ ಬೇರೆ ಯಾರಿಂದಲೂ ಯಾವುದೇ ತರದ ಅಡ್ಡಿಯೊದಗಲಿಲ್ಲ. ಮಾಮಲೇದಾರನೂ ಅವನ ಕೈಕೆಳಗಿನ ಚಿಕ್ಕಪುಟ್ಟ ಅಧಿಕಾರಿಗಳೂ ಈ ವೇಳೆಗಾಗಲೇ ಪಲಾಯನ ಹೇಳಿಸಿದ್ದರು. ಸರಕಾರದ ಹಣವನ್ನಿರಿಸಿದ್ದ ಖಜಾನೆಯ ಕಬ್ಬಿಣದ ಪೆಟ್ಟಿಗೆ ಬಹಳ ಗಟ್ಟಿಮುಟ್ಟಾಗಿದ್ದುದಲ್ಲದೆ ಅದಕ್ಕೆ ಸರಿಯಾದಂಥ ಬಲವಾದ ಬೀಗವೂ

ಇತ್ತು. ಆದರೆ, ಬಾಪು ಬಂಡಾರಿ, ಗುಂಟ್ಯಣ್ಣ, ಗಜವೀರರಂಥ ಬಂಟರಿಗೆ ಅದೆಲ್ಲಾ ಯಾವ ಲೆಕ್ಕ? ಒಂದೆರಡು ನಿಮಿಷಗಳಲ್ಲಿಯೇ ಬೀಗ ಮುರಿದು ಪೆಟ್ಟಿಗೆಯಲ್ಲಿದ್ದ ಹಣವನ್ನೆಲ್ಲ ಹೊರಗೆ ತೆಗೆದರು. ಬಾಪು ಬಂಡಾರಿ ಆ ಹಣವನ್ನು ತನ್ನ ಚೀಲಕ್ಕೆ ಸೇರಿಸುತ್ತಿದ್ದಂತೆಯೇ ಗಜವೀರ ಅವನನ್ನು ಅತ್ತ ತಳ್ಳಿ, ಹಣವನ್ನೆಲ್ಲ ಒಂದು ಹಮ್ಮಿಣಿಯಲ್ಲಿ ಹಾಕಿ ಅದನ್ನು ರಾಯಣ್ಣನ ಕೈಗೆ ಕೊಟ್ಟ. ಅನಂತರ ಕಚೇರಿಗೆ ಬೆಂಕಿ ಹಚ್ಚಿ ನಾವು ಬೀಡಿಯಿಂದ ಹೊರಡುತ್ತಿದ್ದಂತೆ ಬಂಡಾರಿ ಬಾಪು ರಾಯಣ್ಣನ ಹತ್ತಿರ ಹೋಗಿ, ಮಾಮಲೇದಾರನ ಮನೆಯನ್ನು ಮುತ್ತಿ ಅವನನ್ನು ಹಿಡಿದು ತರುವುದಾಗಿ ಹೇಳಿದ. ಅದಕ್ಕೆ ರಾಯಣ್ಣನ ಒಪ್ಪಿಗೆ ದೊರೆಯುತ್ತಲೂ ಇಪ್ಪತ್ತು ಜನರನ್ನು ಕರೆದುಕೊಂಡು ಮಾಮಲೇದಾರನನ್ನು ಬಂಧಿಸಿ ತರಲು ಹೋದ ಬಾಪು ಅರ್ಧ ತಾಸಿನೊಳಗೆ ತನ್ನ ಕೆಲಸ ಸಾಧಿಸಿಕೊಂಡು ಆ ಅಧಿಕಾರಿಯ ಸಮೇತ ಬಂದುಬಿಟ್ಟ. ಆ ಬಡಪಾಯಿ ಅಧಿಕಾರಿಯ ಸ್ಥಿತಿ ಅತ್ಯಂತ ಶೋಚನೀಯ ವಾಗಿತ್ತು. ಆತ ತರಗೆಲೆಯಂತೆ ಒಂದೇ ಸಮನೆ ನಡುಗುತ್ತ ನಿಂತಿದ್ದ.

"ನಿಮ್ಮ ಮೇಲೆ ನಮಗೇನು ಸಿಟ್ಟಿಲ್ಲ ಸಾಹೇಬರ. ನೀವೇನು ಹೆದರಬೇಕಾಗಿಲ್ಲ. ಆದರೆ, ಇವತ್ತು ನಡೆದ ಸುದ್ದಿಯನ್ನು ಮಾತ್ರ ನೀವು ಮೇಲಿನವರಿಗೆ ತಿಳಿಸಬಾರದು. ಅಂದರ, ನಿಮ್ಮ ಜೀವಕ್ಕೇನೂ ಅಪಾಯ ವಾಗುವುದಿಲ್ಲ" ಎಂದ ರಾಯಣ್ಣ.

"ಇಲ್ಲ....ಇಲ್ಲ....ಇಲ್ಲ....ಮಾರಾಯಾ....ಇಲ್ಲ....ಇಲ್ಲ....ಇಲ್ಲ........" ಎಂದು ತೊದಲಿದ ಮಾಮಲೇದಾರ. ಚಳಿಗಾಲದ ಆ ದಿನದಲ್ಲೂ ಅವನ ಶರೀರದಿಂದ ಧಾರಾಕಾರವಾಗಿ ಬೆವರು ಸುರಿಯುತ್ತಿತ್ತು.

"ಸರಕಾರದ ರೊಕ್ಕ ನಿಮ್ಮ ಹತ್ತರವೂ ಇರಬೇಕಲ್ಲ? ಅದನ್ನು ತಂದು ಕೊಟ್ಟರೆ ನಿಮ್ಮನ್ನು ಬಿಡ್ತೀವಿ, ಇಲ್ಲದಿದ್ದರೆ ಬಿಡೂದಿಲ್ಲ" ಎಂದು ಬಾಪು ಬಂಡಾರಿ ಹೇಳಿದ. ಆತ ಈ ರೀತಿ ಮಾತನಾಡಿದುದು ಯಾರಿಗೂ ಸರಿ ಬರಲಿಲ್ಲ. ಸೇನಾಪತಿಯಾದ ರಾಯಣ್ಣ ಎದುರಿಗಿರುವಾಗ ಬಾಪು ಹಾಗೆ ನಡುವೆ ಬಾಯಿ ಹಾಕುವುದು ಅಧಿಕಪ್ರಸಂಗತನವೇ ಆಗಿತ್ತು.

"ಸರಕಾರದ ಹಣವನ್ನು ಮನೆಯಲ್ಲಿಟ್ಟುಕೊಳ್ಳು'ವ ಪರವಾನಗಿ ಇಲ್ಲ ಮಾರಾಯಾ. ನನ್ನ ಬಿಟ್ಟುಬಿಡ್ರಿ. ನನ್ನ ಹೆಂಡತಿಯು ಗುಳದಾಳೀ ಹರಿಯ

ಬ್ಯಾಡ್ರಿ" ಎಂದು ಅಂಗಲಾಚಿ ಬೇಡಿಕೊಳ್ಳುತ್ತ ರಾಯಣ್ಣನ ಕಾಲು ಹಿಡಿದ ಮಾಮಲೇದಾರ.

"ಇವನ್ನ ಹೀಗೇ ಬಿಡೂದು ಚಲೋದಲ್ಲ ರಾಯಣ್ಣಾ. ಈಗ ನಾವು ಇವನ್ನ ಬಿಟ್ಟರೆ ನಾವು ಅತ್ತ ಹೋಗುತ್ತಲೂ ಇತ್ತ ಇವ ಹಳಬರನ್ನಟ್ಟಿ ಸರಕಾರಕ್ಕೆ ಸುದ್ದೀ ತಿಳಸ್ತಾನೆ. ಇವನ್ನ ಬಿಡೂದು ಬ್ಯಾಡ. ಮುಗಿಸಿಬಿಡೋಣ" ಎಂದ ಬಾಪು.

ಕುದುರೆಯ ಮೇಲೆ ಕುಳಿತಿದ್ದ ಹಾಗೆಯೇ ಬಾಪುವನ್ನೊಮ್ಮೆ ತೀಕ್ಷ್ಣ ದೃಷ್ಟಿಯಿಂದ ನೋಡಿ, ರಾಯಣ್ಣ ದೃಢ ಸ್ವರದಲ್ಲಿ ಹೇಳಿದ.

"ನೀವು ಹೋಗಿಬಿಡ್ರಿ ಸಾಹೇಬರೆ. ನಿಮಗೇನೂ ಆಗೂದಿಲ್ಲ."

ಮಾಮಲೇದಾರ ಮತ್ತೊಮ್ಮೆ ರಾಯಣ್ಣನಿಗೆ ನಮಸ್ಕರಿಸಿ, ನಡುಗುತ್ತ ನಡುಗುತ್ತಲೇ ಹೊರಟುಹೋದ.

"ಅವನ್ನ ಹಾಗೇ ಬಿಟ್ಟಿದ್ದು ಒಳ್ಳೇದಾಗಲಿಲ್ಲ. ನಮ್ಮ ಕಾಲ ಮೇಲೆ ನಾವು ಕಲ್ಲು ಹಾಕಿಕೋಬಾರದು" ಬಾಪು ಮತ್ತೆ ವಾದಿಸಿದ.

"ಏನು ಮಾಡಬೇಕು, ಏನು ಮಾಡಬಾರದು ಅಂತ ಅಪ್ಪಣೆ ಮಾಡುವವ ನಾನು; ನೀನಲ್ಲ. ಗೊತ್ತಾತೇ ಬಾಪೂ ? ನನ್ನ ಹುಕುಂಪಂತೆ ನಡಕೊಳ್ಳುವ ಮನಸ್ಸಿದ್ದರೆ ಮಾತ್ರ ನೀ ನನ್ನ ಸಂಗಡ ಇರಬೇಕು. ಇಲ್ಲಾಂದರೆ ಈಗಿಂದೀಗ ಹೊರಟುಹೋಗಿ ಬಿಡಬಹುದು," ಎಂದು ನಿಷ್ಠುರದ ಧ್ವನಿಯಲ್ಲಿ ಹೇಳಿದ ರಾಯಣ್ಣ.

ಇನ್ನೊಬ್ಬರ ಆಜ್ಞೆಗೊಳಗಾಗಿ ವರ್ತಿಸುವುದು ಬಾಪುವಿನ ಸ್ವಭಾವ ದಲ್ಲೇ ಇದ್ದಂತಿರಲಿಲ್ಲ. ಆತ ಅಸಮಾಧಾನದಿಂದ ಉರಿಯುತ್ತ ಆ ಕ್ಷಣಕ್ಕಂತೂ ಸುಮ್ಮನಾದ.

ಬೀಡಿಯಿಂದ ಹೊರಟು ಸಂಜೆಯೊಳಗಾಗಿ ಸಮಶೇರಗಡಕ್ಕೆ ಬಂದು ಅಲ್ಲಿನ ಹಾಳು ಕೋಟೆಯಲ್ಲಿ ಬಿಡಾರ ಮಾಡಿದೆವು. ಮಾಮಲೇದಾರರ ಕಚೇರಿಯಲ್ಲಿ ಲೂಟಿ ಮಾಡಿ ತಂದ ಹಣ ಎಣಿಸಿದಾಗ ಒಟ್ಟು ೧೯೦೦ ರೂಪಾಯಿಗಳಿದ್ದುದು ಗೊತ್ತಾಯಿತು. ಅದೆಲ್ಲವೂ ನಮ್ಮ ಸೈನಿಕರ ಊಟದ ಖರ್ಚಿಗೆ ವ್ಯಯವಾಯಿತು. ಲೂಟಿಯ ಹಣದಲ್ಲಿ ತನಗೇನೂ ಪಾಲು ಸಿಕ್ಕಲಿಲ್ಲವೆಂದು ಬಂಡಾರಿ ಬಾಪು ಗೊಣಗುತ್ತಲೇ ಇದ್ದ. ರಾಯಣ್ಣ ಮಾತ್ರ ಅವನನ್ನು ಪೂರ್ತಿಯಾಗಿ ಉಪೇಕ್ಷಿಸಿದ.

ಬೀಡಿಯ ಕಚೇರಿ ಸುಟ್ಟು ನಾವು ಸಮಶೇರಗಡಕ್ಕೆ ಬಂದು ಅಲ್ಲಿ ಬಿಡಾರ ಮಾಡಿದಾಗ ನನ್ನ ಜೊತೆಗೆ ಮೂರು ನೂರು ಜನ-ಸೈನಿಕರಿದ್ದರು. ಅವರೆಲ್ಲರ ಊಟ, ಬಟ್ಟೆ-ಬರೆ, ಶಸ್ತ್ರಾಸ್ತ್ರ, ಮದ್ದುಗುಂಡು ಇತ್ಯಾದಿಗಳ ಖರ್ಚು ದಿನದಿಂದ ದಿನಕ್ಕೆ ಬೆಳೆಯುತ್ತಿತ್ತು. ಮೊಗಲಾಯಿ ಸೀಮೆಯಿಂದ ಬಂದಿದ್ದ ಜನರಿಗಂತೂ ಕುರಿ-ಕೋಳಿಗಳ ಮಾಂಸವಿಲ್ಲದಿದ್ದರೆ ನಡೆಯುತ್ತಿರಲಿಲ್ಲ. ದಂಡು ಕಟ್ಟುವ ಮಾತೇನೋ ಸುಲಭ-ಆದರೆ ಅದನ್ನು ತೂಗಿಸಿಕೊಂಡು ಹೋಗುವುದು ಎಷ್ಟು ಕಷ್ಟವೆಂಬುದರ ಅನುಭವ ಒಂದೇ ವಾರದಲ್ಲಿ ನನಗೆ ಚೆನ್ನಾಗಿ ಆಯಿತು. ಸೈನ್ಯದ ಖರ್ಚು ನಡೆಸುವುದಕ್ಕಾಗಿ ನಾವು ಅಲ್ಲಿ ಇಲ್ಲಿ ಪರೋಡೆ-ಲೂಟಿ ಮಾಡದೆ ಗತ್ಯಂತರವಿರಲಿಲ್ಲ. ಹಳ್ಳಿಗಳನ್ನು ಮುತ್ತಿ, ಅಲ್ಲಿಯ ಸಾಹುಕಾರರನ್ನೂ ಸೆಟ್ಟರನ್ನೂ ಕರೆಯಿಸಿಕೊಂಡು ಅವರಿಂದ ಐದಾರು ಸಾವಿರ ರೂಪಾಯಿ ವಸೂಲು ಮಾಡತೊಡಗಿದೆವು. ಹಣ ಕೊಡಲು ಒಪ್ಪಿಕೊಳ್ಳದಿದ್ದ ಸಾಹುಕಾರರ ಮನೆಗಳನ್ನು ಲೂಟಿ ಮಾಡುವುದೂ ಅನಿವಾರ್ಯವಾಯಿತು. ನಾನೆಂದೂ ಇಂಥ ಕೆಲಸ ಮಾಡಿದವನಲ್ಲ. ಈಗಲೂ ಮಾಡಲು ಇಚ್ಛೆಯಿರಲಿಲ್ಲ. ಆದರೆ, ಕೈಕೊಂಡ ಕೆಲಸ ಯಶಸ್ವಿಯಾಗಬೇಕಾದರೆ ನನ್ನ ಇಚ್ಛೆಗೆ ವಿರುದ್ಧವಾಗಿಯೂ ಇಂಥ ಹಲವು ಕೃತ್ಯಗಳಲ್ಲಿ ತೊಡಗಿಕೊಳ್ಳಲೇಬೇಕಾಗಿತ್ತು. ಹಿಂದಿನ ಅನೇಕ ರಾಜಮಹಾರಾಜರೂ ಸೈನ್ಯಕ್ಕಾಗಿ ಹಣ ಕೂಡಿಸಲು ಸಾಹುಕಾರರನ್ನು ಸುಲಿದಿದ್ದ ವಿಷಯ ನನಗೆ ಗೊತ್ತಿದ್ದುದರಿಂದ ನಾನು ಅಂಥ ಪಾಪಕೃತ್ಯವನ್ನೇನೂ ಮಾಡುತ್ತಿಲ್ಲವೆಂಬ ಅಲ್ಪ ಸಮಾಧಾನವೊಂದಿತ್ತು.

ಸಮಶೇರಗಡದ ಸುತ್ತಮುತ್ತ ಇದ್ದ ಅನೇಕ ಹಳ್ಳಿಗಳಿಂದ ನಾವು ಈ ರೀತಿಯಾಗಿ ಹಣ ಸೇರಿಸಿದೆವು. ಸರ್ಕಾರದ ಖಜಾನೆಗಳಿಗೆ ತುಂಬಲು ರೈತರ ಕಂದಾಯದ ಹಣ ಒಯ್ಯುತ್ತಿದ್ದ ಹಳಬರನ್ನು ಹಿಡಿದು ಅದನ್ನೂ ವಶಪಡಿಸಿಕೊಂಡೆವು. ಚೆನ್ನಮ್ಮರಾಣಿಯವರ ಕಾಲಕ್ಕೆ ಈ ಭಾಗವೆಲ್ಲವೂ ಕಿತ್ತೂರ ರಾಜ್ಯಕ್ಕೇ ಸೇರಿದ್ದಿತಾದುದರಿಂದ ಅದನ್ನು ಕ್ರಮೇಣವಾಗಿ ನಮ್ಮ ಕೈಗೆ ತೆಗೆದುಕೊಳ್ಳಲುಪಕ್ರಮಿಸಿದೆವು. ಸರ್ಕಾರ ಯಾವುದಿದ್ದರೂ ಅದರ ಅಮಲು ನಡೆಸು

ವವರೆಂದರೆ ಹಳ್ಳಿಗಳ ಗೌಡರು ಮತ್ತು ಕುಲಕರ್ಣಿಗಳು. ಅವರ ಕೈ ಕೆಳಗೆ ಸೈನಿಕರಂತೆ ಕೆಲಸ ಮಾಡುವವರು ಹಳಬರು ಮತ್ತು ತಳವಾರರು. ನಾವು ಹಳ್ಳಿಯ ಗೌಡ-ಕುಲಕರ್ಣಿಯರನ್ನು ಹಿಡಿದು, ಪರದೇಶೀ ಸರ್ಕಾರದ ನೌಕರಿ ಬಿಟ್ಟು ಬಿಡುವಂತೆ ಅವರಿಗೆ ತಿಳಿಸಿದೆವು. ಅನೇಕ ಗ್ರಾಮಗಳಲ್ಲಿ ಕುಲಕರ್ಣಿಯರಿಂದ ಸರ್ಕಾರೀ ಕಾಗದ ಪತ್ರಗಳನ್ನು ವಶಪಡಿಸಿಕೊಂಡು ಸುಟ್ಟು ಹಾಕಿದೆವು. ಕಿತ್ತೂರ ಅರಸ ಅರಸಿಯರ ಬಗೆಗೆ ಹಳ್ಳಿಯ ಜನರಲ್ಲೆಲ್ಲ ಪ್ರೀತಿಯೂ ಆದರವೂ ಇದ್ದುದರಿಂದ, ಪರಕೀಯ ಸರ್ಕಾರವನ್ನು ನಾಶಗೊಳಿಸಿ ಪುನಃ ಕಿತ್ತೂರು ರಾಜ್ಯ ಸ್ಥಾಪಿಸುವ ನಮ್ಮ ಪ್ರಯತ್ನಗಳಿಗೆ ಜನರ ಸಹಾನುಭೂತಿಯೂ ಇತ್ತು. ಅನೇಕ ಜನ ಕುಲಕರ್ಣಿಯರು ತಾವಾಗಿಯೇ ದಪ್ತರುಗಳನ್ನು ಕೊಟ್ಟುಬಿಟ್ಟರು. ಗೌಡರು ತಮ್ಮಲ್ಲಿದ್ದ ಕತ್ತಿ, ಕಠಾರಿ, ಬಂದೂಕಗಳನ್ನು ಕೊಟ್ಟು ಸಹಾಯ ಮಾಡಿದರು. ಹಳಬರೂ ತಳವಾರರೂ ಬಿಟ್ಟೀ ಕೆಲಸದ ಹೊಲೆಯರೂ ತಮ್ಮ ತಮ್ಮ ಚಾಕರಿ ಬಿಟ್ಟುಕೊಟ್ಟು ನಮ್ಮ ದಂಡಿಗೇ ಸೇರಿಕೊಂಡರು.

ಕಂದಾಯದ ಹಣವನ್ನು ನಾವು ಲೂಟಿ ಮಾಡುತ್ತಿದ್ದ ವಿಷಯ ಸರ್ಕಾರಕ್ಕೆ ತಿಳಿಯುತ್ತಲೂ ನಮ್ಮನ್ನು ಸದೆಬಡೆಯುವುದಕ್ಕಾಗಿ ಇಂಗ್ರೇಜ್ ಸೈನಿಕರ ಚಿಕ್ಕ ಚಿಕ್ಕ ತಂಡಗಳು ಕಳಿಸಲ್ಪಟ್ಟವು. ಆದರೆ, ನಾವು ನೆಲಸಿದ್ದ ಪ್ರದೇಶವಲ್ಲೆಲ್ಲ ದಟ್ಟವಾದ ಅಡವಿಯಿದ್ದುದರಿಂದ ನಮ್ಮನ್ನು ಶೋಧಿಸಿ ತೆಗೆಯುವುದು ಅವರಿಂದಾಗುತ್ತಿರಲಿಲ್ಲ. ಈ ಭಾಗದ ಗುಡ್ಡಗಾಡುಗಳ ಪರಿಚಯವೂ ಅವರಿಗಿರಲಿಲ್ಲ. ಅಲ್ಲದೆ, ಹಳ್ಳಿಗಳ ಹತ್ತಿರ ಅವರ ಸೈನ್ಯ ಹಾದು ಹೋಗುವಾಗ ರೈತರಿಂದ ಅವರಿಗೆ ಸ್ವಲ್ಪವೂ ಸಹಕಾರ ಸಿಕ್ಕುತ್ತಿರಲಿಲ್ಲ. ಎಷ್ಟೋ ಸಲ ಅವರಿಗೆ ಕುಡಿಯುವ ನೀರು ಸಿಕ್ಕುವುದೂ ಕಠಿಣವಾಗುತ್ತಿತ್ತು. ಇನ್ನು ಆಹಾರ ಧಾನ್ಯಗಳ ಮಾತು ದೂರವುಳಿಯಿತು. ಏನಿದ್ದರೂ, ದೊಡ್ಡ ಊರುಗಳಲ್ಲಿನ ಸೆಟ್ಟಿ ಸಾಹುಕಾರರ ಮುಖಾಂತರ ಅವರು ಅಕ್ಕಿ-ಜೋಳ ಇತ್ಯಾದಿ ಧಾನ್ಯಗಳನ್ನು ತರಿಸಿಕೊಳ್ಳಬೇಕಾಗುತ್ತಿತ್ತು. ಧಾನ್ಯ ತುಂಬಿದ ಚಕ್ಕಡಿಗಳನ್ನು ಕಟ್ಟಿಕೊಂಡೇ ಅವರು ಪಯಣಮಾಡಬೇಕಾಗಿದ್ದುದರಿಂದ ನಮ್ಮನ್ನು ಎದುರಿಸಲು ಅವರಿಗೆ ಶಕ್ಯವಾಗುತ್ತಿರಲಿಲ್ಲ. ನಾವು ಮಾತ್ರ ಯಾವುದೇ ಸಮಯದಲ್ಲೂ ಮಿಂಚಿನ ವೇಗದಿಂದ ಅವರ ಮೇಲೆ ದಾಳಿ ಮಾಡಿ, ಕೈಗೆ ಸಿಕ್ಕಿದ ಶಸ್ತ್ರಾಸ್ತ್ರಗಳನ್ನೂ

ಹಣವನ್ನೂ ದೋಚಿಕೊಂಡು, ಬಂದ ಹಾಗೆಯೇ ತ್ವರೆಯಿಂದ ಮಾಯವಾಗಿ ಗುಡ್ಡಗಾಡಿನಲ್ಲಿ ಆಶ್ರಯ ಪಡೆಯುತ್ತಿದ್ದೆವು. ನನ್ನ ಸೈನ್ಯದಲ್ಲಿ ನಾಲ್ಕು ತಂಡಗಳನ್ನು ರಚಿಸಿ, ಗಜವೀರ, ಚೆನ್ನಬಸಪ್ಪ, ಯಲ್ಲನಾಯಕರನ್ನು ಮೂರು ತಂಡಗಳ ನಾಯಕರನ್ನಾಗಿ ಮಾಡಿ, ಒಂದು ತಂಡವನ್ನು ನನ್ನ ಸ್ವಂತ ವಶದಲ್ಲಿಯೇ ಇಟ್ಟುಕೊಂಡಿದ್ದೆ. ಈ ನಾಲ್ಕು ತಂಡಗಳೂ ಸರದಿಯ ಪ್ರಕಾರ ಕೆಲಸ ಮಾಡಿ, ಅನಂತರ ಒಂದು ದಿನವಿಡೀ ವಿಶ್ರಾಂತಿ ಪಡೆಯುವ ವ್ಯವಸ್ಥೆ ಮಾಡಿದ್ದೆ. ಗಾಯಗೊಂಡವರಿಗೆ ಚಿಕಿತ್ಸೆಮಾಡಲು ನಾಲ್ಕುಜನ ವೈದ್ಯರನ್ನೂ ಇಟ್ಟುಕೊಂಡಿದ್ದೆವು.

ನಮ್ಮ ಸೈನ್ಯದ ಜೊತೆಗೆ ಚಕ್ಕಡಿ – ಬಂಡಿ – ಹೇಸರಗತ್ತೆ ಇತ್ಯಾದಿ ಉಪದ್ರವವಾವುದೂ ಇರಲಿಲ್ಲ. ಪ್ರತಿಯೊಬ್ಬ ಸೈನಿಕನಿಗೂ ಒಂದೋಂದು ದಪ್ಪಗಿನ ಕಂಬಳಿ ಕೊಟ್ಟಿದ್ದೆವು. ಅದನ್ನು ಯಾವಾಗಲೂ ಎದೆಯ ಮೇಲೆ ಕಟ್ಟಿಕೊಂಡೇ ಅವರು ಸಂಚರಿಸುತ್ತಿದ್ದುದರಿಂದ ರಾತ್ರಿಯಾಗುತ್ತಲೂ ಎಲ್ಲಿ ಬೇಕೆಂದರಲ್ಲಿ ಮಲಗಿ ನಿದ್ರಿಸಲು ಅನುಕೂಲವಿತ್ತು. ಇಡಿಯ ಸೈನ್ಯಕ್ಕೆಲ್ಲ ಸೇರಿ ೧೦ ಕುದುರೆಗಳಿದ್ದವು, ಅಷ್ಟೆ. ದಳಪತಿಗಳು ಮಾತ್ರ ಕುದುರೆಗಳನ್ನು ಉಪಯೋಗಿಸುತ್ತಿದ್ದರು. ಮದ್ದು ಗುಂಡುಗಳ ಸಂಗ್ರಹವನ್ನಂತೂ ಒಂದು ರಹಸ್ಯ ಸ್ಥಳದಲ್ಲಿ ಇರಿಸಿದ್ದೆವು. ಅಗತ್ಯವಿದ್ದಾಗ ಮಾತ್ರವೇ ಯಾರಾದರೂ ಅಲ್ಲಿಗೆ ಹೋಗಿ ಮದ್ದು ಗುಂಡು ತೆಗೆದುಕೊಂಡು ಬರುತ್ತಿದ್ದರು.

ನಮ್ಮಲ್ಲಿ ಕೆಲವರನ್ನಾದರೂ ಹಿಡಿಯಬೇಕೆಂದು ಇಂಗ್ರೇಜರು ಪರಿಪರಿಯಾಗಿ ಪ್ರಯತ್ನಿಸಿದರೂ ಅವರಿಗೇನು ಯಶಸ್ಸು ಲಭಿಸಲಿಲ್ಲ. ಅವರಿಗೆ ಚೆನ್ನಾಗಿ ಬುದ್ಧಿ ಕಲಿಸಬೇಕೆಂದು ಹಾತೊರೆಯುತ್ತಿದ್ದ ನಾನು, ಒಂದು ದಿನ ಗೋಧೊಳ್ಳಿಯ ಹತ್ತಿರ ಅವರ ಸೈನ್ಯ ಬೀಡುಬಿಟ್ಟ ಸುದ್ದಿ ತಿಳಿಯುತ್ತಲೂ ಒಂದು ನೂರು ಮಂದಿ ಆರಿಸಿದ ಬಂಟರನ್ನು ಕರೆದುಕೊಂಡು ಒತ್ತರದಿಂದ ನಡೆದು ಅಲ್ಲಿಗೆ ಹೋಗಿ ಮುಟ್ಟಿದೆ. ಆದರೆ, ವೈರಿ ಸೈನ್ಯ ನಮಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿದ್ದುದು ಗೊತ್ತಾಗುತ್ತಲೂ ನಮ್ಮ ಜನರನ್ನು ಸಾವು ನೋವುಗಳಿಗೀಡು ಮಾಡುವುದು ಸರಿಯಲ್ಲವೆಂದು ತೋರಿತು. ಅಷ್ಟು ದೂರ ಧಾವಿಸಿ ಬಂದು ಹಾಗೆಯೇ ಬರಿಗೈಯಿಂದ ಹಿಂತಿರುಗುವಂತೆಯೂ ಇರಲಿಲ್ಲ. ವೈರಿಗಳಿಗೆ ಸಾಧ್ಯವಾದಷ್ಟು ನಷ್ಟವನ್ನುಂಟುಮಾಡಿಯೇ ಹೋಗುವುದೆಂದು ನಿಶ್ಚಯಿಸಿ, ಹುಲ್ಲಿನ ಹೊರೆಯೊಂದನ್ನು ತರಿಸಿ ಅದರೊಳಗಡೆ ನಾನು ಅವಿತು

ಕೊಂಡೆ. ಬಸ್ತವಾಡದ ಬಾಳನಾಯಕ ನನಗಿಂತ ಬಲವಾದ ಇಸಮು. ಆ ಹುಲ್ಲು ಹೊರೆಯನ್ನು ಆತ ಹೊತ್ತುಕೊಂಡು ಇಂಗ್ರೇಜರ ಪಾಳಯದಲ್ಲಿ ಪ್ರವೇಶ ದೊರಕಿಸಿದ. ಅದು ಮಧ್ಯಾಹ್ನದ ಹೊತ್ತು. ಇಂಗ್ರೇಜರ ದಂಡಿನವ ರೆಲ್ಲ ಕೆರೆಯ ದಂಡೆಯ ಮೇಲೆ ತಮ್ಮ ಬಂದೂಕಗಳನ್ನು ಗೂಡು ಮಾಡಿ ಇಟ್ಟು ಊಟ ಮಾಡಿ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದರು. ಬಾಳನಾಯಕ ಹುಲ್ಲು ಮಾರುವವನ ವೇಷದಲ್ಲಿದ್ದುದರಿಂದ ಅವನ ಬಗೆಗೆ ಯಾರಿಗೂ ಸಂಶಯ ಬರಲಿಲ್ಲ. ಹೊರೆಯನ್ನಿಳಿಸಿ, ಆತ ಕೆರೆಗೆ ಹೋಗಿ ನೀರು ಕುಡಿಯುವ ನಟನೆ ಮಾಡುತ್ತಿದ್ದಂತೆಯೇ ನಾನು ಹುಲ್ಲಿನಿಂದ ಹೊರಬಂದು, ಇಂಗ್ರೇಜರ ಬಂದೂಕ ಗಳನ್ನೆತ್ತಿ ಕೆರೆಯಲ್ಲಿ ಬಿಸುಟಿದೆ. ಗಿಡಗಳ ನೆರಳಲ್ಲಿ ಸುಖವಾಗಿ ನಿದ್ರಿಸುತ್ತಿದ್ದ ಸೈನಿಕರು ಎಚ್ಚತ್ತುಕೊಂಡು ಓಡಿ ಬರುವಷ್ಟರಲ್ಲಿಯೇ ನಾನೂ ಬಾಳ ನಾಯಕನೂ ಆ ಪಾಳಯದಿಂದ ತಪ್ಪಿಸಿಕೊಂಡು ನಮ್ಮ ಗುಂಪನ್ನು ಸೇರಿ ಕೊಂಡೆವು.

ಅದೇ ದಿನ ಸಂಜೆ ಖಾನಾಪುರದ ಹತ್ತಿರ ಇಂಗ್ರೇಜರ ಇನ್ನೊಂದು ತಂಡದ ಮೇಲೆ ದಾಳಿ ನಡೆಸಿದೆವು. ಸೂರ್ಯಾಸ್ತವಾಗಿ ಕತ್ತಲೆ ಪಸರಿಸುತ್ತಿದ್ದಂತೆ ಅವರಿಗೂ ನಮಗೂ ಗುಂಡಿನ ಚಕಮಕಿ ನಡೆದು ಹಲವು ಸಾವು ನೋವು ಗಳುಂಟಾದವು. ಅಲ್ಲಿಂದ ನೆಟ್ಟಗೆ ಖಾನಾಪುರಕ್ಕೆ ಹೋಗಿ, ಸರಕಾರೀ ಕಚೇರಿ ಗಳನ್ನೂ ಚಾವಡಿಗಳನ್ನೂ ಸುಟ್ಟು ಬೂದಿ ಮಾಡಿ ಕಚೇರಿಯಲ್ಲಿ ಸಿಕ್ಕಿದ ಹಣ ದೋಚಿಕೊಂಡು ಸಮಶೇರಗಡಕ್ಕೆ ಹಿಂತಿರುಗಿ ಬಂದೆವು. ಆ ಹಣದಲ್ಲಿ ತನಗೂ ಅಷ್ಟು ಪಾಲು ಕೊಡಬೇಕೆಂದು ಬಂಡಾರಿ ಬಾಪು ಹಟಹಿಡಿದನಾದರೂ ನಾನು ಅವನನ್ನು ಗಮನಿಸಲಿಲ್ಲ. ಅವನು ಒಳಗೊಳಗೇ ಸಿಟ್ಟು, ಬೆಂಕಿಯಾಗಿ ತಳಮಳಿ ಸುತ್ತಿದ್ದುದು ನನಗೆ ಗೊತ್ತಿದ್ದಿತು. ಆದರೆ, ಸೈನ್ಯದಲ್ಲಿ ಶಿಸ್ತು ಉಳಿಸಿಕೊಂಡು ಹೋಗುವುದಿದ್ದುದರಿಂದ ನಾನು ಆತನ ಯಾವ ತಕರಾರಿಗೂ ಕಿವಿಗೊಡದೆ ಸುಮ್ಮನಿದ್ದುಬಿಟ್ಟೆ. ನನ್ನ ಹೆಸರನ್ನು ಮುಂದೆ ಮಾಡಿ ಹಳ್ಳಿಗಳನ್ನು ಕೊಳ್ಳೆ ಹೊಡೆದು ಹಣಮಾಡಿಕೊಳ್ಳುವ ಅವನ ಉದ್ದೇಶವನ್ನು ನಾನೆಂದೋ ಕಂಡು ಕೊಂಡಿದ್ದೆ. ಅದಕ್ಕೆ ಅವಕಾಶ ಸಿಕ್ಕುತ್ತಿರಲಿಲ್ಲವಾದ್ದರಿಂದ ಆತ ಚಡಪಡಿಸ ತೊಡಗಿದ್ದ. ತನ್ನ ಹತ್ತಿಪ್ಪತ್ತು ಜನ ಅನುಯಾಯಿಗಳೊಡನೆ ಅವನು ನನ್ನನ್ನು ಬಿಟ್ಟು ಹೋಗಿದ್ದರೂ ಅದರಿಂದ ನಮಗೇನೂ ನಷ್ಟವಾಗುವಂತಿರಲಿಲ್ಲ. ಶಿಸ್ತು

ಭಂಗ ಮಾಡಿ ಸೈನ್ಯದ ನೀತಿ ಕೆಡಿಸುವ ಆ ಜನರು ಹೊರಟುಹೋದರೆ ನಮಗೆ ಲಾಭವೇ ಆಗುವಂತಿತ್ತು.

ಆದರೆ, ಬಂಡಾರಿ ಬಾಪುವಿಗೆ ಹೊರಟು ಹೋಗುವ ಇಚ್ಛೆಯೂ ಇದ್ದಂತಿರಲಿಲ್ಲ. ಇಂಥ ದೊಡ್ಡ ಸೈನ್ಯದ ರಕ್ಷಣೆಯೂ ಸಹಾಯವೂ ಆವನಿಗೆ ಇನ್ನೆಲ್ಲಿ ಸಿಕ್ಕಲು ಸಾಧ್ಯ? ತನ್ನ ಇಪ್ಪತ್ತೇ ಜನರೊಡನೆ ಇದ್ದರೆ ಇಂಗ್ರೇಜರು ಆವನನ್ನು ಎಂದೋ ಹಿಡಿಯಬಹುದಾಗಿತ್ತು, ಅಥವಾ ಆವನು ಈ ಪ್ರದೇಶವನ್ನೇ ತ್ಯಜಿಸಿ ದೂರ ಎಲ್ಲಿಗಾದರೂ ಹೊರಟುಹೋಗಬೇಕಾದ ಪ್ರಸಂಗ ಬರುತ್ತಿತ್ತು. ನಮ್ಮ ಗುಂಪಿನ ಜೊತೆಗೇ ಇದ್ದು, ಯುಕ್ತಿ ಪ್ರಯುಕ್ತಿಗಳಿಂದ ನಮ್ಮ ಸೈನ್ಯದ ಅಧಿಕಾರವನ್ನೇ ವಶಪಡಿಸಿಕೊಳ್ಳುವ ಹಂಚಿಕೆಯೂ ಆವನಿಗಿದ್ದಿರಬಹುದು. ಸಂಧಿ ಸಾಧಿಸಿ ಆತ ನನಗೆ ಘಾತ ಮಾಡುವ ಸಂಭವವೂ ಇಲ್ಲದಿರಲಿಲ್ಲ. ಎಂತಲೇ, ನಾನು ಆವನನ್ನು ದೂರದಲ್ಲಿಯೇ ಇರಿಸಿ, ಆವನ ಬಗೆಗೂ ಎಚ್ಚರದಿಂದಲೇ ಇರುತ್ತಿದ್ದೆ.

ಇಟಗಿ-ಪಾರಿಶ್ವಾಡ – ಅಂಕಲಗಿ ಮೊದಲಾದ ಹಳ್ಳಿಗಳಿಗೆ ಹೋಗಿ ಅಲ್ಲಿಯ ರೈತರಿಂದ ಹಣ ವಸೂಲು ಮಾಡಿಕೊಂಡು ನಾವು ಹಡಲಗಿ ಎಂಬ ಹಳ್ಳಿಗೆ ಬಂದಾಗ ಬಂಡಾರಿ ಬಾಪುವಿಗೂ ನನಗೂ ಪ್ರತ್ಯಕ್ಷ ಜಗಳವೇ ಬಂದೊದಗಿತು.

ನಾನು ಅಲ್ಲಿಗೆ ಬರುವುದಕ್ಕೆ ಮೊದಲೇ ಬಂಡಾರಿ ಬಾಪು ತನ್ನ ಅನುಯಾಯಿಗಳ ಜೊತೆಗೆ ಆ ಊರಿನ ಮೇಲೆ ದಾಳಿ ನಡೆಸಿ ಹಳ್ಳಿಯ ಗುಡಿಸಲುಗಳಿಗೆಲ್ಲ ಬೆಂಕಿಯಿಟ್ಟಿದ್ದುದು ಗೊತ್ತಾಯಿತು. ಕೆಲವು ಚಿಕ್ಕಮಕ್ಕಳೂ ದನಕರುಗಳೂ ಆ ಅಗ್ನಿಗೆ ಆಹುತಿಯಾಗಿದ್ದುವು. ಯಾವ ಕಾರಣವೂ ಇಲ್ಲದೆ ಆ ಬಡಜನರ ಗುಡಿಸಲುಗಳನ್ನು ಸುಟ್ಟುಹಾಕಿದ್ದುದು ರಾಕ್ಷಸತನದ ಕೃತ್ಯವೇ ಆಗಿತ್ತು. ಬಂಡಾರಿ ಬಾಪುವನ್ನು ಹುಡುಕಿ ಕರೆದುಕೊಂಡು ಬರುವಂತೆ ಅಪ್ಪಣೆ ಕೊಟ್ಟು ಸೈನಿಕರನ್ನು ಕಳಿಸಿದೆ. ಬಾಪು ಇದ್ದರಲ್ಲವೇ ಅವರಿಗೆ ಸಿಕ್ಕುವುದು ? ನಾನು ಹಳ್ಳಿಗೆ ಬಂದ ಸುದ್ದಿ ತಿಳಿಯುತ್ತಲೂ ಆತ ಅಲ್ಲಿಂದ ಪಲಾಯನ ಹೇಳಿಸಿದ್ದುದು ಗೊತ್ತಾಯಿತು.

ನನ್ನ ಜೊತೆಯಲ್ಲಿದ್ದ ಸೈನಿಕರೂ ನಾನೂ ಕೂಡಿ ಹಳ್ಳಿಗರ ಗುಡಿಸಲುಗಳಿಗೆ ಹತ್ತಿದ್ದ ಬೆಂಕಿ ಆರಿಸಲು ಪ್ರಯತ್ನಿಸುತ್ತಿದ್ದಂತೆ ಮುಪ್ಪಿನ ಮುದುಕ

ನೊಬ್ಬ ಕೋಲೂರುತ್ತ ನನ್ನೆಡೆಗೆ ಬಂದು ಹುಬ್ಬಿಗೆ ಕೈಯಿಟ್ಟು ನನ್ನನ್ನು ದಿಟ್ಟಿಸುತ್ತ ವಿಚಾರಿಸಿದ.

"ರಾಯಣ್ಣ ಅಂದರೆ ನೀನೇ ಏನಪಾ?"

"ಹೌದಜ್ಜಾ."

"ನೀ ನನಗೆ ಮಗನ ಸಮಾನ ಆದೀ ರಾಯಣ್ಣಾ. ಕೆಂಪು ಮಾರಿಯ ಜನರನ್ನು ಓಡಿಸೋದಕ್ಕೆ ನೀ ದಂಡು ಕಟ್ಟಿದ್ದು ಕೇಳಿ ನನಗೂ ನಮ್ಮೂರ ವರಿಗೂ ಬಾಳ ಆನಂದ ಆಗಿತ್ತು. ನಮ್ಮೂರಿಗೆ ನಿನ್ನ ಕರಕೊಂಡು ಬಂದು ನಿನಗೆ ಹೋಳಿಗೀ ತುಪ್ಪಾ ಉಣಿಸಿ ಆರತೀ ಮಾಡಿ ಕಳಿಸಬೇಕಂತ ವಿಚಾರ ಮಾಡಿದ್ದಿವಿ. ಇಂಥಾ ನಮ್ಮ ಮ್ಯಾಲ ಒಮ್ಮಿಂದೊಮ್ಮೆಲೆ ದಾಳೀ ಮಾಡಿ ನಮ್ಮಲ್ಲಿ ಇದ್ದುಬಿದ್ದುದನ್ನು ಲೂಟಮಾಡಿ ನಮ್ಮ ಮಕ್ಕಳು ಮರಿಗಳನ್ನು ಕೊಂದು ನಮ್ಮ ಮನಿಗಳಿಗೆ ಬೆಂಕೀ ಹಚ್ಚುವಂಥಾ ಹೇಸಿ ಕೆಲಸ ನೀ ಮಾಡೀ ಅಂತ ನಾವ್ಯಾರೂ ತಿಳಿದಿರಲಿಲ್ಲ. ನೀ ಲಢಾಯಿ ಮಾಡ್ತಾ ಇರೋದು ಕೆಂಪು ಮಾರಿಯವರ ವಿರುದ್ಧನೋ ? ನಮ್ಮ ವಿರುದ್ಧನೋ ?"

ಆ ಮುದುಕ ಭಾವಪರವಶನಾಗಿ ಮಾತನಾಡುತ್ತಿದ್ದಂತೆ ಅವನ ಕೃಶವಾದ ದೇಹ ಒಂದೇಸಮನೆ ನಡುಗುತ್ತಿತ್ತು. ಅವನ ಅರೆಗುರುಡು ಕಣ್ಣುಗಳಿಂದ ಕಂಬನಿ ಹರಿಯುತ್ತಿತ್ತು. ಆತ ನನ್ನನ್ನು ಜರಿದು ಮಾತನಾಡುತ್ತಿದ್ದಂತೆ ನನ್ನ ಕಣ್ಣೂ ಹನಿಗೂಡಿತು. ಬಂಡಾರಿ ಬಾಪುವಿನ ಅಮಾನುಷ ಕೃತಿಯಿಂದ ನನ್ನ ಹೆಸರೂ ಕೆಡುತ್ತಿದ್ದುದು ಸ್ಪಷ್ಟವಾಗಿ, ನಾನು ಥಟ್ಟನೆ ಹೋಗಿ ಆ ವೃದ್ಧನನ್ನು ತಬ್ಬಿಕೊಂಡು ಸಂತವಿಸುವ ಸ್ವರದಲ್ಲಿ ಹೇಳಿದೆ:

"ಇದು ನಾನಾಗಲೀ, ನನ್ನ ಸೈನಿಕರಾಗಲಿ ಮಾಡಿದ ಕೆಲಸವಲ್ಲ ಅಜ್ಜಾ. ನನ್ನ ಹೆಸರು ಹೇಳಿಕೊಂಡು ರಾಕ್ಷಸನೊಬ್ಬ ಇಷ್ಟೆಲ್ಲಾ ಅನರ್ಥ ಮಾಡಿದ್ದಾನೆ. ಅವನನ್ನು ಈಗಿಂದೀಗ ಹಿಡಿದು ತಂದು ನಿಮ್ಮ ಊರಲ್ಲಿಯೇ ಅವನಿಗೆ ತಕ್ಕ ಶಿಕ್ಷೆ ಕೊಡ್ತೀನಿ."

ಅಷ್ಟು ಹೇಳಿ, ಅವನಿಗೆ ಕೆಲವು ರೂಪಾಯಿ ಕೊಟ್ಟು ಸಮಾಧಾನ ಮಾಡಿ, ತಕ್ಷಣ ಕುದುರೆ ಏರಿ ಬಂಡಾರಿ ಬಾಪುವನ್ನು ಹುಡುಕಿಕೊಂಡು ಹೊರಟೆ. ಅಲ್ಲಿ ಇಲ್ಲಿ ವಿಚಾರಿಸಿದಾಗ ಆತ ನಂದಗಡದ ಕಡೆಗೆ ಹೋದನೆಂದು ತಿಳಿಯಿತು. ಒತ್ತರದಿಂದ ನಡೆಯುತ್ತ ನಾವೂ ನಂದಗಡಕ್ಕೆ ಬಂದೆವು. ಬಾಪು

ಅಲ್ಲಿಗೇ ಬಂದಿದ್ದ. ಅಲ್ಲಿಯೂ ಒಂದು ಸಣ್ಣ ಪ್ರಳಯವನ್ನೇ ಉಂಟು ಮಾಡಿದ್ದ. ಅನೇಕ ಜನ ಸಂಭಾವಿತರ ಮನೆಗಳಿಗೆ ನುಗ್ಗಿ ಅವರನ್ನು ಹೊಡೆದು ಬಡೆದು ಪೀಡಿಸಿ ವಸ್ತು ಒಡವೆಗಳನ್ನು ದೋಚಿಕೊಂಡಿದ್ದ. "ಕಿತ್ತೂರ ದೊರೆಗೆ ಜೈ!" "ಸಂಗೊಳ್ಳಿ ರಾಯನಾಯಕನಿಗೆ ಜೈ" ಎಂದು ಘೋಷಿಸುತ್ತಲೇ ಆತ ಇಂಥ ಕೆಲಸ ಮಾಡುತ್ತಿದ್ದನೆಂದೂ ಗೊತ್ತಾಯಿತು.

ನಾನು ಚಾವಡಿಯಲ್ಲಿ ಪ್ರವೇಶಿಸುತ್ತಿದ್ದಂತೆಯೇ ಅತ್ತಕಡೆಯಿಂದ ಬಾಪುವೂ ಬಂದ. ಅವನ ಕಣ್ಣುಗಳೆರಡೂ ಕೆಂಡದಂತಾಗಿದ್ದುವು. ಆತ ಸಾಕಷ್ಟು ಮದ್ಯ ಸೇವಿಸಿದ್ದುದು ಸ್ಪಷ್ಟವಾಗಿತ್ತು.

"ಯಾವಾಗ ಬಂದಿ ರಾಯಣ್ಣಾ?" ಎಂದು, ಸಹಜ ಸ್ವರದಲ್ಲಿಯೇ ಆತ ವಿಚಾರಿಸಿದ.

"ನಿನ್ನ ಬೆನ್ನ ಹಿಂದೇ ಬಂದೆ. ನನಗ ಗೊತ್ತಾಗದಂತೆ, ನನ್ನ ಅಪ್ಪಣೆ ಇಲ್ಲದೆ ನೀ ಏನೇನು ನಡೆಸಿದ್ದೀ ಬಾಪೂ ? ಹಡಲಗಿಯಲ್ಲಿ ಏನು ಮಾಡಿದಿ ? ಇಲ್ಲಿ ಏನು ನಡೆಸಿದ್ದೀ ?"

"ನನ್ನ ಮನಸ್ಸಿಗೆ ಬಂದದ್ದು ಮಾಡ್ತೀನಿ. ನಿನ್ನಂಥವರ ಅಪ್ಪಣೆ ಯಾತಕ್ಕೆ ಬೇಕು ?" ಎಂದು ಒರಟಾಗಿಯೇ ಉತ್ತರವಿತ್ತ ಬಾಪು.

ಆಗಿಂದಾಗಲೇ ಅವನನ್ನು ಕತ್ತಿಯಿಂದ ತುಂಡರಿಸಿ ಚೆಲ್ಲಬಹುದಾಗಿತ್ತು. ಆದರೆ, ಅಷ್ಟು ಅವಸರದ ಕ್ರಮ ಸರಿಯಲ್ಲವೆನಿಸಿದ್ದರಿಂದ ನಾನು ಸಿಟ್ಟು ತಡೆದು ಕೊಂಡು ಅವನಿಗೆ ಬುದ್ಧಿವಾದ ಹೇಳುತ್ತಿದ್ದಂತೆಯೇ ಬ್ರಾಹ್ಮಣರ ಹೆಣ್ಣುಮಗ ಳೊಬ್ಬಳು ತನ್ನ ಕೂಸನ್ನು ಎದೆಗವಚಿಕೊಂಡು ಅಳುತ್ತಳುತ್ತ ಬಂದಳು. ನಾನೇ ರಾಯಣ್ಣ ಎಂಬುದನ್ನು ಆಕೆಗೆ ಯಾರೋ ತಿಳಿಸಿರಬೇಕು. ಆಕೆ ಬಂದವಳೇ ನನ್ನ ಕಾಲು ಹಿಡಿದುಕೊಂಡು, ತನ್ನ ಕೂಸನ್ನೂ ನನ್ನ ಕಾಲುಗಳ ಮೇಲೆ ಹಾಕಿ ಬಿಕ್ಕುತ್ತ ಬಿಕ್ಕುತ್ತ ಹೇಳಿದಳು :

"ನೀ ನನಗ ಅಣ್ಣನ ಸಮಾನ ರಾಯಣ್ಣಾ. ನಿನಗೆ ಶರಣು ಬಂದೀನಿ. ನನ್ನ ಮಂಗಲಸೂತ್ರ ಉಳಿಸಿ ಪುಣ್ಯ ಕಟ್ಟಿಕೋ."

ಆ ತಂಗಿಯನ್ನು ಮೇಲಕ್ಕೆಬ್ಬಿಸಿ ಸಮಾಧಾನಗೊಳಿಸುತ್ತ ನಾನು ಕೇಳಿದೆ:

"ಯಾಕೆ ತಾಯಿ ? ಆದದ್ದಾದರೂ ಏನು ?"

"ನಮ್ಮ ಮನೆಯವರನ್ನು ಇವ ಹೊಡೆದುಬಡಿದು ಎಳಕೊಂಡು ಹೋಗಿ

ದ್ದಾನೆ. ಅವರೇನು ನಿನಗೆ ಅಪಕಾರ ಮಾಡ್ಯಾರ ರಾಯಣ್ಣಾ? ಸುಮ್ಮನೆ ನಮ್ಮಂಥವರನ್ನು ಯಾಕೆ ಕಾಡ್ತೀರಿ?"

"ಹೌದೇನೋ ಬಾಪು? ಈ ಹೆಣ್ಣುಮಗಳ ಗಂಡನ್ನ ಹಿಡಿದಿದ್ದೀಯಾ?" ಎಂದು ಕೇಳಿದೆ.

"ಹೌದು. ಹಿಡಿದೀನಿ.", ಎಂದು ಉದ್ಧಟ ಸ್ವರದಲ್ಲಿಯೇ ಆತ ಉತ್ತರ ವಿತ್ತ.

"ಯಾಕೆ? ಅವರೇನು ತಪ್ಪು ಮಾಡ್ಯಾರ?"

"ಅವ ನನ್ನ ಪರಮವೈರಿ. ಹಿಂದೆ ನಾಲ್ಕೈದು ಸಲ ನನ್ನ ವಿರುದ್ಧ ಸರಕಾರಕ್ಕೆ ದೂರು ಕೊಟ್ಟಾನ, ಈಗ ಅವ ನನ್ನ ಕೈಯಾಗ ಸಿಕ್ಕಾನ. ನಾನು ಅವನ್ನ ಬಿಡೂದಿಲ್ಲ."

"ಹಾಗೆಲ್ಲಾ ಮಾಡಬಾರದು ಬಾಪೂ. ಅದರಿಂದ ನಮ್ಮ ಹೆಸರು ಕೆಡುತೈತಿ. ಕೆಲಸ ಕೆಡುತೈತಿ. ಈ ಹೆಣ್ಣುಮಗಳ ಗಂಡನ್ನ ಬಿಟ್ಟುಬಿಡು. ಎಲ್ಲಿಟ್ಟಿದ್ದೀ ಅವನ್ನ?"

"ನಮ್ಮ ಜನರು ಅವನ್ನ ಎಲ್ಲಿಟ್ಟಾರೋ ನೋಡಿ ಬರ್ತೀನಿ." ಎಂದು ಹೇಳಿ ನಾನು ತಡೆಯುತ್ತಿದ್ದರೂ ಲೆಕ್ಕಿಸದೆ ಆತ ಹೊರಟುಹೋದ.

ಮತ್ತೆ ತಾಸೆರಡು ತಾಸು ನಾವು ಹುಡುಕಿದರೂ ಬಾಪು ಸಿಕ್ಕಲಿಲ್ಲ. ಸಂಜೆಯಾಗುತ್ತಿದ್ದಂತೆ ಆ ಬ್ರಾಹ್ಮಣ ಹೆಣ್ಣುಮಗಳು ಮತ್ತೆ ನನ್ನ ಹತ್ತಿರ ಬಂದು ಬಾಪು ತನ್ನ ಗಂಡನನ್ನು ಕೊಂದು ಹಾಕಿದನೆಂದು ತಿಳಿಸಿದಳು.

"ರಾಕ್ಷಸ ಅನ್ಯಾಯ ಮಾಡಿದ. ನಿನಗೇ ಗೊತ್ತಿರುವಂತೆ ನಾ ಬ್ಯಾಡ ಬ್ಯಾಡಂದರೂ ಮಾಡಿದ. ನಮ್ಮನ್ನ ಕ್ಷಮಾ ಮಾಡು ತಾಯೀ," ಎನ್ನುತ್ತ ಆಕೆಯ ಪಾದ ಹಿಡಿದುಕೊಂಡೆ. ನನ್ನ ಕೈಗಳನ್ನು ಕೊಸರಿಕೊಂಡು ಆಕೆ ಹುಚ್ಚಿಯಂತೆ ಆಕ್ರೋಶ ಮಾಡುತ್ತ, "ನಿಮ್ಮೆಲ್ಲರ ಮನೀ ಮಾರು ಹಾಳಾಗಲಿ. ವಂಶ ನಿರ್ವಂಶವಾಗಲಿ. ನೀವೆಲ್ಲಾ ಗಲ್ಲಿಗೇರುವುದನ್ನು ಈ ಕಣ್ಣಿಂದಲೇ ನೋಡ್ತೀನಿ" ಎಂದು ಶಪಿಸಿ, ನನ್ನ ಮೇಲೆ ಹಿಡಿ ಮಣ್ಣು ತೂರಿ ಹೊರಟು ಹೋದಳು.

ಆಕೆಯ ಸಂತಾಪದ ನುಡಿಗಳು ಎದೆಗೆ ನಟ್ಟಂತಾಗಿ ನಾನು ಕೆಲಕಾಲ ಸ್ತಂಭಿತನಂತೆ ನಿಂತಿದ್ದೆ. ಬ್ರಾಹ್ಮಣ ಹೆಣ್ಣುಮಗಳ ಶಾಪ ಸುಳ್ಳಾಗುವುದಿಲ್ಲ

ನೆನ್ನುತ್ತಾರೆ. ಆ ನೀಚ ಬಾಪು ಇದೆಂಥ ಪ್ರಸಂಗ ತಂದಿಟ್ಟ ?

ಮತ್ತೆ ನನ್ನನ್ನು ನಾನೇ ಸೈರಿಸಿಕೊಂಡು ಬಾಪುವನ್ನು ಕೂಡಲೇ ಬಂಧಿಸಬೇಕೆಂದೂ, ಆತ ಪ್ರತಿಭಟಿಸಿದರೆ ಹೊಡೆದು ಕೊಲ್ಲಬೇಕೆಂದೂ ಅಪ್ಪಣೆ ಮಾಡಿದೆ.

ಕಿತ್ತೂರಿನ ಸಂಗಣ್ಣ, ಬೆಳವಡಿಯ ರುದ್ರನಾಯಕ, ದಿಡ್ಡೀಮನಿ ಭೀಮ ಮೊದಲಾದ ಬಂಟರು ಹೋಗಿ ಅವನನ್ನು ಹಿಡಿದರು. ಆತ ತನ್ನ ಖಡ್ಗ ಹಿರಿದು ಸಂಗಣ್ಣನನ್ನು ಗಾಯಗೊಳಿಸಿದ. ಅಷ್ಟರಲ್ಲಿಯೇ ಮುಸ್ಯಾ ಘೋರ ತನ್ನ ದೊಣ್ಣೆ ಬೀಸಿ ಅವನ ಖಡ್ಗವನ್ನು ನೆಲಕ್ಕೆ ಕೆಡವಿದ. ಅನಂತರ ಎಲ್ಲರೂ ಸೇರಿ ಅವನನ್ನು ಕೊಂದರು. ತಂದೆಯನ್ನುಳಿಸಿಕೊಳ್ಳಲು ಬಂದ ಬಾಪುವಿನ ಮಗನಿಗೂ ಅದೇ ಗತಿಯಾಯಿತು. ಬಾಪುವಿನ ಒಬ್ಬ ಅನುಯಾಯಿಯೂ ಆಗ ಪ್ರಾಣಕ್ಕೆರವಾದ. ಅವರಿಗೆ ಮಣ್ಣು ಕೊಡಲು ತಿಳಿಸಿ, ನಾನು ಅಲ್ಲಿ ನಿಲ್ಲದೆ ಸಮಶೇರಗಡಕ್ಕೆ ಹೊರಟು ಬಂದೆ.

ಆ ರಾತ್ರಿ ನನಗೆ ನಿದ್ರೆ ಬರಲಿಲ್ಲ. ಕಣ್ಣುಗಳೆದುರು ಆ ಸಂತಪ್ತ ಮುಖಮುದ್ರೆಯ ಬ್ರಾಹ್ಮಣಿಯ ಆಕೃತಿ....ಕಿವಿಗಳಲ್ಲಿ ಆಕೆಯ ಶಾಪ.... "ನೀವು ಗಲ್ಲಿಗೇರುವುದನ್ನ ಈ ಕಣ್ಣುಗಳಿಂದಲೇ ನೋಡ್ತೀನಿ !"

ಗಲ್ಲು !

ನನ್ನ ಮೈ ಜುಮ್ಮೆಂದಿತು-

# ಬಿಚ್ಚುಗತ್ತಿ ಚೆನ್ನಬಸಪ್ಪ

ನಾನು ಹಂಡೀಬಡಗನಾಥ ಗುಡ್ಡದಲ್ಲಿದ್ದಾಗ ಬಾಪೂ ಬಂಡಾರಿಯ ಕೊಲೆಯ ಸುದ್ದಿ ತಿಳಿಯಿತು. ಆ ಕೆಟ್ಟ ಹುಳು ಇಲ್ಲವಾದುದರಿಂದ ನನಗೆ ಸಮಾಧಾನವೇ ಆಯಿತು. ಆದರೆ, ಅದರ ಜೊತೆಯಲ್ಲಿಯೇ ಒಂದು ವಿವಂಚನೆಗೂ ಆರಂಭವಾಯಿತು. ಅನೇಕ ವರ್ಷಗಳಿಂದ ಅವನ ಜೊತೆಗಿದ್ದ ಹತ್ತು ಹದಿನೈದು ಮಂದಿ ದರೋಡೆಗಾರರು ಇನ್ನೂ ಉಳಿದಿದ್ದರು. ತಮ್ಮ ಒಡೆಯನ ಕೊಲೆಯ ಸೇಡು ತೀರಿಸಿಕೊಳ್ಳಲು ಅವರು ಹಾತೊರೆಯುವ ಸಂಭವವೂ ಇತ್ತು. ಇನ್ನು ರಾಯಣ್ಣ ಬಹಳ ಎಚ್ಚರಿಕೆಯಿಂದಲೇ ಇರಬೇಕಾಗುತ್ತದೆ. ಒಂದುಕಡೆ ಇಂಗ್ರೇಜರನ್ನು ತಪ್ಪಿಸಬೇಕು; ಇನ್ನೊಂದು ಕಡೆ, ನಮ್ಮ ದಂಡಿನಲ್ಲಿಯೇ ಇರುವ ಬಂಡಾರಿ ಬಾಪೂವಿನ ಜನರಿಂದ ಹುಷಾರಾಗಿರಬೇಕು.

ನನ್ನ ಪಥಕದ ನಾಯಕತ್ವವನ್ನು ನನ್ನ ಕೈಕೆಳಗಿನ ಅಧಿಕಾರಿಯಾದ ಬಾಳನಾಯಕನಿಗೆ ವಹಿಸಿಕೊಟ್ಟು ನಾನು ಆಗಿಂದಾಗ ಸಮಶೇರಗಡಕ್ಕೆ ಹೋಗಿ ರಾಯಣ್ಣನನ್ನು ಕಂಡೆ. ನನ್ನ ದಂಡನ್ನು ಬಿಟ್ಟು ನಾನು ಏಕಾಏಕಿ ಅಲ್ಲಿಗೆ ಬಂದುದು ಅವನಿಗೆ ಸರಿಬಂದಂತೆ ಕಾಣಿಸಲಿಲ್ಲ. ಅವನ ಹುಬ್ಬು ಗಂಟಿಕ್ಕಿಕೊಂಡವು, ಅಷ್ಟೆ. ಅನಂತರ ಅವನ ಮುನಿಸು ಜರ್‍ರನೆ ಇಳಿದು ಹೋಯಿತು.

ಇಬ್ಬರೂ ಕೂಡಿಕೊಂಡೇ ಊಟಕ್ಕೆ ಕುಳಿತೆವು. ನಂದಗಡದಲ್ಲಿ ನಡೆದ ಘಟನೆಗಳ ಬಗೆಗೆ ರಾಯಣ್ಣ ವಿವರಿಸಿದ. ಮುಂದಿನ ಕಾರ್ಯದ ಬಗೆಗೆ ಮಾತನಾಡಿದೆವು. ನಾನು ಹೇಳಿದೆ :

"ಇನ್ನ ಮ್ಯಾಲ ನೀ ಬಹಳ ಹುಷಾರಿಯಿಂದಿರಬೇಕು ರಾಯಣ್ಣಾ. ಬಾಪೂವಿನ ಜನರು ನಿನಗೆ ಘಾತ ಮಾಡಲೂ ಹೇಸುವವರಲ್ಲ."

"ನನಗೆ ಇದನ್ನು ತಿಳಿಸೂದಕ್ಕೇ ನೀ ಓಡಿ ಬಂದಿರಬೇಕು ಇಲ್ಲಿಯ ತನಕ ?" ರಾಯಣ್ಣ ನಗುನಗುತ್ತ ಕೇಳಿದ.

"ಅಲ್ಲಿ ನನ್ನ ಜೀವ ತಡೀಲಿಲ್ಲಪಾ. ನೀನಂತೂ ನಿರ್ಲಕ್ಷ್ಯದ ಸ್ವಭಾವದವ ಅನ್ನೂದು ನನಗೆ ಗೊತ್ತೇ ಐತಲ್ಲ? ಆ ಮಂದೀನ್ನ ಇನ್ನ ನಂಬುವ ಹಂಗಿಲ್ಲ. ಅವರನ್ನು ದಂಡಿನಿಂದ ಹೊರಗೆ ಹಾಕಿಬಿಟ್ಟರಂತೂ ಬಹಳ

ಚಲೋನs!" ಎಂದೆ.

"ಹಂಗ ಒಮ್ಮಿಂದೊಮ್ಮೆಲೆ ಹೊರಗೆ ಹಾಕುದಕ್ಕೊ ಬರೂದಿಲ್ಲ ಚೆನಬಸೂ. ನೂರುಮಂದಿಯ ಸಂಗಡ ನೂರಾಹತ್ತು ಆಗಿ ಅವರೂ ಇರಲೊಲ್ಲರ್‍ಯಾಕೆ? ಅವರ ಮ್ಯಾಲ ಯಾವಾಗಲೂ ಒಂದು ಕಣ್ಣಿಟ್ಟಿರಬೇಕಂತ ನಮ್ಮ ಗೂಢಚಾರರಿಗೆ ತಿಳಿಸಿಟ್ಟೇನಿ."

"ನೀನೂ ಒಬ್ಬನs ಮೈಮರೆತು ಅತ್ತಿತ್ತ ತಿರುಗಾಡಬ್ಯಾಡ."

"ಊಹೂಂ. ಹಂಗ್ಯಾಕ ಮಾಡಲಿ? ಆದರೂ....ಅಷ್ಟು ಅಂಜಿಕೊಂಡು ಇರೂದಂದರ ನನಗೆ ಶಕ್ಯನs ಇಲ್ಲ. ನಿನಗೂ ಗೊತ್ತೇ ಐತಿ."

"ಅದೇನೋ ಖರೇ. ನೀ ಎಲ್ಲಿಗೆ ಹೊರಟರೂ ಐದು ಮಂದಿ ಜೀವಕ್ಕೆ ಜೀವ ಕೊಡುವ ಮೈಗಾವಲ ಜನರಿದ್ದರ ಚಲೋದು. ನಾನs ಅದರ ವ್ಯವಸ್ಥಾ ಮಾಡ್ತೀನಿ. ಹಂಡೀಬಡಗನಾಥದಾಗಿನ ದಂಡು ಬಾಳನಾಯಕ ನೋಡಿಕೊಂತಾನ. ನಾನಿರ್ತೀನಿ ಇಲ್ಲೇ-ನಿನ್ನ ಸಂಗಾತ."

ರಾಯಣ್ಣ ಬೇಡವೆನ್ನಲಿಲ್ಲ. ಸ್ನೇಹದಿಂದ ನನ್ನನ್ನು ಅಪ್ಪಿಕೊಂಡು ಸಮ್ಮತಿ ಸೂಚಿಸಿದ.

ಸಂಪಗಾವಿಯ ಅಮಲ್ದಾರ್ ಕೃಷ್ಣರಾಯನು ನಮ್ಮನ್ನು ಹಿಡಿಯಲು ವೀಳಯ ಸ್ವೀಕರಿಸಿ, ಇಂಗ್ರೇಜ ಸೈನಿಕರನ್ನೂ ದೇಶೀ ಸೈನಿಕರನ್ನೂ ಕಟ್ಟಿಕೊಂಡು ನಂದಗಡದ ಕಡೆಗೆ ಬರುತ್ತಿದ್ದ ವಾರ್ತೆ ತಿಳಿಯುತ್ತಲೂ ನಾವು ಸಮಶೇರಗಡದ ಬಿಡಾರ ಎಬ್ಬಿಸಿ, ರಾತ್ರಿಯಿಡೀ ಪಯಣ ಮಾಡಿ ಬೆಳಗಾಗುವುದರೊಳಗಾಗಿ ಸಂಪಗಾವಿಗೆ ಬಂದು ಮುಟ್ಟಿದೆವು. ಅತ್ತ ಸಮಶೇರಗಡದಲ್ಲಿ ಕೃಷ್ಣರಾಯನು ನಮ್ಮನ್ನು ಹುಡುಕುತ್ತಿದ್ದರೆ ನಾವು ಇಲ್ಲಿ ಅವನ ಕಚೇರಿಯ ಊರಲ್ಲಿಯೇ ಬಂದು ಬೀಡು ಬಿಟ್ಟಿದ್ದೆವು. ಆಗ ನಮ್ಮ ದಂಡಿನಲ್ಲಿ ನಾಲ್ಕು ನೂರು ಜನ ಸೈನಿಕರಿದ್ದರು, ಆರು ಕುದುರೆಗಳಿದ್ದವು. ಕತ್ತಿ-ಕಠಾರಿ-ಭಾಲೆ-ಬಂದೂಕು ಯಾವುದಕ್ಕೂ ಏನೂ ಕೊರತೆಯಿರಲಿಲ್ಲ.

ಊರಿನ ಅಗಸೆಗಳಿಗೆಲ್ಲ ಜನರನ್ನು ಕಾವಲಿಟ್ಟು ನಾವು ತಾಲೂಕು ಕಚೇರಿಗೆ ನಡೆದೆವು. ಕಚೇರಿಯನ್ನು ಕಾಯುತ್ತಿದ್ದ ಹಳಬರು ನಮ್ಮನ್ನು ನೋಡುತ್ತಲೂ ಓಡಿಹೋದರು. ಕೆಲವು ತಿಂಗಳುಗಳ ಹಿಂದೆ ತಾನು ಸೆರೆಯಲ್ಲಿದ್ದ ಕಟಾಂಜನವನ್ನು ನೋಡುತ್ತಲೂ ರಾಯಣ್ಣನ ಕಣ್ಣಿನಲ್ಲಿ

ನೀರೂರಿತು. ಆ ಕಟಾಂಜನವನ್ನೇ ಕಿತ್ತು ಮುರಿದು ಹಾಕಿ ಕುರ್ಚಿ ಮೇಜುಗಳನ್ನು ಚೂರು ಚೂರು ಮಾಡಿ, ಕಚೇರಿಯ ಕಾಗದ ಪತ್ರಗಳನ್ನೆಲ್ಲ ಹರಿದು ನಾಶಗೊಳಿಸಿ ಅನಂತರ ಆ ಕಟ್ಟಡಕ್ಕೆ ಬೆಂಕಿ ಹಚ್ಚಿದೆವು.

ಅಲ್ಲಿ ನಮಗೆ ಹಣವೇನೂ ಸಿಕ್ಕಲಿಲ್ಲ. ಅದನ್ನು ಆಗಲೇ ಬೇರೆಡೆಗೆ ಸಾಗಿಸಲಾಗಿತ್ತು.

ಒಬ್ಬ ತಳವಾರನನ್ನು ಹಿಡಿದು ವಿಚಾರಿಸಿದಾಗ ನಡೆದುದೇನೆಂಬುದು ಗೊತ್ತಾಯಿತು. ಸಂಪಗಾವಿಯ ಮೇಲೆ ನಾವು ದಾಳಿ ಮಾಡಬಹುದೆಂಬುದನ್ನು ಮೊದಲೇ ಊಹಿಸಿಕೊಂಡಿದ್ದ ಅಮಲ್ದಾರ್ ಕೃಷ್ಣರಾಯನು ಖಜಾನೆಯನ್ನು ಕಚೇರಿಯಿಂದ ಸ್ಥಳಾಂತರಿಸಿ, ಮಸೀದಿಯ ಗುಮ್ಮಟದಲ್ಲಿ ಅಡಗಿಸಿಟ್ಟಿದ್ದನಂತೆ. ಎಂಟು ಹತ್ತು ಜನ ಸಿಪಾಯಿಗಳು ಅದನ್ನು ಹಗಲಿರುಳೂ ಕಾಯುತ್ತಿದ್ದರಂತೆ. ಅವರಿಗೆ ಅಗತ್ಯವಿದ್ದ ಅನ್ನ-ನೀರು ಅವರು ಇದ್ದಲ್ಲಿಯೇ ಸಿಕ್ಕುವ ವ್ಯವಸ್ಥೆಯಾಗಿದ್ದಿತಂತೆ.

ಆ ಸುದ್ದಿ ಕೇಳಿ ರಾಯಣ್ಣ ಉಪಹಾಸದಿಂದ ನಕ್ಕ.

"ಮಸೀದಿಯ ಮ್ಯಾಲಿಡಲಿ, ಅಥವಾ ಆಕಾಶದಾಗಿಡಲಿ. ನಮ್ಮ ಕೈಬಿಟ್ಟು ಎಲ್ಲಿ ಹೋಗತೈತಿ ಖಜಾನೆ ?"

ಕಚೇರಿಯಿಂದ ನಾವು ನೆಟ್ಟಗೆ ಮಸೀದಿಯ ಕಡೆಗೇ ಹೋಗಬಹುದೆಂದು ಭಾವಿಸಿ ಅಲ್ಲಿ ರಕ್ಷಣೆಯ ವ್ಯವಸ್ಥೆ ಬಿಗಿಗೊಳಿಸಿದ್ದರಂತೆ. ಪೇಷ್ಕಾರ್ ರಾಮರಾವ್, ಜಿಲ್ಲಾದಾರ್ ಕೃಷ್ಣಪ್ಪ, ತಾಲ್ಲೂಕ್ ಮುನಸಿ ಮತ್ತು ಮುತ್ಸದ್ದಿಗಳು ಮತ್ತಷ್ಟು ಜನ ಸಿಪಾಯಿಗಳನ್ನು ಕರೆದುಕೊಂಡು ಮಸೀದಿಯ ತುದಿಗೇರಿ ಕುಳಿತಿದ್ದರಂತೆ. ಮಸೀದಿಯ ಮೇಲೆ ದಾಳಿ ನಡೆಸುವವರನ್ನು ಗುಂಡಿಟ್ಟು ಕೊಲ್ಲುವ ತಯಾರಿ ನಡೆದಿದ್ದುದಂತೂ ಸ್ಪಷ್ಟವಾಗಿತ್ತು.

ನಾವು ಒಡನೆಯೇ ಅತ್ತ ಹೋಗದೆ ಮೊದಲು ಅಮಲ್ದಾರ್ ಕೃಷ್ಣರಾಯನ ಮನೆಗೆ ಹೋಗಿ, ಮನೆಯಲ್ಲಿದ್ದ ಹೆಂಗಸರು, ಮಕ್ಕಳನ್ನೆಲ್ಲ ಹೊರಗೆ ಸಾಗಿಸಿ, ಕಟ್ಟಡಕ್ಕೆ ಬೆಂಕಿ ಹಚ್ಚಿದೆವು. ಇನ್ನಿತರ ಸಣ್ಣ-ಪುಟ್ಟ ಅಧಿಕಾರಿಗಳ ಮನೆಗಳಿಗೂ ಅದೇ ಗತಿಯಾಯಿತು.

ಇದೆಲ್ಲ ಮುಗಿಯಬೇಕಾದರೆ ಮಧ್ಯಾಹ್ನವಾಗಿತ್ತು. ನಾವು ನಮ್ಮ ಜನರನ್ನೆಲ್ಲ ಕಲೆಹಾಕಿಕೊಂಡು ಮಸೀದಿಯ ಮೇಲೆ ದಾಳಿ ಮಾಡಲು ಹೊರಟ

ದ್ದಂತೆಯೇ ಮುಗುಟಖಾನಹುಬ್ಬಳ್ಳಿಯ ಕಡೆಯಿಂದ ಕೃಷ್ಣರಾಯನ ದಂಡು ಬರುತ್ತಿದ್ದ ಸುದ್ದಿ ತಿಳಿಯಿತು.

"ನಾವು ಸಂಪಗಾವಿಗೆ ಮುತ್ತಿಗೆ ಹಾಕಿದ ಸಂಗತಿ ಅವಗೆ ಗೂಢಚಾರರಿಂದ ತಿಳಿದಿರಬೇಕು. ಅಂತಲೇ ಇತ್ತ ಓಡಿ ಬರ್‍ತಿರಬೇಕು," ಎಂದೆ ನಾನು,

"ಬರಲಿ, ಬರಲಿ, ಒಂದು ಕೈ ನೋಡಿ ಬಿಡೋಣ," ಎಂದ ರಾಯಣ್ಣ.

ನಮ್ಮ ಸೈನಿಕರನ್ನೆಲ್ಲ ಶಿಸ್ತಿನಿಂದ ನಿಲ್ಲಿಸಿ, ಬಂದೂಕಗಳಿಗೆ ಮದ್ದು ಜಡಿದು, ಕೃಷ್ಣರಾಯನ ಸಿಪಾಯಿಗಳನ್ನೆದುರಿಸಲು ಸಜ್ಜಾಗಿ ನಿಂತುಕೊಂಡೆವು. ಸಂಪಗಾವಿಯ ಹೊರಭಾಗದಲ್ಲಿ ಮಸೀದಿಯ ಸಮೀಪದಲ್ಲಿಯೇ ಇರುವ ದೊಡ್ಡ ಬಾವಿಯ ಹತ್ತಿರ ನಮ್ಮ ದಂಡು ನಿಂತಿತ್ತು. ಬಾವಿಯ ಗೋಡೆಗಳ ಹಿಂದೆ ಅನೇಕ ಸೈನಿಕರನ್ನು ಕೂಡ್ರಿಸಿ, ವೈರಿಗಳು ಕಾಣಿಸಿಕೊಳ್ಳುತ್ತಲೂ ಗುಂಡು ಹಾರಿಸುವಂತೆ ತಿಳಿಸಲಾಗಿತ್ತು. ಸ್ವಲ್ಪ ಹೊತ್ತಿನಲ್ಲಿಯೇ ಕುದುರೆಗಳ ಖುರಪುಟಗಳ ಧ್ವನಿ ಕೇಳಬರತೊಡಗಿತು. ರಾಯಣ್ಣನೂ ನಾನೂ ಗಜವೀರನೂ ನಮ್ಮ ಸೈನ್ಯದ ಮುಂಭಾಗದಲ್ಲಿ ನಿಂತುಕೊಂಡು ಕೃಷ್ಣರಾಯ ಬರುವುದನ್ನೇ ಕಾಯುತ್ತಲಿದ್ದೆವು. ಗುಂಡಿನ ಮಳೆಗರೆಯುತ್ತ ಅವನ ದಂಡು ಬಂತು. ಆದರೆ ಕೃಷ್ಣರಾಯ ಮಾತ್ರ ಎಲ್ಲಿಯೂ ಕಾಣಿಸಲಿಲ್ಲ.

"ಸಿಪಾಯಿಗಳನ್ನು ಮುಂದೆ ಹಾಕಿ ತಾ ಮಾತ್ರ ಹೆಣ್ಣಾಳ್ಯಾನಂಗ ಹಿಂದೆ ಅಡಗಿಕೊಳ್ಳುವ ಹೇಡಿ!" ಎಂದು ಆತನನ್ನು ಹಳಿದು, ಗಜವೀರ ಹುರುಪಿನಿಂದ ಮುನ್ನುಗ್ಗಿ ವೈರಿಗಳನ್ನು ಕೊಚ್ಚಿಹಾಕತೊಡಗಿದ. ಬಾವಿಯ ಮರೆಯಲ್ಲಿ ನಿಂತ ನಮ್ಮ ಸೈನಿಕರ ಕೋವಿಗಳೂ ಬೆಂಕಿ ಕಾರತೊಡಗಿದ್ದವು. ರಾಯಣ್ಣನ ಹಾಗು ನನ್ನ ಖಡ್ಗಗಳು ಶತ್ರುಗಳ ರುಂಡ ಕೊಯ್ಯತೊಡಗಿದ್ದವು. ನಮ್ಮ ಕಡೆಗೂ ಅನೇಕರು ನೆಲಕ್ಕುರುಳಿದರು. ಖಡ್ಗಗಳ ಹಾಕಲಾಟದಿಂದೆದ್ದ ಟಣತ್ಕಾರ ಸುತ್ತಲಿನ ಪ್ರದೇಶದಲ್ಲೆಲ್ಲ ದುಮುದುಮಿಸುತ್ತಿತ್ತು. ವೈರಿಗಳ ಶೌರ್ಯ ಮುಗಿಯುತ್ತ ಬಂದಿದ್ದಂತೆಯೇ ಹಿಂಭಾಗದಲ್ಲಿದ್ದ ಅಮಲ್ದಾರ್ ಕೃಷ್ಣರಾಯ ನಮ್ಮ ಕಣ್ಣಿಗೆ ಬಿದ್ದ. ಬಯಲಾಟದ ರಾಜನಂತೆ ಕೈಯಲ್ಲಿ ಕತ್ತಿ ಹಿಡಿದುಕೊಂಡು, ಕುದುರೆಯ ಮೇಲೆ ಕುಳಿತು, ಸಿಪಾಯಿಗಳಿಗೆ ಹುಕುಂ ಕೊಡುತ್ತಿದ್ದ ಆ ಅಮಲ್ದಾರನನ್ನು ಮುಗಿಸಿಬಿಡಲೆಂದು ನಾನು ಬಾಣದಂತೆ ಮುನ್ನುಗ್ಗಿ ಹೋಗಿ ಅವನನ್ನು ಖಡ್ಗದಿಂದ ಇರಿಯುವುದರಲ್ಲಿದ್ದಾಗಲೇ ಆತ

ಕುದುರೆಯನ್ನು ಹಿಂದಕ್ಕೆ ತಿರುಗಿಸಿಕೊಂಡು ಹೊಲಗಳ ಕಡೆಗೆ ಓಡಿಹೋದ. ನಾನು ಆಗ ಕುದುರೆಯ ಮೇಲಿದ್ದಲ್ಲಿ ಅವನ ಬೆನ್ನಟ್ಟಿ ಹೋಗಿ ಅವನನ್ನು ಕೊಂದುಹಾಕಬಹುದಾಗಿತ್ತು. ಆದರೆ, ಆಗ ನಾನು ಕುದುರೆಯ ಮೇಲಿರಲಿಲ್ಲ. ಎಂತಲೇ ನಿರುಪಾಯವಾಗಿ ಹೊರಳಿ ಬಂದೆ.

ಅಷ್ಟರಲ್ಲಿಯೇ ಬೈಲಹೊಂಗಲದ ಕಡೆಯಿಂದ ಇಂಗ್ರೇಜರ ಇನ್ನೊಂದು ಡಂಡು ಬಂದುದರಿಂದ ವೈರಿಗಳ ಸಂಖ್ಯೆ ಹೆಚ್ಚಾಗಿ, ಲಢಾಯಿಯನ್ನು ಅಲ್ಲಿಗೇ ನಿಲ್ಲಿಸಿ ನಾವು ಸಂಪಗಾವಿಯಿಂದ ಹೊರಡಬೇಕಾಯಿತು. ಕಾಳಗದಲ್ಲಿ ಮಡಿದಿದ್ದ ನಮ್ಮ ಎಂಟು ಜನರನ್ನೂ ಗಾಯಗೊಂಡಿದ್ದ ಇಪ್ಪತ್ತೈದು ಜನರನ್ನೂ ಹೊತ್ತುಕೊಂಡೇ ಸುತಗಟ್ಟಿಗೆ ಬಂದೆವು. ಹೋರಾಡುತ್ತ ಹೋರಾಡುತ್ತ ವೀರ ಸ್ವರ್ಗಕ್ಕೇರಿದ ಎಂಟು ಜನ ಬಂಟರ ಶರೀರಗಳಿಗೆ ಸಮಾಧಿ ಮಾಡಿ, ಸುತಗಟ್ಟಿಯಲ್ಲಿಯೇ ಗಾಯಾಳುಗಳ ಚಿಕಿತ್ಸೆಗೆ ವ್ಯವಸ್ಥೆ ಮಾಡಿ, ಅಷ್ಟರೊಳಗಾಗಿ ನಮ್ಮ ಬೆನ್ನುಹತ್ತಿ ಬಂದ ಇಂಗ್ರೇಜರ ದಂಡಿಗೆ ಸಿಕ್ಕದೆ ದೇಶನೂರ ಕೋಟೆ ಸೇರಿಕೊಂಡೆವು. ಆ ರಾತ್ರಿ ಅಲ್ಲಿಯೇ ವಸತಿ ಮಾಡಿ, ವಿಶ್ರಾಂತಿ ಪಡೆದು, ಬೆಳಗ್ಗೆ ಬೇಗನೇ ಎದ್ದು, ಸೈನ್ಯವನ್ನು ಎರಡು ಗುಂಪುಗಳಾಗಿ ವಿಂಗಡಿಸಿ ಒಂದು ಗುಂಪನ್ನು ಅಪ್ಪಾಜಿ ನಾಯಕನ ವಶಕ್ಕೆ ಕೊಟ್ಟು, ಮರಿಕಟ್ಟಿಯ ಮೇಲೆ ದಾಳಿ ಮಾಡಲು ತಿಳಿಸಿ, ನಾನು-ರಾಯಣ್ಣ-ಗಜವೀರ ಇನ್ನೊಂದು ಗುಂಪಿನೊಡನೆ ಸಂಗೊಳ್ಳಿಯ ಕಡೆಗೆ ನಡೆದೆವು. ಆರೇಳು ತಿಂಗಳುಗಳಿಂದ ನಾವು ಈ ನಮ್ಮ ಪ್ರೀತಿಯ ಊರಿಗೆ ಬಂದಿರಲಿಲ್ಲ. ಹೆಂಡತಿಯ ನಿರೋಪ ತೆಗೆದುಕೊಂಡು ಹೊರ ಬಿದ್ದಂದಿನಿಂದ ನಾನು ಅಮಟೂರಿಗೆ ಹೋಗಿರಲಿಲ್ಲ. ಅವರೆಲ್ಲರನ್ನೂ ನೋಡಬೇಕೆಂಬ ಅಪೇಕ್ಷೆಯೇನೋ ಇದ್ದೇ ಇತ್ತು. ಆದರೆ, ಅದಕ್ಕಿಂತ ಹೆಚ್ಚಾಗಿ ಸಂಗೊಳ್ಳಿಯ ಕುಲಕರ್ಣಿಗೆ ಶಾಸನ ಮಾಡುವ ಆತುರತೆ ಇತ್ತು.

"ಕಿತ್ತೂರ ರಾಣಿಗೆ ಜೈ," "ಸವಾಯಿ ಮಲ್ಲಸರ್ಜರಿಗೆ ಜೈ," "ಸಂಗೊಳ್ಳಿ ರಾಯಣ್ಣನಿಗೆ ಜೈ" ಎಂದು ಘೋಷಿಸುತ್ತ ನಮ್ಮ ದಂಡು ಊರಿನಲ್ಲಿ ಪ್ರವೇಶಿಸುತ್ತಲೂ ಹಳ್ಳಿಯ ಜನರೆಲ್ಲರೂ ಹರ್ಷದಿಂದ ಬೀದಿಗಳಲ್ಲಿ ನೆರೆದು ನಮ್ಮನ್ನು ಸ್ವಾಗತಿಸಿದರು. ಸುಮಂಗಲೆಯರು ಆರತಿ ಬೆಳಗಿ ಹರಸಿದರು. ಸೈನಿಕರೆಲ್ಲರಿಗೂ ಹಣ್ಣು-ಹಾಲು-ರೊಟ್ಟಿ-ಅನ್ನ-ಮಜ್ಜಿಗೆ ಒದಗಿಸಿದರು. ಪರ್ವತಗೌಡನೂ ಮನೆಯಿಂದ ಹೊರಗೆ ಬಂದು ರಾಯಣ್ಣನನ್ನು ಅಪ್ಪಿ

ಕೊಂಡು ಆಶೀರ್ವದಿಸಿದ. ಆನಂದಾಶ್ರುಗಳನ್ನು ದುರಿಸುತ್ತ ರಾಯನನ್ನೂ ನನ್ನನ್ನೂ ಆಲಂಗಿಸಿಕೊಂಡು ನಮ್ಮನ್ನು ಬಿಡಲಾರದೆ ಅಂಟಿಕೊಂಡಿದ್ದ ತಾಯಿ ಕೆಂಚವ್ವನ ಅಡಿಗಳಿಗೆರಗಿ, ನಮ್ಮ ಸಂಗಡ ಬರುವುದಾಗಿ ಹಟ ಹಿಡಿದಿದ್ದ ಹನುಮನನ್ನು ಸಂತೈಸಿ ಚಾವಡಿಗೆ ಬಂದೆವು. ಆ ಚಾವಡಿಗೂ ತನಗೂ ಇದ್ದ ಋಣಾನುಬಂಧದ ನೆನಪು ಬಂದು, ತಾನು ಅಲ್ಲಿ ಕುಳಿತಿರುತ್ತಿದ್ದ ಕಟ್ಟೆಯನ್ನು ಕಂಡು ರಾಯಣ್ಣನ ಕೊರಳು ಬಿಗಿದು ಕಣ್ಣಲ್ಲಿ ನೀರಾಡಿತು. ಸಾವುಡದ ತುದಿಯಿಂದ ಕಣ್ಣೊರೆಯಿಸಿಕೊಂಡು ಆತ ಮೆಲ್ಲಗೆ ಚಾವಡಿಯಿಂದ ಹೊರಬಂದ. ಕುಲಕರ್ಣಿ ಬಾಳಪ್ಪನನ್ನು ಹಿಡಿಯಲೆಂದು ನಮ್ಮ ದಂಡು ಆವನ ಮನೆಯತ್ತ ಹೊರಟಿತು. ಅವನ ಹೆಂಡಿರುಮಕ್ಕಳು ಅಳುತ್ತಳುತ್ತ ಬಂದು ರಾಯಣ್ಣನ ಕಾಲು ಹಿಡಿದುಕೊಂಡರು. ಕುಲಕರ್ಣಿ ಅಲ್ಲಿದ್ದರಷ್ಟೇ ನಮ್ಮ ಕೈಗೆ ಸಿಗುವುದು ? ಸಂಗೊಳ್ಳಿಯ ಕಡೆಗೆ ದಂಡು ಬರುತ್ತಿದ್ದ ಸುದ್ದಿ ಕೇಳಿದ ಕೂಡಲೇ ಆತ ಓಡಿಹೋಗಿ ಎಲ್ಲಿಯೋ ತಲೆತಪ್ಪಿಸಿಕೊಂಡಿದ್ದ.

ಇನ್ನು ಅಮಟೂರಿಗೆ ಹೊರಡಬೇಕೆನ್ನುವಷ್ಟರಲ್ಲಿಯೆ ವೈರಿಗಳ ಸೈನ್ಯ ಬರುತ್ತಿದ್ದ ವಾರ್ತೆ ಗೊತ್ತಾಯಿತು. ಎಂತಲೇ, ಅಮಟೂರಿಗೆ ಹೋಗುವ ವಿಚಾರ ಬಿಟ್ಟುಕೊಟ್ಟು ಕಿತ್ತೂರ ಕಡೆಗೆ ಪ್ರಯಾಣ ಮಾಡಿ ಆ ರಾತ್ರಿ ಸಮೀಪದ ಗುಡ್ಡದಲ್ಲಿ ಬಿಡಾರ ಮಾಡಿದೆವು. ಮರುದಿವಸ ಬಾಳಗುಂದ ಗುಡ್ಡಕ್ಕೆ ಹೊರಟಿದ್ದಾಗ ವೈರಿ ಸೈನ್ಯವೊಂದು ಎದುರಾಯಿತು. ಅದಕ್ಕೆ ಚೆನ್ನಾಗಿ ಹೊಡೆತ ಕೊಟ್ಟು ಓಡಿಸಿದೆವು. ಇಳಿಹೊತ್ತಿನ ವೇಳೆಗೆ ಕೊಳ್ಳಕ್ಕೆ ಬಂದು ಜಳಕ ಮಾಡಿ ಊಟ ಮುಗಿಸಿ ವಿಶ್ರಾಂತಿ ಪಡೆದೆವು.

ಹಳ್ಳಿಯಾಳದ ಖಜಾನೆಯಲ್ಲಿ ಸರಕಾರದ ಹಣವಿದೆಯೆಂದು ಶಬಸೀ ಗೌಡನೊಬ್ಬ ಸುದ್ದಿ ತಿಳಿಸಿದ್ದರಿಂದ ಮರುದಿವಸ ಅಲ್ಲಿಗೆ ಹೊರಟೆವು. ಆದರೆ, ಖಜಾನೆಗೆ ಬಲವಾದ ಕಾವಲಿತ್ತು. ಆದರೂ ನಾವು ಧೈರ್ಯದಿಂದ ಹೋರಾಡಿದೆವು. ವೈರಿಗಳಲ್ಲಿ ನಾಲ್ವರಿಗೆ ಗಾಯವಾಗಿ ಇಬ್ಬರ ಪ್ರಾಣ ಹೋಯಿತು. ವೈರಿಯೊಬ್ಬ ಹಾರಿಸಿದ ಗುಂಡು ರಾಯಣ್ಣನ ಕಾಲಿನಲ್ಲಿ ಸೇರಿಕೊಂಡಿತು. ದೊಡ್ಡ ಗಾಯವಾಗಿ ವಿಪರೀತ ನೋವಾಗಿದ್ದರೂ ಅದನ್ನು ಲೆಕ್ಕಿಸದೆ ರಾಯಣ್ಣ ಹೋರಾಡುತ್ತಲೇ ಇದ್ದ. ವೈರಿಗಳನ್ನೆಲ್ಲ ಓಡಿಸಿ ಖಜಾನೆಯನ್ನು ಮುರಿದು ನೋಡಿದರೆ ಅದರಲ್ಲಿದ್ದುದು ಬರಿಯ ಮೂರು

ಸಾವಿರ ರೂಪಾಯಿ! ಸರಿ, ಸಾಯಂಕಾಲ ಮತ್ತೆ ಕೊಳ್ಳಕ್ಕೆ ಬಂದೆವು.

ರಾಯಣ್ಣನ ಕಾಲಿನಲ್ಲಿ ಸೇರಿಕೊಂಡಿದ್ದ ಗುಂಡನ್ನು ತಕ್ಷಣ ಹೊರದೆಗೆಯಬೇಕಾಗಿತ್ತು. ನನ್ನ ಹರಿತವಾದ ಕಠಾರಿಯನ್ನು ಉಪಯೋಗಿಸಿ ನಾನೇ ಆ ಕೆಲಸ ಮಾಡಬೇಕಾಯಿತು. ಗಾಯದ ಸುತ್ತಲಿನ ಚರ್ಮವನ್ನು ನಾನು ಕೊಯ್ಯುತ್ತಿದ್ದಾಗ ಭಯಂಕರ ನೋವಾಗುತ್ತಿದ್ದರೂ ಮುಖದ ಮೇಲೆ ಸ್ವಲ್ಪವೂ ವೇದನೆಯನ್ನು ವ್ಯಕ್ತಗೊಳಿಸದೆ ನಗುನಗುತ್ತಲೇ ಇದ್ದ ರಾಯಣ್ಣನ ರಾಕ್ಷಸೀಸಹನೆಯನ್ನು ನೋಡಿ ನಾನೇ ಬೆರಗಾಗಬೇಕಾಯಿತು. ಗುಂಡನ್ನು ಹೊರದೆಗೆದು, ಗಾಯಕ್ಕೆ ವನಸ್ಪತಿ ಅರೆದು ಹಾಕಿ, ಪಟ್ಟಿಕಟ್ಟಿ, ಅವನನ್ನು ಒತ್ತಾಯದಿಂದಲೇ ಮಲಗಿಸಿದೆವು. ನಾಲ್ಕೈದು ದಿನಗಳವರೆಗೆ ಮೇಲಕ್ಕೇಳಲು ಬಿಡಲಿಲ್ಲ.

ಈ ಅವಧಿಯಲ್ಲಿ ದೇಗಾಂವಿ ಸೈದನಾಯಕನ ಮುಃಖಂಡತ್ವದಲ್ಲಿ ನಮ್ಮ ತುಕಡಿಯೊಂದು ಕಿತ್ತೂರಿನ ಮೇಲೆ ದಾಳಿ ಮಾಡಲು ಹೋಗಿತ್ತು. ಆದರೆ ಅಲ್ಲಿ ಇಂಗ್ರೇಜರ ಸೈನ್ಯ ವಿಶೇಷವಾಗಿದ್ದುದರಿಂದ ನಮ್ಮವರಿಗೆ ಯಶಸ್ಸು ಲಭಿಸಲಿಲ್ಲ. ಘೋರವಾದ ಕಾಳಗ ನಡೆದು ನಮ್ಮ ಸೈನಿಕರನೇಕರು ಸತ್ತರು. ಹೀಗೆ ತೀರಿಕೊಂಡ ಜನರ ಬದಲು ಹೊಸಹೊಸದಾಗಿ ಸೈನಿಕರು ಬಂದು ಸೇರಿಕೊಳ್ಳುತ್ತಲೇ ಇದ್ದರು. ಬಾಳಗುಂದ ಕೊಳ್ಳದಲ್ಲಿ ರಾಯಣ್ಣ ಚಿಕಿತ್ಸೆ ಪಡೆಯುತ್ತಿದ್ದಾಗ ಕುಳ್ಳೂರ ಕರಬಸಪ್ಪ, ಜಿದ್ದೀಮನಿ ಭೀಮು, ಗುಜನಾಳದ ಮೋರವಾ ಇವರು ನೂರು ಜನರನ್ನು ಕರೆದು ತಂದರು.

ರಾಯಣ್ಣನ ಕಾಲಿನ ಗಾಯ ಸ್ವಲ್ಪ ವಾಸಿಯಾಗುತ್ತಲೂ ಮತ್ತೆ ನಮ್ಮ ಚಟುವಟಿಕೆಗಳು ತೀವ್ರಗೊಂಡುವು. ಸಾಕಷ್ಟು ಜನರನ್ನು ಕೂಡಿಸಿಕೊಂಡು ಹೋಗಿ ಕಿತ್ತೂರನ್ನು ಹಿಡಿದುಕೊಳ್ಳುವುದೇ ಈಗ ನಮ್ಮ ಗುರಿಯಾಗಿತ್ತು. ಆ ಪ್ರಕಾರ ೫೦೦ ಜನ ಸೈನಿಕರನ್ನು ಒಟ್ಟುಗೂಡಿಸಿ ಒಂದು ಬೆಳಗ್ಗೆ ಕಿತ್ತೂರಿಗೆ ಹೋಗಿ ಗುರುಸಿದ್ಧೇಶ್ವರನ ಗದ್ದುಗೆಗೆ ಕಾಯಿ ಒಡೆಸಿ, ಅಡ್ಡ ಬಿದ್ದು ನಮಸ್ಕರಿಸಿ. ಹತ್ತಿರದಲ್ಲಿಯೇ ಇದ್ದ ಕೃಷ್ಣಪ್ಪನ ಕಬ್ಬಿನ ಗಾಣಕ್ಕೆ ಹೋಗಿ ಕಬ್ಬಿನ ಹಾಲು ಕುಡಿದು ಕಿತ್ತೂರಿನಲ್ಲಿದ್ದ ವೈರಿಗಳ ಸೈನ್ಯ ಅತ್ಯಂತ ಸುಸಜ್ಜಿತವಾಗಿದ್ದುದನ್ನು ತಿಳಿದುಕೊಂಡು, ಕಿತ್ತೂರ ಮುತ್ತಿಗೆಗೆ

ಇದು ಯೋಗ್ಯ ಸಮಯವಲ್ಲವೆಂದು ಗೊತ್ತುಮಾಡಿಕೊಂಡು ಅಲ್ಲಿಂದ ಹಿಂತಿರುಗಿ ಬಂದೆವು.

ನಮ್ಮನ್ನು ಸೋಲಿಸಲು ಸುತ್ತೂ ಕಡೆಯಿಂದ ಇಂಗ್ರೇಜರ ದಂಡು ಒಟ್ಟುಗೂಡುತ್ತಿದ್ದ ವಾರ್ತೆ ದಿನ ದಿನವೂ ಬರುತ್ತಲೇ ಇತ್ತು. ಅಲ್ಲಿ ಇಲ್ಲಿ ಭೆಟ್ಟಿಯಾಗುತ್ತಿದ್ದ ಅವರ ತುಕಡಿಗಳಿಗೂ ನಮಗೂ ಚಿಕ್ಕಪುಟ್ಟ ಕಾಳಗಗಳು ನಡೆಯುತ್ತಲೇ ಇದ್ದುವು. ನಾವು ವಾಸಮಾಡುತ್ತಿದ್ದ ದಟ್ಟವಾದ ಅರಣ್ಯದಲ್ಲಿ ಪ್ರವೇಶಿಸಲಾರದೆ ಅವರು ಬಯಲು ಸೀಮೆಯಲ್ಲಿಯೇ ಬಿಡಾರ ಮಾಡುತ್ತಿದ್ದರು.

ತಿಂಗಳುಗಳು ಕಳೆದಂತೆ ನಮ್ಮ ಶಕ್ತಿ ಹೆಚ್ಚಾಗುತ್ತಿದ್ದುದನ್ನು ಕಂಡು ಬೈಲಹೊಂಗಲದಲ್ಲಿದ್ದ ವೀರಮ್ಮ ರಾಣಿಯವರಿಂದ ನಮಗೆ ಸಹಾಯ ಸಿಕ್ಕುತ್ತಿರಬಹುದೆಂದು ಯೋಚಿಸಿಯೋ ಏನೋ, ಅವರನ್ನು ಅಲ್ಲಿಂದ ಬೇರೆ ಕಡೆಗೆ ಸಾಗಿಸುವ ವಿಚಾರ ನಡೆದಿದೆಯೆಂಬ ವರ್ತಮಾನ ತಿಳಿದುಬಂದಾಗ ನಮ್ಮೆಲ್ಲರಿಗೂ ಸಹಿಸಲಾರದಷ್ಟು ಸಂತಾಪವಾಯಿತು. ಚಿಕ್ಕ ರಾಣಿಯವರನ್ನು ಹೊಂಗಲದಿಂದ ಸ್ಥಳಾಂತರಿಸದಂತೆ ಮಾಡಲು ನಮ್ಮ ಶಕ್ತಿಯೆಲ್ಲವನ್ನು ಉಪಯೋಗಿಸಿ ಹೋರಾಡಬೇಕೆಂದು ನಿಶ್ಚಯವಾಯಿತು. ರಾಣಿಯವರ ಸ್ಥಳಾಂತರದ ಕಾರ್ಯಕ್ಕೆ ನಾವು ಅಡ್ಡಿಮಾಡಬಹುದುದೆಂಬ ಸಂಗತಿ ಪರದೇಶಿಗಳಿಗೂ ಹೊಳೆದಿರಲೂ ಸಾಕು. ನಮ್ಮನ್ನೆದುರಿಸಲು ಅವರೂ ಸಾಕಷ್ಟು ಸಿದ್ಧತೆ ನಡೆಸಿದರು. ಮದ್ರಾಸಿನಿಂದ ಬಂದಿದ್ದ ಸೈನ್ಯವನ್ನು ಆ ಕಾರ್ಯಕ್ಕಾಗಿ ಮೀಸಲಾಗಿಟ್ಟಿದ್ದರಂತೆ. ಅಲ್ಲದೆ, ಸುತ್ತಲಿನ ಅನೇಕ ದ್ರೋಹಿ ಜಹಗೀರದಾರರೂ ಇನಾಮುದಾರರೂ ದೇಸಾಯಿಗಳೂ ತಮ್ಮ ತಮ್ಮ ಪಡೆಗಳೊಡನೆ ಬಂದು ಪರದೇಶಿಗಳಿಗೆ ಬೆಂಬಲವಾಗಿದ್ದರಂತೆ. ರಾಣಿಯವರನ್ನು ಹೊಂಗಲದ ವಾಡೆಯಿಂದ ಹೊರಡಿಸಿದ ದಿವಸ ಕಿತ್ತೂರ ರಾಜ್ಯದ ಸಾವಿರಾರು ಜನರು ಅಲ್ಲಿ ಸೇರಿ ಶೋಕಿಸುತ್ತ ನಿಂತಿದ್ದರು. ರಾಣಿಯವರೂ ಕಂಬನಿ ಸುರಿಸುತ್ತಲೇ ಮೇನೆ ಹತ್ತಿರಬೇಕು. ಮೇನೆಯ ಸುತ್ತಲೂ ಪರದೆ ಇಳಿಬಿಟ್ಟು, ಬಂದೂಕಿನ ಸೈನಿಕರ ಕಾವಲಿನಲ್ಲಿ ಅವರನ್ನು ವಾಡೆಯಿಂದ ಹೊರಗೆ ತಂದರು. ಮುಂದೆ ಕುದುರೆ ಸವಾರರು; ಹಿಂದೆ ಬಾರಿನವರು. ಎಡಬಲಗಳಲ್ಲಿ ಬಿಚ್ಚುಗತ್ತಿಯ ಸಿಪಾಯಿಗಳು. ಎಲ್ಲರೂ ಸೇರಿ ಒಂದೂವರೆ ಸಾವಿರದವರೆಗೂ ಸೈನಿಕರಿದ್ದ

ಹಾಗಿತ್ತು. ಅನಗೋಳ ಗ್ರಾಮದ ಹತ್ತಿರ ನಮ್ಮ ದಂಡಾಳುಗಳು ಇವರ ಗೆದುರಾಗಿ ರಾಣಿಯನ್ನು ಬಿಡಿಸಿಕೊಂಡೊಯ್ಯಲು ಪ್ರಯತ್ನಿಸಿದರಾದರೂ ವೈರಿಗಳ ಪ್ರಚಂಡ ತಯಾರಿಯಿಂದಾಗಿ ನಮಗೆ ಯಶ ಸಿಕ್ಕಲಿಲ್ಲ. ಕಿತ್ತೂರನ್ನು ವಶಪಡಿಸಿಕೊಂಡ ಬಳಿಕ ಮೂರು ನಾಲ್ಕು ಸಾವಿರ ಸೈನಿಕರನ್ನು ಕಲೆಹಾಕಿ, ತೋಫುಗಳನ್ನು ಉಪಯೋಗಿಸಿ ಧಾರವಾಡ ಕೋಟೆಯ ಮೇಲೆ ದಾಳಿ ಮಾಡಿ ವೀರಮ್ಮ ರಾಣಿಯವರನ್ನು ಬಿಡಿಸಿಕೊಂಡು ಬರಬೇಕೆಂದು ಮಾತ ನಾಡಿಕೊಂಡೆವು.

ಆದರೆ, ರಾಣಿಯವರನ್ನು ಧಾರವಾಡದಲ್ಲಿಯೇ ಇಡದೆ, ಹುಬ್ಬಳ್ಳಿಯ ಆಚೆಗಿದ್ದ ಕುಸುಗಲ್ಲ ಕೋಟೆಗೆ ಸಾಗಿಸಲಾಯಿತೆಂಬ ಸುದ್ದಿ ಒಂದು ವಾರ ದಲ್ಲಿಯೇ ಗೊತ್ತಾಗಿ ನಮ್ಮೆಲ್ಲರಿಗೂ ಕಳವಳವನ್ನುಂಟುಮಾಡಿತು.

ರಾಣಿಯವರ ಜೊತೆಗೆ ಪಾರ್ವತಿಯೂ ಹೋದಳೆನ್ನುವುದು ಅನಂತರ ತಿಳಿಯಿತು. ಆಕೆಯ ತಾಯಿ ಮಾತ್ರ ಹೊಂಗಲದಲ್ಲಿಯೇ ಉಳಿದಳಂತೆ. ಪಾರ್ವತಿಯ ಪ್ರಿಯಕರ ಗಂಗಾಧರನಂತೂ ಧಾರವಾಡದ ಸೆರೆಮನೆಯಲ್ಲಿ ಬಿದ್ದುಕೊಂಡಿದ್ದ. ಅವನನ್ನು ಬಿಡಿಸಿಕೊಂಡು ಬರುವ ಉಪಾಯವಾವುದೂ ಹೊಳೆಯುತ್ತಿರಲಿಲ್ಲ.

ಮುಂದಿನ ಕಾರ್ಯಕ್ರಮವನ್ನು ಕುರಿತು ನಾವು ಚರ್ಚಿಸುತ್ತಿದ್ದಂತೆಯೆ ಒಬ್ಬ ತಳವಾರ ಬಂದು, ಖೊದಾನಪುರದ ಲಿಂಗನಗೌಡರೂ ನೇಗಿನಹಾಳದ ವೆಂಕನಗೌಡರೂ ನೂರಿನ್ನೂರು ಜನರನ್ನು ಕರೆದುಕೊಂಡು ಬಂದು ನಮ್ಮನ್ನು ಕೂಡಿಕೊಳ್ಳುವರೆಂದು ತಿಳಿಸಿದ.

# ೧೯ ಖೊದಾನಪುರದ ಲಿಂಗನಗೌಡ

ಮೂರು ನಾಲ್ಕು ತಿಂಗಳಿಂದ ನಮ್ಮ ಭಾಗದಲ್ಲಿ ಸಂಗೊಳ್ಳಿ ರಾಯಣ್ಣನ ದಂಗೆ ವಿಪರೀತವಾಗಿದೆ. ಖೊದಾನಪುರದ ಸುತ್ತಮುತ್ತಲಿನ ಎಷ್ಟೋ ಹಳ್ಳಿಗಳನ್ನು ಆತ ಲೂಟಿ ಮಾಡಿದ, ಸಾಹುಕಾರರಿಗೆ ದಂಡ ಕಟ್ಟಿದ, ಸರ್ಕಾರದ ಕಚೇರಿಗಳನ್ನು ಸುಟ್ಟ. ಸಂಪಗಾವಿಯ ಕಚೇರಿಗೆ ಹಗಲುಹಾಡೇ ಬೆಂಕಿಹಚ್ಚಿದ. ನಮ್ಮ ಪುಣ್ಯವೋ ಏನೋ. ನಮ್ಮೂರಿಗೆ ಮಾತ್ರ ಇದುವರೆಗೂ ಅವನ ಉಪಟಳದ ಬಿಸಿ ತಾಕಿಲ್ಲ. ಆದರೂ, ಸಮೀಪದ ಸೀಮೆಯಲ್ಲೆಲ್ಲ ಅವನ ಗದ್ದಲ ನಡೆದಿರುವಾಗ ನಮಗೂ ಅದರ ಕಾವು ಬಡಿಯುವುದು ಸಹಜವೇ. ನನ್ನ ಬಗೆಗೆ ರಾಯಣ್ಣನಿಗೆ ಇನ್ನೂ ಆಸೆಯಿದ್ದಂತಿದೆ. ಇಂದಿಲ್ಲ ನಾಳೆ ನಾನು ಅವನನ್ನು ಕೂಡಿಕೊಳ್ಳಬಹುದೆಂದು ಆತ ಯೋಚಿಸುತ್ತಿರಬೇಕು. ನಮ್ಮೂರಿನ ಮೇಲೆ ಆತ ದಾಳಿ ಮಾಡದಿರಲು ಅದೇ ಕಾರಣವಿರಲು ಸಾಕು.

ನಾವೂ ಸಹ ಕಿತ್ತೂರ ದೊರೆಗಳ ಸೇವಕರಾದುದರಿಂದ ಈ ಬಂಡಾಯದಲ್ಲಿ ಭಾಗವಹಿಸಿ ಆತನಿಗೆ ನೆರವಾಗುವುದು ನಮ್ಮ ಕರ್ತವ್ಯವೆಂಬುದಾಗಿ ಬೋಧಿಸಿ ಎರಡು ತಿಂಗಳ ಹಿಂದೆ ಆತ ಬರೆದಿದ್ದ ಪತ್ರಕ್ಕೆ ನಾನಿನ್ನೂ ಉತ್ತರವನ್ನೇ ಕಳಿಸಿಲ್ಲ. ಆ ಪತ್ರ ತಲುಪುತ್ತಲೂ ನನ್ನ ಆಪ್ತರಾದ ನೇಗಿನಹಾಳದ ವೆಂಕನಗೌಡರನ್ನು ಬರಮಾಡಿಕೊಂಡು, ಅವರ ಸಲಹೆ ಕೇಳಿದೆ.

"ನಮ್ಮಂಥ ವತನದಾರ ಗೌಡರಿಗೆ ಹೀಗೆಲ್ಲಾ ಪತ್ರ ಬರೆಯುವುದೇ ಅವನ ಉದ್ಧಟತನ. ತಾನು ಯಾರು, ತನ್ನ ಸ್ಥಾನ ಏನು, ಮಾನ ಏನು ? ಅನ್ನುವುದರ ವಿಚಾರವಿಲ್ಲ. ಗೌಡ ಕುಲಕರ್ಣೇರು ಹೇಳಿದ ಚಿಲ್ಲರೆ ಪಲ್ಲರೆ ಕೆಲಸ ಮಾಡಿಕೊಂಡು ಬಿದ್ದಿರಬೇಕಾದ ಈ ಹಳಬ ಈಗ ದೊಡ್ಡ ಶೂರನಂತೆ ಸೋಗು ಹಾಕಿಕೊಂಡು, ನಮ್ಮಂಥಾ ಗೌಡರಿಗೇ ಬುದ್ಧೀ ಹೇಳಲು ಹೊರಟಿದ್ದಾನೆ. ಅವನಿಗೇನು ಉತ್ತರ ಬರೆಯಬೇಕಂತ ಮಾಡೀರಿ ?" ಎಂದರು ವೆಂಕನಗೌಡರು.

"ನಾನಂತೂ ವಿಚಾರ ಮಾಡೇ ಇಲ್ಲ ಗೌಡರೆ. ನಿಮ್ಮ ಸಲಹೆ ಕೇಳಿಕೊಂಡೇ ಏನು ಮಾಡೂದು ಮಾಡಬೇಕು ಅಂತ ಸುಮ್ಮನಿದ್ದೆ," ಎಂದು

ಹೇಳಿದೆ. ಅವರು ನನಗಿಂತಲೂ ಹಿರಿಯರು, ಅನುಭವಿಕರು, ವ್ಯವಹಾರ ಕುಶಲರು. ಎಂತಲೇ, ಯಾವುದೇ ಮಹತ್ವದ ವಿಷಯ ನಿಶ್ಚಯಿಸುವುದಿದ್ದರೂ ನಾನು ಅವರ ಸಲಹೆ ಕೇಳಿಕೊಂಡೇ ಮುಂದಿನ ಹೆಜ್ಜೆಯಿಡುತ್ತಿದ್ದೆ.

ಸ್ವಲ್ಪ ಹೊತ್ತು ಮೌನವಾಗಿ ಕುಳಿತು ಯೋಚಿಸುತ್ತಿದ್ದು ಅನಂತರ ವೆಂಕನಗೌಡರೆಂದರು :

"ಈ ಪತ್ರ ನಿಮಗೆ ಬಂದೇ ಇಲ್ಲಂತ ತಿಳುಕೊಂಡು ಸುಮ್ಮನಿದ್ದು ಬಿಡೋದೇ ಉತ್ತಮ. ರಾಯಣ್ಣನಿಂದ ನಿಮಗೆ ಪತ್ರ ಬಂದ ಸುದ್ದಿ ಕೂಡಾ ಬೇರೆಯವರಿಗೆ ತಿಳಿಯಬಾರದು. ಕಾಲ ಬಹಳ ನಾಜೂಕು ಅದ, ಇಂಗ್ರೇಜರೂ ಅವರ ಅಧಿಕಾರಿಗಳೂ ಕಣ್ಣಲ್ಲಿ ಎಣ್ಣಿ ಹಾಕಿಕೊಂಡು ನಮ್ಮೆಲ್ಲರನ್ನೂ ನೋಡುತ್ತಿದ್ದಾರೆ. ನಾವೂ ಕಿತ್ತೂರ ನಾಡಿನವರೇ ಆದದ್ದರಿಂದ ನಮ್ಮ ಮೇಲೂ ಅವರಿಗೆ ಸಂಶಯ ಇದ್ದೇ ಇರಬಹುದು. ಆ ಸಂಶಯಕ್ಕೆ ಪುಟ ಕೊಡುವಂತ ಇಂಥ ಪತ್ರದ ಸುದ್ದಿ ಹಬ್ಬಬಾರದು."

ವೆಂಕನಗೌಡರ ಸಮಕ್ಷಮದಲ್ಲಿಯೇ ರಾಯಣ್ಣನ ಪತ್ರವನ್ನು ಸುಟ್ಟು ಬೂದಿ ಮಾಡಿದುದಾಯಿತು.

ಊಟವಾದನಂತರ ವಿಶ್ರಮಿಸಿಕೊಳ್ಳುತ್ತಿದ್ದಂತೆ ವೆಂಕನಗೌಡರು ಮತ್ತೆ ಹೇಳಿದರು :

"ನಮ್ಮಿಂದ ಉತ್ತರ ಬರಲಿಲ್ಲವಲ್ಲಾ ಅಂತ ರಾಯಾ ತಾನೇ ಸ್ವತಃ ನಿಮ್ಮ ಹತ್ತರ ಬಂದು ಸಹಾಯಕ್ಕಾಗಿ ಬೇಡಬಹುದು. ಅಂಥಾ ಪ್ರಸಂಗ ಬಂದರೆ ಏನು ಹೇಳ್ತೀರಿ ?"

"ಏನು ಹೇಳಲಿ ?"

"ನೀ ನಡೆಸಿದ ಗದ್ದಲ ನಮಗೆ ಸ್ವಲ್ಪ ಕೂಡಾ ಸರಿಬರೂದಿಲ್ಲಂತ ಸ್ಪಷ್ಟವಾಗಿ ಹೇಳಿ ಅವನ ಕಿವಿ ಹಿಂಡಬೇಕು. ಇಂಗ್ರೇಜರನ್ನ ಓಡಿಸೋದು ಅಂದರೆ ಏನಂತ ತಿಳಿದಾನೋ ಅವ ? ಬಡಿಗೆ ಹಿಡುಕೊಂಡು ಕುರೀಮಂದೆ ಓಡಿಸಿದಂತೆ ಸುಲಭ ಏನು ಈ ಕೆಲಸ ? ಈ ಹುಂಬ ಮಂದಿಗೆ ಬುದ್ಧೀ ಹೇಳುವವರು ಯಾರಾದರೂ ಬೇಕೇಬೇಕು. ಅಂಥಾ ಚೆನ್ನಮ್ಮ ರಾಣಿಯವರೇ ಬದುಕಿರುವವರೆಗೂ ಅವರಿಂದಲೂ ಏನೂ ಆಗಲಿಲ್ಲ. ಕಿತ್ತೂರ ಗಾದಿಗೆ ಮಗನನ್ನು ದತ್ತಕ ಕೊಟ್ಟ ಮಾಸ್ತಮರಡಿಯ ಗೌಡರೂ ಸುಮ್ಮನಿದ್ದಾರೆ.

ನಿಜವಾಗಿ ಅವರೇ ಎದ್ದು ಮಾಡಬೇಕಾದ ದಂಗೆ ಇದು. ರಾಜ ಮನೆತನಕ್ಕೆ ಏನೂ ಸಂಬಂಧವಿಲ್ಲದ ಹಳಬನೊಬ್ಬ ಗದ್ದಲ ಎಬ್ಬಿಸಿ ರಾಜ್ಯ ಕಟ್ಟೇನಂತ ಹೊರಟರೆ ಜನರು ನಗಲಿಕ್ಕಿಲ್ಲಂತೀರಾ ?" ಎಂದರು ವೆಂಕನಗೌಡರು.

"ಹೌದೌದು. ಮಾಸ್ತಮರಡಿಯ ಗೌಡರೇ ಮುಂದಾಗಿ ಬಂಡು ಮಾಡ ಬೇಕು. ಅಂದರೆ ಅವರ ಶಿವಲಿಂಗನಿಗೆ ಮತ್ತೆ ಕಿತ್ತೂರ ದೊರೆತನ ಸಿಕ್ಕೀತು !" ಎಂದು ಹೇಳುತ್ತಿದ್ದಂತೆ ನನಗೆ ನಗು ಬಂದಿತು. ಆ ಗೌಡರ್ನೋ ! ಅವರ ಆ ಹುಡುಗನ್ನೋ ! ಆ ಹುಡುಗನಲ್ಲಿ ಏನನ್ನು ಕಂಡು ಅವನನ್ನು ದತ್ತು ತೆಗೆದು ಕೊಂಡರೋ ಬಾಪೂಸಾಹೇಬರು? ನಮ್ಮ ರುದ್ರಗೌಡನನ್ನು ಸ್ವೀಕಾರ ಮಾಡಿ ರೆಂದು ಪರಿಪರಿಯಾಗಿ ಹೇಳಿ ನೋಡಿದೆ. ದರಬಾರದವರಾರೂ ಕಿವಿಗೊಡಲಿಲ್ಲ. ಈಗ, ಈ ಮಾಸ್ತಮರಡಿಯ ಹುಡುಗನಿಗೆ ಕಿತ್ತೂರ ಗಾದಿ ದೊರಕಿಸಿಕೊಡಲು ನಾನು ಸಹಾಯ ಮಾಡಬೇಕಂತೆ ! ನಾನು !

"ಹೌದೇನ್ರೀ ಗೌಡರೇ ? ನೀವು ಕೇಳೀರಾ ? ಮಾಸ್ತಮರಡಿಯ ಆ ಹುಡುಗನನ್ನು ಓಡಿಸಿಕೊಂಡು ಹೋಗಿ ಅವನ ಹೆಸರು ಹೇಳುತ್ತಾ ಹಳ್ಳಿ ಗಳನ್ನು ಲೂಟಿ ಮಾಡ್ತಾನಂತಲ್ಲ ಈ ರಾಯಾ ?" ಎಂದರು ವೆಂಕನಗೌಡರು.

"ಹೌದ್ರೀ ಗೌಡರೆ, ಸಂಪಗಾವಿ ಕಚೇರಿ ಸುಡುವಾಗಲೂ "ಸವಾಯ್ ಮಲ್ಲಸರ್ಜಗೆ ಜೈ" ಅಂತ ಕೂಗ್ತಿದ್ದರಂತೆ. ಅದಷ್ಟೇ ಅಲ್ರೀ. "ಸರದಾರ್ ರಾಯಣ್ಣಗೆ ಜೈ"- ಅಂತಲೂ ಕೂಗತಾರಂತೆ !"

"ಎಂದಿನಿಂದ ಸರದಾರನಾದ ಈ ಹಳಬ ? ಇವನಿಗೆ ಈ ಕಿತಾಬು ಯಾರು ಕೊಟ್ರು ?" ಎಂದರು ವೆಂಕನಗೌಡರು.

"ವೀರಮ್ಮ ರಾಣಿಯವರ ತಂದೆ ಶಿವಗುತ್ತಿಯ ರಾಜರು ಕೊಟ್ಟರಂತೆ !"

"ಎಷ್ಟು ನಿಜವೋ, ಎಷ್ಟು ಸುಳ್ಳೋ ! ಏನಾರೆ ಮಾಡಿಕೊಳ್ಳಲೊಲ್ಲ ನ್ಯಾಕೆ ? ನಾವು ಮಾತ್ರ ಹುಷಾರಾಗಿದ್ದರಾಯಿತು. ಅವನನ್ನು ಸಮೀಪಕ್ಕೆ ಸಹ ಸೇರಿಸಬಾರದು."

ಹಾಗೆ ಸಲಹೆ ಕೊಟ್ಟು ವೆಂಕನಗೌಡರು ಹೊರಟು ಹೋದರು. ಒಂದು ವಾರ ಬಿಟ್ಟು ನಾನೂ ನೇಗಿನಹಾಳಕ್ಕೆ ಹೋಗಿ ಮತ್ತೊಮ್ಮೆ ಅವರೊಡನೆ ವಿಚಾರ ವಿನಿಮಯ ಮಾಡಿಕೊಂಡು ಬಂದೆ. ನಾನೂ ಅವರೂ ಹೀಗೆ ಭೆಟ್ಟಿ ಯಾಗಿ ಮಾತನಾಡಿದ ಸುದ್ದಿ ಸಂಪಗಾವಿ ಮಾಮಲೇದಾರ ಕೃಷ್ಣರಾಯರಿಗೆ

ಹೇಗೆ ತಿಳಿಯಿತೋ ಏನೋ. ಒಂದು ದಿನ ನನ್ನನ್ನು ಏಕಾಏಕಿಯಾಗಿ ಸಂಪ ಸಾವಿಗೆ ಕರೆಯಿಸಿಕೊಂಡು ಅವರು ಕೇಳಿದರು :

"ನೇಗಿನಹಾಳ ಗೌಡರದೂ ನಿಮ್ಮದೂ ಏನೋ ದೊಡ್ಡ ಖಲಬತ್ ನಡೆದದಂತಲ್ಲ ಗೌಡರೆ ?"

ದೇಶಾವರಿ ನಗು ಬೀರುತ್ತ ನಾನು ಹೇಳಿದೆ :

"ಅಂಥಾ ಖಲಬತ್ತೇನಿಲ್ಲ ಸಾಹೇಬರೆ. ಅವರೂ ನಾವೂ ನಂಟರು. ಮನೆತನದ ವಿಷಯಗಳನ್ನು ಚರ್ಚಿಸಲು ಮೇಲಿಂದ ಮೇಲೆ ಭೆಟ್ಟಿಯಾಗ ಬೇಕಾಗ್ತದ. ಬೇರೆ ವಿಶೇಷ ಏನೂ ಇಲ್ಲ."

"ನೋಡ್ರಿ ಗೌಡರೆ. ನಿಜ ಹೇಳ್ರಿ. ಧಾರವಾಡದ ಕಲೆಕ್ಟರ್ ಸಾಹೇಬ ರಿಗೂ ನಿಮ್ಮ ಮೇಲೆ ಸಂಶಯ ಬಂದಿದೆ. ಅದಕ್ಕೇ ಈಗ ನಿಮ್ಮನ್ನ ತರಾತುರಿ ಯಾಗಿ ಕರೆಸಬೇಕಾಯ್ತು."

ನನ್ನದು ಸ್ವಲ್ಪ ಗಾಬರಿಯ ಸ್ವಭಾವ. ಧಾರವಾಡದ ಕಲೆಕ್ಟರರಿಗೆ ನನ್ನ ಬಗೆಗೆ ಸಂಶಯ ಬಂದಿದೆಯೆಂದು ಮಾಮಲೇದಾರ ಹೇಳುವುದು ನಿಜವೋ ? ಸುಳ್ಳೋ ? ಎಂದು ಯೋಚಿಸಲಿಲ್ಲ. ಕಲೆಕ್ಟರರೇ ಮಾಮಲೇದಾರರಿಗೆ ಪತ್ರ ಬರೆದು, ಈ ವಿಷಯ ತಿಳಿಸಿ, ನನ್ನನ್ನು ಕರೆಯಿಸಿ ಮಾತನಾಡಲು ತಿಳಿಸಿರ ಬಹುದೆಂದೇ ನಂಬಿ ನಾನು ದಿಗಿಲುಗೊಂಡೆ. ರಾಯಣ್ಣನಿಂದ ನನಗೆ ಪತ್ರ ಬಂದ ಬಗೆಗೂ ಕಲೆಕ್ಟರರಿಗೆ ಯಾರಾದರೂ ತಿಳಿಸಿರಲಿಕ್ಕಿಲ್ಲವಷ್ಟೆ ?

ನನ್ನ ಅಂತರಂಗದಲ್ಲಿನ ಭೀತಿ ಮುಖದ ಮೇಲೂ ಕಾಣಿಸಿಕೊಂಡಿತೋ ಏನೋ ? ನನ್ನ ಧ್ವನಿಯೂ ತಡವರಿಸುತ್ತಲೇ ಇತ್ತು.

"ಸಂಶಯ ಬರುವಂಥಾದ್ದು ನಾನೇನೂ ಮಾಡಿಲ್ಲ ಸಾಹೇಬರೆ."

ಕೃಷ್ಣರಾಯರು ಬಹಳ ಧೂರ್ತರಿದ್ದಂತಿತ್ತು—ಧೂರ್ತರಾಗಿರದಿದ್ದರೆ ಇಂಗ್ರೇಜರ ದರಬಾರದಲ್ಲಿ ಮಾಮಲೇದಾರಿಕೆಯೂ ಸಿಕ್ಕುತ್ತಿರಲಿಲ್ಲವಲ್ಲ ?— ನನ್ನ ತೀಕ್ಷ್ಣವಾಗಿ ದಿಟ್ಟಿಸುತ್ತ ಅವರು ಕೇಳಿದರು :

"ಆ ಪುಂಡ ರಾಯ ನಿಮ್ಮಲ್ಲಿಗೆ ಕದ್ದು ಮುಚ್ಚಿ ರಾತ್ರಿ ಅಪರಾತ್ರಿಯಲ್ಲಿ ಬಂದು ಹೋಗ್ತಾನಂತಲ್ಲ ? ನಿಜವೇ ?"

ನನ್ನ ಮೈಯಲ್ಲೆಲ್ಲ ಬೆವರೂರಿತು. ಆಸನದಿಂದೆದ್ದು, ಶಲ್ಲೆಯದಿಂದ ಗಾಳಿ ಹಾಕಿಕೊಳ್ಳುತ್ತ,

"ಷುಳ್ಳು. ಸುಳ್ಳು. ಪೂರಾ ಸುಳ್ಳು. ನನ್ನ ಹತ್ತಿರ ಅವಗೇನು ಕೆಲಸ? ನಾನಾದರೂ ಅಂಥವನ್ನ ಯಾಕೆ ಕರಕೊಂಡೇನು ? ನಿಜ ಹೇಳೋದೇ ಆದರೆ ಅವಗೂ ನನಗೂ ಸರಿಯಾಗಿಲ್ಲ. ಅವನ ಸಂಗಡ ಅಷ್ಟೇ ಅಲ್ಲ. ಕಿತ್ತೂರ ರಾಜ ಮನೆತನದ ಸಂಗಡವೇ ನಮಗೆ ಸಂಬಂಧ ನೆಟ್ಟಗಿಲ್ಲ" ಎಂಬುದಾಗಿ, ಹೇಳ ಬಾರದ ವಿಷಯಗಳನ್ನೆಲ್ಲ ಹೇಳಿದೆ, ಗಾಬರಿಯಲ್ಲಿ.

ಮಾಮಲೇದಾರರ ದಪ್ಪ ತುಟಿಗಳ ಮೇಲೆ ಕಿರುನಗೆಯ ಅಲೆಯೊಂದು ಮೂಡಿ ಮಾಯವಾಯಿತು. ನನ್ನ ಬಾಯಿಂದ ಇಂಥ ಮಾತು ಹೊರಡುವು ದನ್ನೇ ಅವರು ನಿರೀಕ್ಷಿಸುತ್ತಿದ್ದಂತಿತ್ತು. ನನ್ನನ್ನು ಒತ್ತಾಯದಿಂದ ಆಸನದಲ್ಲಿ ಕೂಡ್ರಿಸಿ ನನ್ನ ಭುಜದ ಮೇಲೆ ಕೈಯಿಟ್ಟು, ಸಂತೈಸುವ ಸ್ವರದಲ್ಲಿ ಅವರು ಹೇಳಿದರು.

"ಅಲಬತ್! ಅಲಬತ್! ನನಗೂ ಗೊತ್ತಿದೆ ಈ ವಿಷಯ, ಅಪ್ಪಿಷ್ಟು. ಕಿತ್ತೂರ ದೇಸಾಯಿ, ಬಾಪೂಸಾಹೇಬರು ನಿಮ್ಮ ಮೇಲೆ ಬಹಳ ಅನ್ಯಾಯ ಮಾಡಿದರಂತ ಕೇಳಿದೀನಿ. ನಿಮ್ಮ ಹುಡುಗನ್ನ ದತ್ತಕ ತಗೊಳ್ಳಲು ನಿರಾಕರಿಸಿ ಬೇರೆ ಯಾರನ್ನೋ ತಗೊಂಡರಂತೆ?"

"ಹೌದು ಸಾಹೇಬರೆ."

"ಕಿತ್ತೂರ ರಾಜ್ಯ ಮುಳುಗಿದ್ದಕ್ಕೆ ನಿಮಗೇನು ದುಃಖವಾಗಿಲ್ಲ. ಹೌದಲ್ಲೋ ?"

"ಯಾಕೆ ದುಃಖ ಆಗಬೇಕು ? ಅದು ಇದ್ದರೆಷ್ಟು ? ಹೋದರೆಷ್ಟು ? ನಮ್ಮ ಹುಡುಗನೇ ಗಾದಿಗೆ ದತ್ತಕ ಆಗಿದ್ದರೆ ಮಾತು ಬೇರೆ. ಇಂಗ್ರೇಜ ಸರ ಕಾರದ ಮರ್ಜಿ ಹಿಡಕೊಂಡು ರಾಜ್ಯ ಉಳಿಸಿಕೊಳ್ಳಲು ನಾ ಪ್ರಯತ್ನ ಮಾಡು ತ್ತಿದ್ದೆ. ಟಾಕರೆ ಸಾಹೇಬರ ಕೊಲೆಯೂ ಆಗ್ತಿರಲಿಲ್ಲ. ಸಂಸ್ಥಾನವೂ ಖಾಲಸಾ ಆಗ್ತಿರಲಿಲ್ಲ. ಚೆನ್ನಮ್ಮನವರು ದುಡುಕಿ ಲಢಾಯಿ ಮಾಡಿ ತಾವಾಗಿಯೇ ರಾಜ್ಯ ಕಳೆದುಕೊಂಡರು. ಈಗ ಅದನ್ನೇ ಮತ್ತೆ ಕಟ್ಟುತೀನಂತ ಈ ಜೋಟುದ್ದ ಹಳಬ ಜಿಗಿದಾಡ್ತಾನೆ. ಇಂಥವರ ಕೈಯಿಂದ ಆಗುವ ಮಾತೇ ಅದು ? ಬುದ್ಧಿ ಯಿಲ್ಲದ ಹುಡುಗ!" ಎಂದೆಲ್ಲ ಬಡಬಡನೆ ಹೇಳಿದೆ. ನಾನೇನನ್ನು ಆಡುತ್ತಿರುವೆ ನೆಂಬುದರ ಪೂರ್ಣ ಕಲ್ಪನೆಯೂ ನನಗಿರಲಿಲ್ಲ.

ಒಂದು ನಿಮಿಷ ಸುಮ್ಮನಿದ್ದು ಕೃಷ್ಣರಾಯರೆಂದರು:

"ನಿಮ್ಮ ಅಭಿಪ್ರಾಯ ಹೀಗಿದ್ದರೂ ಕಲೆಕ್ಟರರು ಅದನ್ನ ನಂಬಬೇಕಲ್ರೀ ಗೌಡರೇ ? ನಿಮಗಾಗದವರ್‍ಯಾರೋ ಹೋಗಿ ನಿಮ್ಮ ವಿರುದ್ಧ ಅವರಿಗೆ ಚಾಡಿ ಹೇಳಿರಬೇಕು. ಸರ್ಕಾರಕ್ಕೆ ಗೊತ್ತಾಗದಂತೆ ನೀವು ರಾಯಾಗೆ ಸಹಾಯ ಮಾಡಿದೀರಿ ಅಂತಲೇ ಕಲೆಕ್ಟರ್ ಬಹಾದ್ದೂರರು ತಿಳುಕೊಂಡಿದಾರೆ. ಈಗ ಅವರ ಸಂಶಯ ಹೋಗಬೇಕಾದರೆ ಒಂದೇ ಒಂದು ಉಪಾಯ ಇದೆ."

ತಗ್ಗಿಸಿದ ತಲೆಯನ್ನು ಮೇಲಕ್ಕೆತ್ತದೆ ನಾನು ಮೌನವಾಗಿದ್ದೆ. ಮಾಮ ಲೇದಾರರು ಮತ್ತೆ ಹೇಳಿದರು:

"ಇಂಗ್ರೇಜ ಬಹಾದ್ದೂರ್ ಸರ್ಕಾರಕ್ಕೆ ನೀವು ನಿಷ್ಠೆಯಿಂದಿರೋದನ್ನ ಸಿದ್ಧ ಮಾಡಬೇಕಾದರೆ ಒಂದೇ ಒಂದು ಹಾದಿ ಇದೆ. ನೀವೂ ಮತ್ತು ನಿಮ್ಮ ಬಂಧು ವೆಂಕನಗೌಡ ಇಬ್ಬರೂ ಕೂಡಿ ರಾಯನ ವಿರುದ್ಧ ನಮಗೆ ಸಹಾಯ ಮಾಡಬೇಕು."

"ಎಂಥಾ ಸಹಾಯ ಸಾಹೇಬರೆ ? ಹುಕುಂ ಆಗಲಿ. ನಮ್ಮಿಂದಾದದ್ದೆಲ್ಲಾ ಮಾಡುತೀವಿ."

"ಮಾಡುತೀರಲ್ಲಾ ? ಖಂಡಿತವ್ರೋ ?"

"ಬದುಕಿಕೊಂಡೆ ಬಡ ಜೀವವೆ!" ಎಂದು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತ ನಾನು ಹಾಯಾಗಿ ಉಸಿರಾಡಿಸುತ್ತ ಸಾಹೇಬರ ಕೈಮೇಲೆ ಕೈಯಿಟ್ಟು ಸಹಾಯದ ಶಪಥ ಸ್ವೀಕರಿಸಿದೆ. ನಾನೆಂಥ ಅಗ್ನಿಪರೀಕ್ಷೆಗೆ ಸಿದ್ಧನಾಗುತ್ತಿದ್ದೆನೆಂಬುದು ನನಗಾಗ ತಿಳಿದಿರಲಿಲ್ಲ.

ಅಂದು ಮಾಮಲೇದಾರರು ಅಷ್ಟಕ್ಕೇ ಮಾತು ಮುಗಿಸಿ, ಸೀ ತಿಂಡಿ, ಬಾದಾಮಿ ಹಾಲು ತರಿಸಿಕೊಟ್ಟು, ಅತ್ತರು–ವೀಳ್ಯಗಳ ಉಪಚಾರ ಮಾಡಿ ನನ್ನನ್ನು ಕಳಿಸಿಕೊಟ್ಟರು. ಸಂಪಗಾವಿಯಿಂದ ಹೊರಟವನು ನೆಟ್ಟಗೆ ಊರಿಗೆ ಹೋಗದೆ, ನೇಗಿನಹಾಳಕ್ಕೆ ಹೋಗಿ ವೆಂಕನಗೌಡರನ್ನು ಕಂಡು ಎಲ್ಲವನ್ನೂ ತಿಳಿಸಿದೆ.

"ಆ ಮಾಮಲೇದಾರ ಬಹಳ ಬೆರಕಿ ಇದಾನೆ. ಏನೇನೋ ಯುಕ್ತಿ ಮಾಡಿ ನಿಮ್ಮ ಮನಸಿನಲ್ಲಿರೋದೆಲ್ಲಾ ತಿಳುಕೊಂಡು ಬಿಟ್ಟ. ಕಿತ್ತೂರವರಿಗೂ ನಿಮಗೂ ನೆಟ್ಟಗಿಲ್ಲ ಅನ್ನೋದನ್ನ ಅವನಿಗೆ ಹೇಳಬಾರದಾಗಿತ್ತು. ಅದನ್ನೇ ಹಿಡುಕೊಂಡು ಅವ ಏನು ಹಂಚಿಕೆ ಹಾಕ್ತಾನೋ ಯಾರು ಬಲ್ಲರು ?"

ವೆಂಕನಗೌಡರ ಆ ಮಾತಿನಿಂದಾಗಿ ಮತ್ತೆ ನಾನು ಪೂರಾ ಗಾಬರಿಗೊಂಡೆ. ಏನೋ ಹೇಳಹೋಗಿ, ಏನೇನೋ ಹೇಳಿ ಏನೋ ಮಾಡಿಕೊಂಡಂತಾಯಿತಲ್ಲ?

ಆ ರಾತ್ರಿ ನಾನು ಖೊದಾನಪುರಕ್ಕೆ ಹೊರಡಲಿಲ್ಲ. ವೆಂಕನಗೌಡರಲ್ಲಿಯೇ ಊಟ ಮುಗಿಸಿ ಅಲ್ಲಿಯೇ ವಸತಿ ಮಾಡಿದೆ. ಬೆಳಗ್ಗೆ ಎದ್ದು, ಸ್ನಾನ ಶಿವಪೂಜೆ ಮುಗಿಸಿಕೊಂಡು ನಾನು ಊರಿಗೆ ಹೊರಡಲು ಅಣಿಯಾಗುತ್ತಿದ್ದೆ. ಅಂಗಳದಲ್ಲಿ ಓಲೇಕಾರನೊಬ್ಬ ಬಂದು ವೆಂಕನಗೌಡರಿಗೆ ಒಂದು ಲಕೋಟೆ ಒಪ್ಪಿಸಿದ. ವೆಂಕನಗೌಡರೆಂದರು :

"ಮಾಮಲೇದಾರರು ತರಾತುರಿಯಿಂದ ಕೆಲಸ ಸುರುಮಾಡ್ತಿದಾರೆ ನೋಡ್ರಿ. ನಿಮ್ಮನ್ನ ಕರಕೊಂಡು ಈಗಿಂದೀಗ ಧಾರವಾಡಕ್ಕೆ ಹೊರಡಬೇಕಂತೆ. ಅವರು ಈಗಾಗಲೇ ಬೇರೆ ಹಾದಿಯಿಂದ ಹೊರಟಿರುವಂತೆ. ಖೊದಾನಪುರಕ್ಕೆ ನಿಮಗೂ ಬೇರೆ ಪತ್ರ ಕಳಿಸಿದಾರಂತೆ!"

ತಾಲೂಕಿನ ಧಣಿಯ ಆಜ್ಞೆ, ಅದರಂತೆ ನಡೆದುಕೊಳ್ಳದೆ ಬೇರೆ ಉಪಾಯವಿರಲಿಲ್ಲ. ವೆಂಕನಗೌಡರು ಪ್ರವಾಸದ ತಯಾರಿ ಮಾಡತೊಡಗಿದರು. ನಾನೂ ತ್ವರೆಯಿಂದ ಹೊರಟು, ಖೊದಾನಪುರಕ್ಕೆ ಬಂದು, ಅವಸರದಿಂದ ಊಟ ತೀರಿಸಿಕೊಂಡು ಮತ್ತೆ ಕುದುರೆಯೇರಿ ಧಾರವಾಡದ ದಾರಿಹಿಡಿದೆ.

ಮಾಮಲೇದಾರರು ನಮಗಿಂತ ಮೊದಲೇ ಅಲ್ಲಿಗೆ ಬಂದು, ಕಲೆಕ್ಟರ್ ಕಚೇರಿಯೆದುರು ನಮಗಾಗಿ ಕಾಯುತ್ತಿದ್ದರು. ನಮ್ಮ ದೇಶದ ರಾಜಮಹಾರಾಜರೆಲ್ಲರನ್ನೂ ಸೋಲಿಸಿ ರಾಜ್ಯ ವಶಪಡಿಸಿಕೊಂಡಿದ್ದ ಕೆಂಪು ಮೋರೆಯ ಸಾಹೇಬರೊಡನೆ ನಾನು ಮುಖಾಮುಖಿಯಾಗಿ ಮಾತನಾಡುವ ಪ್ರಸಂಗ ಇದೇ ಮೊದಲನೆಯದಾಗಿತ್ತು. ಇಂಗ್ರೇಜರು ಬಹಳ ನಿಷ್ಠುರರು, ಕ್ರೂರಿಗಳು, ನಿಷ್ಕರುಣಿಗಳು ಎಂಬುದಂತೂ ನನಗೆ ಗೊತ್ತೇ ಇತ್ತು. ಎಂತಲೇ, ಅಪರಿಚಿತನಾದ ಕಲೆಕ್ಟರ್ ನಿಸ್ಬತ್ ಸಾಹೇಬನ ಭೆಟ್ಟಿಗೆ ಹೋಗಬೇಕಾದರೆ ನನ್ನ ಕಾಲು ನಡುಗುತ್ತಿದ್ದುವು. ಗಂಟಲು ಆರಿ, ತುಟಿ ಒಣಗಿ ಹೋಗಿತ್ತು. ವೆಂಕನಗೌಡರೇನೋ ನನಗಿಂತ ಧೈರ್ಯಶಾಲಿಯಾದುದರಿಂದ ಆಗಲೂ ಅವರು ಗೆಲುವಾಗಿಯೇ ಇದ್ದರು.

ಕಚೇರಿಯ ಹೊರಬಾಗಿಲಲ್ಲಿ, ಬಂದೂಕುಧಾರಿ ಸಿಪಾಯಿಗಳಿಬ್ಬರು

ಕಾವಲಿದ್ದರು. ಒಳಗಿನಿಂದ ಕರೆ ಬರುತ್ತಲೂ ಬಾಗಿಲಿಗಿದ್ದ ಪರದೆಯನ್ನು ಸರಿಸಿ ನಾವು ಕಚೇರಿಯಲ್ಲಿ ಅಡಿಯಿರಿಸಿದಾಗ ಆರಡಿ ಎತ್ತರದ, ಉಗ್ರ ಮುಖ ಮುದ್ರೆಯ ಆ ಗೌರಕಾಯದ ಸಾಹೇಬನನ್ನು ಕಂಡು ನನ್ನ ಕಣ್ಣಿಗೆ ಕತ್ತಲು ಕವಿದಂತಾಯಿತು. ಮೊದಲೇ ಬೇಸಗೆಯ ದಿನ; ಅದರಲ್ಲಿ ನನಗೆ ಇಂಥ ಭಯ! ನನ್ನ ತಲೆಯಿಂದ ಕಾಲಿನವರೆಗೂ ಬೆವರಿನ ಹಳ್ಳವೇ ಹರಿದಂತಾಯಿತು.

ಸಾಹೇಬ ಉರಿಮೋರೆಯವನಾಗಿದ್ದರೂ ನಮ್ಮನ್ನು ಸೌಜನ್ಯದಿಂದಲೇ ಸ್ವಾಗತಿಸಿದ. ನನ್ನ ಬೆರಳು ಮುರಿಯುವಂತೆ ಕೈ ಕುಲುಕಿ ಕುರ್ಚಿಯಲ್ಲಿ ಕುಳಿತಿರಲು ಹೇಳಿದ. ನಮ್ಮ ಕನ್ನಡ ಮಾತು ಅವನಿಗೆ ತಿಳಿಯುತ್ತಿರಲಿಲ್ಲ. ಅವನ ಇಂಗ್ರೇಜಿ ಮಾತು ಕೃಷ್ಣರಾಯರಿಗೆ ಅರ್ಥವಾಗುತ್ತಿತ್ತು. ಸಾಹೇಬನ ಮಾತನ್ನು ನಮಗೂ ನಮ್ಮ ಮಾತನ್ನು ಸಾಹೇಬರಿಗೂ ಅವರೇ ವಿವರಿಸಿ ಹೇಳುತ್ತಿದ್ದರು.

ನನ್ನ ಮಗನನ್ನು ಬಾಪೂಸಾಹೇಬರು ದತ್ತಕ ತೆಗೆದುಕೊಳ್ಳದಿದ್ದ ವಿಷಯ ಪ್ರಸ್ತಾಪಿಸಿ, ನನ್ನ ಮಗನಿಗೆ ಸಂಸ್ಥಾನ ದೊರೆಯದಿದ್ದ ಬಗೆಗೆ ವಿಷಾದ ವ್ಯಕ್ತಗೊಳಿಸಿ ಸಾಹೇಬ ನೇರವಾಗಿ ಸವಾಲು ಹಾಕಿದ:

"ನಿಮಗೆ ಇಂಥಾ ಅನ್ಯಾಯಮಾಡಿದ ಜನರಿಗೆ ನೀವಂತೂ ಸಹಾಯ ಮಾಡಲಿಕ್ಕಿಲ್ಲ. ಹೌದಲ್ಲೋ ?"

"ಇಲ್ಲ, ಸಾಹೇಬರೆ. ಖಂಡಿತ ಇಲ್ಲ."

"ನಾನೂ ಹಾಗೇ ತಿಳಿದುಕೊಂಡಿದ್ದೆ. ಆದರೆ, ಆಸ್ತಿಯ ಆಸೆ ಅಂದರೆ ಬಹಳ ಕೆಟ್ಟದು ನೋಡಿರಿ. ಈಗ ನಮ್ಮ ವಿರುದ್ಧ ಬಂಡು ಮಾಡಿ ಕಿತ್ತೂರ ರಾಜ್ಯ ಮತ್ತೆ ವಶಪಡಿಸಿಕೊಂಡು ನಿಮಗೂ ಅರ್ಧ ಪಾಲು ಕೊಡ್ತೇವಂತ ವೀರಮ್ಮ ದೇಸಾಯಿಣಿಯ ಕಡೆಯವರು ನಿಮಗೆ ಹೇಳಿದಾರಂತಲ್ಲ ? ನೀವೂ ಆದಕ್ಕೆ ಒಪ್ಪಿಗೆ ಕೊಟ್ಟಂತಾಗಿದೆ ಅಂತ ವರದಿಯಿದೆ," ಎಂದ ಸಾಹೇಬ.

"ಸುಳ್ಳು ಸಾಹೇಬರೆ. ಸುಳ್ಳು."

"ಅದೆಲ್ಲಾ ಸುಳ್ಳು ಅಂತ ಸಿದ್ಧವಾಗಬೇಕಲ್ಲ ? ನಮ್ಮ ಮೇಲಿನ ಸಾಹೇಬರು ಒಪ್ಪಬೇಕಲ್ಲ?" ಎಂದು ಪ್ರಶ್ನಿಸಿ, ಸ್ವಲ್ಪ ತಡೆದು ಸಾಹೇಬ ಹೇಳಿದ: "ನಿಜ ಹೇಳೋದೇ ಆದರೆ, ನಿಮ್ಮಿಬ್ಬರನ್ನೂ ಬಂಧಿಸಿ ನಿಮ್ಮ ಹೊಲ ಮನೆ ಜಪ್ತ್ ಮಾಡಬೇಕಂತ ಮುಂಬಯಿಯಿಂದ ಗವರ್ನರ್ ಸಾಹೇಬರ ಹುಕುಂ ಆಗಿದೆ."

ವೆಂಕನಗೌಡರು ಅಂಜಿದರೋ ಇಲ್ಲವೋ? ನಾನು ಮಾತ್ರ ಪೂರಾ ಅಂಜಿಕೊಂಡೆ. ಈ ಇಂಗ್ರೇಜರ ರಾಜ್ಯದಲ್ಲಿ ಏನು ಬೇಕಾದರೂ ಆಗಬಹುದು. ಅವರು ಯಾರನ್ನು ಯಾವಾಗ ಹಿಡಿದಾರು, ಯಾರ ಆಸ್ತಿ ಜಪ್ತ ಮಾಡಿ ಯಾರು ಎಂಬುದರದೇನೂ ಭರವಸೆಯಿರಲಿಲ್ಲ. ಇವರು ಮಾತ್ರ ಯಾಕೆ? ಸ್ವತಃ ನಮ್ಮ ಕಿತ್ತೂರ ಮಲ್ಲಸರ್ಜ ದೊರೆಗಳೇ ಸಂಶಯ ಬಂದಾಗಲೆಲ್ಲ ಗೌಡರನ್ನೂ ದೇಶಪಾಂಡೆಗಳನ್ನೂ ಹಿಡಿದು ಅವರ ವತನಗಳನ್ನು ಕಿತ್ತು ಕೊಂಡಿರಲಿಲ್ಲವೇ? ರಾಜ್ಯಕರ್ತರೆಲ್ಲ ಹೀಗೆಯೇ.

ನಾನು ಹಾಗೆ ಯೋಚಿಸುತ್ತಿದ್ದಂತೆಯೇ ವೆಂಕನಗೌಡರು ಧ್ವನಿಯೆತ್ತಿ ಸಮಾಧಾನದ ಸ್ವರದಲ್ಲಿಯೇ ಹೇಳಿದರು:

"ನಾವೀಗ ಏನು ಮಾಡಿದರೆ ನಮ್ಮ ಮೇಲಿನ ಸಂಶಯ ಹೋಗುತ್ತದೆ ಸಾಹೇಬರೇ?"

"ಇದೀಗ ಜಾಣತನದ ನಿಲುವು." ಸಾಹೇಬ ಕೈ ತಟ್ಟಿ, ಚಪ್ಪಾಳೆ ಹಾಕಿ ನಗುನಗುತ್ತ ಹೇಳಿದ:

"ಈಗ, ನೀವು ನಮಗೆ ಪ್ರತ್ಯಕ್ಷವಾಗಿ ಸಹಾಯ ಮಾಡಿ ಕಂಪನಿ ಸರಕಾರಕ್ಕೆ ನಿಮ್ಮ ಸ್ನೇಹವನ್ನು ಸಿದ್ಧಗೊಳಿಸಬೇಕು."

"ಅಪ್ಪಣೆಯಾಗಲಿ ಸಾಹೇಬರೆ."

"ಹಳ್ಳಿಪಳ್ಳಿ ಸುಟ್ಟು ಸುಲಿದು, ಕಚೇರಿಗಳಿಗೆ ಬೆಂಕಿಯಿಟ್ಟು, ಸರ್ಕಾರಿ ಹಣ ಕೊಳ್ಳೆ ಹೊಡೆದು ತೊಂದರೆ ಕೊಡುತ್ತಿರುವ ಆ ಬಂಡುಗಾರನನ್ನು ನೀವು ಯುಕ್ತಿಯಿಂದ ಹಿಡಿದು ಕೊಡಬೇಕು-"

ನಾನು ಅಂಜುಬುರುಕನೆಂಬುದೇನೋ ನಿಜ. ಆದರೆ, ಇಂಥ ಹೇಸಿ ಕೆಲಸಕ್ಕೆ ತಯಾರಾಗುವಷ್ಟು ನೀಚ ಮಾತ್ರ ಅಲ್ಲ. ಸಾಹೇಬ ಹೇಳುವುದೇನು? ನಾವು ಫಿತೂರಾಗಬೇಕು! ರಾಯಣ್ಣನನ್ನು ನಂಬಿಸಿ ದ್ರೋಹ ಮಾಡಬೇಕು. ಪ್ರಸಿದ್ಧ ಮನೆತನದ ಗೌಡರಾದ ನಾವು ಇಂಥ ಅಧಮ ಕೃತ್ಯ ಮಾಡುವುದಾದರೂ ಹೇಗೆ? ನನ್ನ ಕಣ್ಣೆದುರು ಮತ್ತೆ ಕತ್ತಲು ಕವಿಯಿತು. ನಾಲಗೆ ಒಣಗಿ ಮಾತೇ ಹೊರಡದಂತಾಯಿತು.

ಸಾಹೇಬನ ಸೂಚನೆಯನ್ನೊಪ್ಪಿಕೊಳ್ಳದೆ ಬೇರೆ ಮಾರ್ಗವೂ ಇರಲಿಲ್ಲ. "ಆಗುವುದಿಲ್ಲ"ವೆಂದು ನಾವು ಹೇಳಿದರೆ ಆಗಿಂದಾಗ ನಮ್ಮನ್ನು ಬಂಧಿಸುವ

ಆಜ್ಞೆ ವಿಧಿಸದೆ ಬಿಡುತ್ತಿರಲಿಲ್ಲ ಸಾಹೇಬ. ರಾಯಾಗೆ ನಾವು ಸಹಾಯ ಮಾಡಿದಂತೆ ಆರೋಪ ಹೊರಿಸಿ ನಮ್ಮನ್ನು ಗಲ್ಲಿಗಾದರೂ ಏರಿಸಬಹುದಾಗಿತ್ತು. ಅಥವಾ, ಕರಿನೀರಿನ ಶಿಕ್ಷೆ ವಿಧಿಸಿ ಸಮುದ್ರದಾಚೆ ತಳ್ಳಬಹುದಾಗಿತ್ತು. ಆಸ್ತಿಪಾಸ್ತಿ ಜಪ್ತಾಗಿ ಹೆಂಡಿರು ಮಕ್ಕಳು ಉಪವಾಸ ವನವಾಸ ಅನುಭವಿಸುವ ಪ್ರಸಂಗ ಬರುತ್ತಿತ್ತು.

"ಮಾಮಲೇದಾರರು ಹೇಳಿದಂತೆ ನಡಕೊಂಡು ಈ ಬಂಡುಗಾರನ್ನ ಹಿಡಿದು ಕೊಟ್ಟರೆ ನಿಮ್ಮ ಸದ್ಯದ ವತನಗಳನ್ನು ಖಾಯಂ ಮಾಡೋದು ಅಲ್ಲದೆ ನಿಮ್ಮಿಬ್ಬರಿಗೂ ವಂಶಪರಂಪರಾಗತ ನಡೆಯುವಂತೆ ಮತ್ತಷ್ಟು ಭೂಮಿ ಇನಾಂ ಕೊಡಿಸುತ್ತೇವೆ. ಆಗಬಹುದೋ ?"

ವೆಂಕನಗೌಡರಿಗೂ ನನ್ನಂತೆಯೇ ಸಂಕಟಕ್ಕಿಟ್ಟುಕೊಂಡಿದ್ದುದು ಸ್ಪಷ್ಟವಾಗಿತ್ತು. ಆದರೆ, ಅವರು ಯಾವಾಗಲೂ ನನಗಿಂತಲೂ ಹೆಚ್ಚು ವ್ಯವಹಾರ-ಚತುರರು. ಎಂತಲೇ ಸಂದರ್ಭವನ್ನೆಲ್ಲ ಥಟ್ಟನೆ ಅಳೆದು ನೋಡಿ ಅವರು ಗಂಭೀರವಾಗಿಯೇ ಹೇಳಿದರು :

"ಅಪ್ಪಣೆ ಸಾಹೇಬರೆ.

ರಾಯಣ್ಣನನ್ನು ಹಿಡಿದುಕೊಡುವಲ್ಲಿ ಇಂಗ್ರೇಜರಿಗೆ ಸಹಾಯ ಮಾಡುವು ದಾಗಿ ಕಲೆಕ್ಟರ್ ಸಾಹೇಬನಿಗೆ ವಚನ ಕೊಟ್ಟು ಊರಿಗೆ ಬರುತ್ತಿದ್ದಂತೆ ಲಿಂಗನಗೌಡರು ಹಾದಿಯುದ್ದಕ್ಕೂ ಗೋಳಾಡುತ್ತಲೇ ಇದ್ದರು:

"ಇಂಥಾ ಕೆಲಸ ನಮ್ಮಂಥವರು ಹ್ಯಾಗೆ ಮಾಡೋದು ? ಕೂದಲೆಳೆ ಯಿಂದ ಕುತ್ತಿಗೆ ಕೊಯ್ಯುವ ಹೇಸಿ ಕೆಲಸ! ಛೆ....ಛೆ....ಇದರಿಂದ ನಮಗೇನು ಸುಖವಾಗುವದಿಲ್ಲ. ಜನ್ಮಜನ್ಮಾಂತರದವರೆಗೆ ರಾಯನ ಶಾಪ ಬಡೀತದ ನಮಗೆ !" ಇತ್ಯಾದಿ....ಇತ್ಯಾದಿ....

ನಮ್ಮ ಲಿಂಗನಗೌಡರೆಂದರೆ ಯಾವಾಗಲೂ ಹೀಗೆಯೇ. ಯಾವ ಕೆಲಸ ವನ್ನೂ ಒಂದು ಸ್ಥಿರವಾದ ಮನಸ್ಸಿನಿಂದ ಮಾಡುವವರಲ್ಲ. ಮಾಡಲೋ ? ಬೇಡವೋ ? ಮಾಡಲೋ ? ಬೇಡವೋ ? ಎಂಬ ಹೊಯ್ದಾಟವೇ ಯಾವಾ ಗಲೂ. ಖೊದಾನಪುರದ ಗೌಡರ ಮನೆತನದಲ್ಲಿ ಇಂಥ ಚಂಚಲ ಮನಸ್ಸಿನ ವರು ಹ್ಯಾಗೆ ಹುಟ್ಟಿದರೋ ಅಂತ ನನಗೆ ಆಶ್ಚರ್ಯ.

"ಆದದ್ದು ಆಗಿ ಹೋಯ್ತಲ್ಲ ಗೌಡರೇ ? ಈಗ ಹಳಹಳಿಸಿ ಏನುಪ ಯೋಗ ? ನಿಮಗೆ ಅಷ್ಟು ಕಳಕಳಿಯಿದ್ದರೆ ಸಾಹೇಬನ ಮುಂದೆ ಆಗಲೇ ಹೇಳಿಬಿಡಬಹುದಾಗಿತ್ತಲ್ಲ ? ಈ ಕೆಲಸ ನಮ್ಮಿಂದಾಗುವದಿಲ್ಲಾ ಅಂತ ? ಅವ ನೆದುರು ಒಪ್ಪಿಕೊಂಡು ಬಂದು ಈಗ ಹೀಗೆ ಗೋಗರೆದರೆ ಹ್ಯಾಗೆ ? ಸರಿಯೋ-ತಪ್ಪೋ-ಈ ಕೆಲಸ ಮಾಡಿಕೊಡ್ತೀವಿ ಅಂತ ವಚನಕೊಟ್ಟು ಬಂದೀವಿ. ಪಾಪ-ಪುಣ್ಯ-ಸ್ವರ್ಗ-ನರಕ ಅಂತ ಯಾವ ವಿಚಾರವನ್ನೂ ತಲೆಗೆ ಹಾಕಿಕೊಳ್ಳದೆ, ಕೊಟ್ಟ ವಚನದಂತೆ ನಡೆದುಕೊಳ್ಳಬೇಕು. ಅಷ್ಟೆ" ಎಂದು ಹೇಳಿದೆ.

ಆದರೂ ಗೌಡರ ಕಿರಿಕಿರಿಯೇನು ನಿಲ್ಲಲಿಲ್ಲ. ಖೊದಾನಪುರ ಬರುವವ ರೆಗೂ ಅವರು ಪಶ್ಚಾತ್ತಾಪದಿಂದ ತಮ್ಮ ದುಃಖ ತೋಡಿಕೊಳ್ಳುತ್ತಲೇ ಇದ್ದರು.

ಮಾಮಲೇದಾರರ ಸೂಚನೆಯ ಪ್ರಕಾರ ಮರುದಿವಸವೇ ರಾಯನ ಕಡೆಗೆ ತಳವಾರನನ್ನು ಕಳಿಸಿ ನಾವು ದಂಡು ತೆಗೆದುಕೊಂಡು ಬಂದು ಅವ ನನ್ನು ಕೂಡಿಕೊಳ್ಳುವ ಬಗೆಗೆ ತಿಳಿಸಿದೆವು. ಆ ಹುಂಬ ಹಳಬನಿಗಂತೂ ನಮ್ಮ

ಬಗೆಗೆ ಸಂಶಯ ಬಂದಂತೆ ಕಾಣಿಸಲಿಲ್ಲ. ನಮ್ಮ ತಳವಾರನ ಸಂಗಡ ತನ್ನ ಅನುಯಾಯಿಯೊಬ್ಬನನ್ನು ಕಳಿಸಿ, ಆದಷ್ಟು ಬೇಗ ಸೈನ್ಯದೊಡನೆ ಬಂದು ಬಿಡಲು ತಿಳಿಸಿದ. ನಮ್ಮ ಸೈನ್ಯವೂ ತಯಾರಾಗಿಯೇ ಇತ್ತು! ಅದನ್ನು ಕೂಡಿಸಲು ನಾವೇನೂ ಕಷ್ಟಪಡಬೇಕಾಗಿರಲಿಲ್ಲ. ತನ್ನ ಕೈಯಲ್ಲಿಯ ಸೈನ್ಯದ ಒಂದು ಭಾಗವನ್ನೇ ನಮ್ಮ ವಶಕ್ಕೆ ಕೊಟ್ಟಿದ್ದ ಮಾಮಲೇದಾರ. ಇಂಗ್ರೇಜರು ಕೊಟ್ಟ ಬಟ್ಟೆಬರೆಗಳನ್ನು ಬಿಟ್ಟುಕೊಟ್ಟು, ಕಿತ್ತೂರ ದೇಸಾಯರ ಸೈನಿಕರು ಹಾಕಿಕೊಳ್ಳುತ್ತಿದ್ದಂಥ ವಸ್ತ್ರಗಳನ್ನೇ ಧರಿಸಿ ಸಿದ್ಧವಾಗಿತ್ತು ಸೈನ್ಯ. ಅದನ್ನು ನೋಡಿದವರಾರಿಗೂ ಅದು ಇಂಗ್ರೇಜರದೆಂಬ ಸಂಶಯ ಬರುವಂತಿರಲಿಲ್ಲ.

ಅಪರಿಚಿತರಿಗೆ ಪ್ರವೇಶಿಸಲು ಅಶಕ್ಯವಾದಂಥ ದಟ್ಟಡವಿಯ ನಡುವೆ ಇದ್ದ ರಾಯನ ಗುಪ್ತ ಸ್ಥಳಕ್ಕೆ ನಮ್ಮನ್ನೂ ನಮ್ಮ ಸೈನ್ಯವನ್ನೂ ಕರೆದುಕೊಂಡು ಬಂದ ಅವನ ಅನುಯಾಯಿ. ಕೊಳ್ಳದಲ್ಲಿನ ಚಿಕ್ಕ ಚಿಕ್ಕ ಗುಹೆಗಳಲ್ಲಿ ರಾಯಾ ಮತ್ತು ಅವನ ಸೈನಿಕರು ಬಿಡಾರ ಮಾಡಿದ್ದರು. ರಾಯನ ಗುಹೆಯ ಸುತ್ತಲೂ ಹಬಸೀ ಸೈನಿಕರ ಬಲವಾದ ಪಹರೆಯಿತ್ತು. ಹೊಸದಾಗಿ ಬಂದು ಸೇರಿಕೊಂಡ ನಮ್ಮನ್ನು ಅವರು ಪೂರ್ಣವಾಗಿ ನಂಬಿದಂತೆ ಕಾಣಿಸಲಿಲ್ಲ.

ರಾಯಾನ ಗುಹೆಗೆ ಹೋಗಿ ಅವನೆದುರು ನಿಂತಾಗ ಮೊದಮೊದಲು ಅವನನ್ನು ಗುರುತಿಸುವುದೇ ಶಕ್ಯವಾಗಲಿಲ್ಲ. ದಂಗೆಗಾರಂಭಿಸಿದಂದಿನಿಂದ ಆತ ಗಡ್ಡವನ್ನೇ ತೆಗೆಸಿರಲಿಲ್ಲವೋ ಏನೋ. ಎದೆಯವರೆಗೆ ಬೆಳೆದಿದ್ದ ದಟ್ಟವಾದ ಗಡ್ಡವೂ, ಹುರಿಗೊಳಿಸಿ ತಿರುವಿದ ಮೀಸೆಯೂ ಅವನ ಮುಖವನ್ನು ರೌದ್ರವಾಗಿಸಿದ್ದುವು. ನಡುವಿನ ಪಟ್ಟಿಯಿಂದ ಕಠಾರಿ ನೇತಾಡುತ್ತಿತ್ತು. ಗುಹೆಯ ಗೋಡೆಗಳಿಗೆ ಗೂಟ ಬಡಿದು ಕತ್ತಿ, ಗುರಾಣಿ, ಬಂದೂಕುಗಳನ್ನು ನೇತು ಹಾಕಲಾಗಿತ್ತು.

ಲಿಂಗನಗೌಡರೊಬ್ಬರೇ ಬರಬಹುದೆಂದು ರಾಯ ಭಾವಿಸಿದ್ದನೋ ಏನೊ. ನನ್ನನ್ನು ಕಂಡು ಅವನಿಗೆ ಸಂತೋಷವಾದಂತೆ ಕಾಣಿಸಲಿಲ್ಲ. ಆದರೂ ಔಪಚಾರಿಕವಾಗಿ ನಮ್ಮಿಬ್ಬರನ್ನೂ ಸ್ವಾಗತಿಸಿ, ಹಣ್ಣು ಹಾಲು ವೀಳ್ಯ ತರಿಸಿಕೊಟ್ಟು ಉಪಚರಿಸಿದ.

"ನೀವಿಬ್ಬರೂ ಬಂದು ಬಹಳ ಉಪಕಾರ ಮಾಡಿದಿರಿ ಗೌಡರೆ. ನಿಮ್ಮ

ಉಪಕಾರ ಹ್ಯಾಗೆ ತೀರಿಸೋದೋ ಗೊತ್ತಾಗುವುದಿಲ್ಲ."

("ನಿನ್ನಿಂದಾಗಿ ನಮ್ಮಿಬ್ಬರಿಗೂ ದೊಡ್ಡ ದೊಡ್ಡ ಇನಾಮು ಸಿಗತಾವೆ, ಅದೇ ನೀ ತೀರಿಸುವ ಉಪಕಾರ !" ಎಂದು ನಾನು ಮನಸ್ಸಿನಲ್ಲಿಯೇ ಹೇಳಿಕೊಂಡೆ !)

ಲಿಂಗನಗೌಡರ ಕರುಳಿನಲ್ಲಿ ಕಲಮಲವಾಗುತ್ತಿದ್ದಿತೊ ಏನೋ. ದೃಷ್ಟಿಯೆತ್ತಿ, ರಾಯನನ್ನು ನೋಡುವುದಕ್ಕೂ ಧೈರ್ಯವಾಗದೆ ಅವರು ತಲೆತಗ್ಗಿಸಿಕೊಂಡು ಕುಳಿತಿದ್ದರು. ರಾಯನ ಎದುರು ಹಾಗೆಲ್ಲ ವರ್ತಿಸಬಾರದೆಂದು ನಾನು ಅವರಿಗೆ ಪರಿಪರಿಯಾಗಿ ಹೇಳುತ್ತ ಬಂದಿದ್ದರೂ ಕಡೆಗೂ ಅವರು ತಮ್ಮ ಸ್ವರೂಪದರ್ಶನ ಮಾಡಿಸದೆ ಬಿಡಲಿಲ್ಲ.

ರಾಯಾ ಮಾತನಾಡುತ್ತಿದ್ದ.

"ನಾನಂತೂ ಹೇಳಿ ಕೇಳಿ ಹಳಬ. ನಿಮ್ಮಂತ ದೊಡ್ಡ ಮನೆತನದವನಲ್ಲ. ಕಲಿತವನೂ ಅಲ್ಲ. ಅಂಥಾ ಜಾಣನೂ ಅಲ್ಲ. ಇಂಥಾ ಪ್ರಚಂಡ ಇಂಗ್ರೇಜ ಸರಕಾರವನ್ನು ಈ ಸೊಟ್ಟ ಹಳಬ ಏನು ಓಡಿಸ್ತಾನ ? ಅಂತ ಇದುವರೆಗೆ ಅವರಿವರು ನಗುತ್ತಿದ್ದರಂತೆ ! ಈಗ ನಿಮ್ಮಂಥಾ ದೊಡ್ಡ ದೊಡ್ಡ ಗೌಡರೂ ಇನಾಮದಾರರೂ ನಮ್ಮ ಸಂಗಡ ಕೂಡಿಕೊಂಡೀರಿ. ನಮ್ಮ ದಂಡಿಗೊಂದು ಮರ್ಯಾದೆ ಬಂತು ನಿಮ್ಮಿಂದ !"

"ಇರಲಿ ಬಿಡಪಾ ರಾಯಾ, ನಾವೂ ಕಿತ್ತೂರ ದೇಸಾಯಿರ ಉಪ್ಪು ತಿಂದೀವಿ. ಅವರ ಋಣಾ ತೀರಿಸುವ ಕಾಲ ಬಂದಾಗ ನಾವು ಸುಮ್ಮನಿರಲಿಕ್ಕಾಗ್ತದೇನು ? ನಮ್ಮ ಕರ್ತವ್ಯ ಅಂತ ನಾವೂ ಬಂದೀವಿ !" ಎಂದೆಲ್ಲ ಸವಿಸವಿ ಮಾತು ಆಡಿ ರಾಯನನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದೆ. ಅವನು ನನ್ನನ್ನು ನಂಬಿದನೋ ಇಲ್ಲವೋ ಅವನಿಗೇ ಗೊತ್ತು ! ಬಿಚ್ಚುಗತ್ತಿ ಚೆನ್ನಬಸಪ್ಪ, ಗಜವೀರ, ಬೆಳವಡಿ ಯಲ್ಲನಾಯಕ ಮೊದಲಾದ ಅವನ ಆಪ್ತಮಿತ್ರರು ಮಾತ್ರ ನಮ್ಮ ಬಗೆಗೆ ಸಂಶಯವಿಟ್ಟುಕೊಂಡೇ ಇದ್ದುದು ಅವರ ವರ್ತನೆಯಿಂದ ಸ್ಪಷ್ಟವಾಗುತ್ತಿತ್ತು. ಅವರಾದಿ ವೀರಪ್ಪ ಮತ್ತು ಮಾಸ್ತಮರಡಿಯ ಶಿವಲಿಂಗ ಬೇರೊಂದು ಕೊಳ್ಳದಲ್ಲಿದ್ದುದರಿಂದ ನಮಗೆ ಅವರ ಭೆಟ್ಟಿಯಾಗಲಿಲ್ಲ.

ಲಿಂಗನಗೌಡರಿಗೂ ನನಗೂ ಬೇರೊಂದು ಗುಹೆಯಲ್ಲಿ ವಸತಿಯ ವ್ಯವಸ್ಥೆಯಾಯಿತು. ರಾಯಾನ ಗುಹೆಯಿಂದ ನೂರಿನ್ನೂರು ಹೆಜ್ಜೆಗಳಷ್ಟು ದೂರದಲ್ಲಿತ್ತು ಈ ಗುಹೆ. ನಮ್ಮ ಸೈನಿಕರೂ ಅವನ ದಂಡಿನವರ ಸಂಗಡ ಬೆರೆಯದೆ, ನಮ್ಮ ಗುಹೆಯ ಸುತ್ತ ಮುತ್ತ ಇದ್ದ ಗಿಡಮರಗಳ ಕೆಳಗೆ ಬಿಡಾರ ಹೂಡಿದ್ದರು. ಬೇಸಗೆಯ ಮಧ್ಯಕಾಲವಾದುದರಿಂದ ಆಗ ಮಳೆಯ ತೊಂದರೆಯೂ ಇರಲಿಲ್ಲ. ಗಿಡಗಳ ಅಡಿಯಲ್ಲಿ ಹಾಯಾಗಿ ಮಲಗಿ ನಿದ್ರಿಸ ಬಹುದಾಗಿತ್ತು. ಊಟ–ತಿಂಡಿ ಹಾಲು–ಹಣ್ಣು ಯಾವುದಕ್ಕೂ ಏನೂ ಕೊರತೆ ಇರಲಿಲ್ಲ. ಸಮೀಪದ ಹಳ್ಳಿಗಳಿಂದ ಎಲ್ಲವೂ ಸರಬರಾಜಾಗುತ್ತಿತ್ತು.

ಇನ್ನೂ ನಾಲ್ಕೈದು ನೂರು ಜನರನ್ನು ಕೂಡಿಸಿಕೊಂಡು ಕಿತ್ತೂರಿನ ಮೇಲೆ ದಾಳಿ ಮಾಡಿ ಅದನ್ನು ವಶಪಡಿಸಿಕೊಳ್ಳುವ ವಿಚಾರದಲ್ಲಿದ್ದ ರಾಯಾ. ಸೈನಿಕರನ್ನು ಕಲೆ ಹಾಕುವುದಕ್ಕಾಗಿ ಅವನ ಅನುಯಾಯಿಗಳು ಹಳ್ಳಿ–ಪಳ್ಳಿ ಸುತ್ತುತ್ತಿದ್ದರು. ಬಿಚ್ಚುಗತ್ತಿ ಚೆನ್ನಬಸಪ್ಪನೂ ಅದೇ ಕೆಲಸಕ್ಕಾಗಿ ಯಾವುದೋ ಊರಿಗೆ ಹೊರಟು ಹೋಗಿದ್ದ. ರಾಯಾನನ್ನು ನೆರಳಿನಂತೆ ಹಿಂಬಾಲಿಸುತ್ತಿದ್ದ ಚೆನ್ನಬಸಪ್ಪ ಇಲ್ಲದಿದ್ದಾಗಲೇ ಯುಕ್ತಿ ಹೂಡಿ ರಾಯಾನನ್ನು ಸೆರೆಹಿಡಿಯ ಬೇಕೆಂದು ನಾವು ಯೋಚಿಸಿಕೊಂಡಿದ್ದೆವು. ಆದರೆ, ನಮ್ಮ ಜೊತೆಗಿದ್ದರೂ ನಮ್ಮಿಂದ ತುಸು ದೂರದಲ್ಲಿಯೇ ಇರುತ್ತಿದ್ದ ರಾಯಾನನ್ನು ಹಿಡಿಯುವ ಸಂಧಿ ಬೇಗನೆ ಪ್ರಾಪ್ತವಾಗಲಿಲ್ಲ.

ಒಂದು ಸಂಜೆ ಗಿಡದಹುಬ್ಬಳ್ಳಿಗೆ ಮುತ್ತಿಗೆ ಹಾಕಿ ಸಾಹುಕಾರರನ್ನು ಸುಲಿಯುವ ಕಾರ್ಯಕ್ರಮ ಗೊತ್ತಾಯಿತು. ಅಂಥ ಕೃತ್ಯದಲ್ಲಿ ಭಾಗವಹಿಸಲು ನಮಗೆ ಮನಸ್ಸಿರದಿದ್ದರೂ ನಾವು ರಾಯನ ಸಂಗಡ ಹೋಗಲೇಬೇಕಾ ಯಿತು. ಸುಲಿಗೆಯ ಕೆಲಸ ನಡೆದಿದ್ದಾಗ ನಾವು ಅದರಲ್ಲಿ ಉತ್ಸಾಹ ವ್ಯಕ್ತ ಗೊಳಿಸದಿದ್ದುದನ್ನು ಕಂಡು ರಾಯಾ ಮತ್ತು ಅವನ ಅನುಯಾಯಿಗಳಿಗೆ ನಮ್ಮ ಮೇಲಿನ ಸಂಶಯ ಹೆಚ್ಚಾಗಿರಲು ಸಾಕು. ಅವರು ತಮ್ಮ ತಮ್ಮಲ್ಲಿಯೇ ಪಿಸುದನಿಯಲ್ಲಿ ಮಾತನಾಡಿಕೊಂಡದ್ದರ ಮೇಲೆ ನಾವು ಆ ಅನುಮಾನಕ್ಕೆ ಬಂದೆವು. ಅವರು ನಮ್ಮ ವಿರುದ್ಧ ಕತ್ತಿಯೆತ್ತುವ ಮೊದಲೇ ಹೇಗಾದರೂ ಸಂಧಿ ಸಾಧಿಸಿ ರಾಯಾನನ್ನು ಹಿಡಿಯಬೇಕೆಂದು ನಿಶ್ಚಯಿಸಿಕೊಂಡೆವು.

ನಮ್ಮ ಹಳಬರಲ್ಲೊಬ್ಬನಾದ ಪುಟದುಮ್ಮಣ್ಣನವರ ಲಕ್ಕನಿಗೂ ರಾಯಾಗೂ ಗೆಳೆತನವಿತ್ತು. ಅವರ ಮನೆತನಗಳಲ್ಲಿ ಶರೀರ ಸಂಬಂಧವೂ ಇದ್ದಿತಂತೆ. ನಮ್ಮ ಗುಂಪಿನಲ್ಲೆಲ್ಲ ರಾಯಾನ ಪೂರ್ಣ ವಿಶ್ವಾಸಕ್ಕೆ ಪಾತ್ರ ನಾಗಿದ್ದವನೆಂದರೆ ಲಕ್ಕನೊಬ್ಬನೇ. ಎಂತಲೇ ಅವನನ್ನೇ ಉಪಯೋಗಿಸಿ ಕೊಂಡು ರಾಯಾನನ್ನು ಹಿಡಿದು ಹಾಕಬೇಕೆಂದು ವಿಚಾರಮಾಡಿ, ಲಕ್ಕನನ್ನು ಹೆದರಿಸಿ ಬೆದರಿಸಿ ಹೊಲ ಮನೆ ಇನಾಮುಗಳ ಆಸೆ ತೋರಿಸಿ ಕಡೆಗೂ ಆತ ಒಪ್ಪುವಂತೆ ಮಾಡಿದವು. ಆತ ಯಾವಾಗಲೂ ರಾಯಾನ ಸಂಗಡವೇ ಇರ ಬೇಕು, ಯೋಗ್ಯವಾದ ಸಮಯ ಸಾಧಿಸಿ, ರಾಯಾನ ಮೈಗಾವಲ ಪಡೆಯ ವರನ್ನು ಬೇರೆ ಕಡೆ ಕಳಿಸಿ ನಮಗೆ ಸೂಚನೆ ಕೊಡಬೇಕೆಂದು ಗೊತ್ತಾ ಯಿತು.

ಗಿಡದಹುಬ್ಬಳ್ಳಿಯ ಲೂಟಿಯಿಂದ ಹಿಂತಿರುಗಿ, ರಾಯಾನ ಗುಪ್ತಸ್ಥಳ ವಾದ ಡೋರಿಯ ಗುಡ್ಡಕ್ಕೆ ನಾವು ಬಂದಾಗ ನಡುಹಗಲಿನ ಸಮಯ ವಾಗಿತ್ತು. ದೂರದ ದಾರಿ ಕ್ರಮಿಸಿ ಬಂದಿದ್ದುದರಿಂದ ದಂಡಿನವರಿಗೆಲ್ಲ ಹಸಿ ವಾಗಿತ್ತು. ಎಂತಲೇ ಸೈನಿಕರು ಸ್ನಾನದ ವಿಚಾರವನ್ನೂ ಮರೆತು ಊಟದಲ್ಲಿ ತೊಡಗಿದ್ದರು. ರಾಯಾ ಊಟದ ಬಗೆಗೆ ಎಂದೂ ಅವಸರ ಮಾಡುತ್ತಿರಲಿಲ್ಲ. ದಂಡಿನವರೆಲ್ಲರ ಊಟ ಮುಗಿದ ಮೇಲೆಯೇ ಆತ ಉಣ್ಣುತ್ತಿದ್ದ.

“ನಿನ್ನಿನಿಂದ ತಿರುಗಿತಿರುಗಿ ಬೆವರಾಗಿ ಮೈಯೆಲ್ಲಾ ಹೊಲಸು ನಾರು ತೈತಪಾ ರಾಯಣ್ಣಾ. ಮಡದಾಗ ಒಂದೀಟು ಈಸಾಡಿ ಬರೂಣು ಬಾ,” ಎಂದು ಲಕ್ಕ ಸೂಚಿಸಿದಾಗ ರಾಯಾ ಸಂತೋಷದಿಂದಲೇ ಅವನ ಜೊತೆಗೆ ಹೊರಟ. ಆದರೂ, ಆಗಲೂ ಅವನ ಖಡ್ಗ ಅವನ ಕೈಯಲ್ಲಿಯೇ ಇತ್ತು.

ಗುಡ್ಡದಿಂದ ನೂರಿನ್ನೂರು ಮಾರು ದೂರದಲ್ಲಿ ಡೋರಿಯ ಹಳ್ಳ ಹರಿಯುತ್ತಿತ್ತು. ಒಂದು ತಿರುವಿನಲ್ಲಿ ದೊಡ್ಡ ಮಡುವಾಗಿ ಅಲ್ಲಿ ಯಾವಾಗಲೂ ನೀರು ವಿಪುಲವಾಗಿರುತ್ತಿತ್ತು. ಮಡುವಿನ ಮೇಲೆ ದೊಡ್ಡ ದೊಡ್ಡ ಗಿಡಗಳು ಬೆಳೆದಿದ್ದುದರಿಂದ ಹಳ್ಳದ ಆ ಭಾಗ ತುಂಬ ತಂಪಾಗಿದ್ದು ಈಜಾಡಲು ಬಹಳ ಚೆನ್ನಾಗಿತ್ತು. ಅಲ್ಲದೆ ಅಲ್ಲಿ ಆಕಸ್ಮಾತ್ತಾಗಿ ಯಾವುದೊಂದು ಘಟನೆ ನಡೆದರೆ ಗುಡ್ಡದ ಮೇಲಿದ್ದವರಿಗೆ ತಕ್ಷಣ ತಿಳಿಯುತ್ತಿರಲಿಲ್ಲ. ರಾಯಾನನ್ನು ಹಿಡಿಯಲು ಅದೇ ಯೋಗ್ಯವಾದ ತಾಣವೆಂದು ನಾನು ಮೊದಲೇ ತಿಳಿಸಿದ ಪ್ರಕಾರ

ನಮ್ಮ ಕಡೆಯ ಆರು ಜನ ಗಟ್ಟಿಗರು ಯಾರಿಗೂ ತಿಳಿಯದಂತೆ ಅಲ್ಲಿಗೆ ಹೋಗಿ ಗಿಡಗಂಟಿಗಳಲ್ಲಿ ಅವಿತುಕೊಂಡಿದ್ದರು.

ನಾವು ಊಹಿಸಿಕೊಂಡಷ್ಟು ದಡ್ಡನೇನೂ ಆಗಿರಲಿಲ್ಲ ರಾಯಾ. ತನ್ನ ಖಡ್ಗವನ್ನು ಬಾಯಿಯಲ್ಲಿ ಹಿಡಿದುಕೊಂಡೇ ಆತ ಮಡುವಿನಲ್ಲಿ ಈಸುತ್ತಿದ್ದನಂತೆ. ಸ್ನಾನ ಮುಗಿಸಿ, ದಂಡೆಗೆ ಬಂದು ತೊಯ್ದ ಅರಿವೆ ಕಳಚಿ. ಒಣ ಅಂಗಿ ಹಾಕಿಕೊಳ್ಳುವಾಗ ಮಾತ್ರ ಖಡ್ಗವನ್ನು ಲಕ್ಕನ ಕೈಗೆ ಕೊಟ್ಟನಂತೆ. ಅಂಗಿ ಹಾಕಿಕೊಂಡು, ಗುಳಗೀ ಚಲ್ಲಣ ಧರಿಸಿಕೊಳ್ಳಲೆಂದು ಆತ ಕೆಳಗೆ ಬಾಗಿದ್ದಾಗ ಖಡ್ಗ ಹಿಡಿದುಕೊಂಡು ಸ್ವಲ್ಪ ದೂರ ಹೋಗಿದ್ದ ಲಕ್ಕ "ಅಯ್ಯೋ ರಾಯಣ್ಣಾ, ಘಾತವಾಯಿತೋ! ನಿನ್ನ ಹಿಡೀಲಿಕ್ಕೆ ಗೌಡರ ಸಿಪಾಯಿಗಳು ಬಂದರಪ್ಪೋ! ಎಂದು ಕೂಗಿಕೊಂಡನಂತೆ. "ನೀನ್ಯಾಕ ಓಡುತ್ತೀಯೋ? ನನ್ನ ಕತ್ತೀ ಆದರೂ ತಾರೋ ಇಲ್ಲಿ!" ಎಂದು ರಾಯಣ್ಣ ಗದರಿಸಿದನಂತೆ. ನಾನು ಮೊದಲೇ ಸೂಚನೆಯಿತ್ತ ಮೇರೆಗೆ ರಾಯಾನ ಕತ್ತಿ ಎತ್ತಿಕೊಂಡು ಲಕ್ಕ ನಾವು ಕುಳಿತಿದ್ದ ಸ್ಥಳದ ಕಡೆಗೇ ಓಡಿಬಂದ. ಅತ್ತ ಗಿಡಗಂಟಿಗಳಲ್ಲಿ ಅಡಗಿಕೊಂಡಿದ್ದ ನಮ್ಮ ಸಿಪಾಯಿಗಳು ಧಾವಿಸಿಹೋಗಿ ರಾಯಾನನ್ನು ಹಿಡಿದರು. ಅವನು ಒಬ್ಬ, ಅವರು ಆರು ಜನರು. ಅವನ ಕೈಯಲ್ಲಿ ಯಾವ ಶಸ್ತ್ರವೂ ಇರಲಿಲ್ಲ. ಅವರು ಮಾತ್ರ ಕತ್ತಿ-ಕಠಾರಿ-ದೊಣ್ಣೆ-ಬಂದೂಕಗಳಿಂದ ಸುಸಜ್ಜಿತರಾಗಿದ್ದರು. ಅಂಥ ಪರಿಸ್ಥಿತಿಯಲ್ಲೂ ಎದೆಗೆಡದೆ ಆತ ಸಾಕಷ್ಟು ಪ್ರತಿಭಟಿಸಿ ಎರಡು ಮೂರು ಜನರ ಮೂಗು-ಬಾಯಿ ಒಡೆದು ಗಾಯಗೊಳಿಸಿದನಂತೆ. ಆರು ಜನ ಧಡಿಯರೆದುರು ಒಬ್ಬನ ಆಟ ಎಷ್ಟು ಹೊತ್ತು ನಡೆಯಬೇಕು. ರಾಯಾನ ಕೈಕಾಲು ಕಟ್ಟಿ ಹೆಡಮುರಿಗೆ ಬಿಗಿದು ಬಾಯಿಗೂ ಬಟ್ಟೆ ತುರುಕಿ ಆತ ಕೂಗಿಕೊಳ್ಳದಂತೆ ಮಾಡಿದರು.

ಇತ್ತ ಕತ್ತಿ ಹಿಡಿದುಕೊಂಡು ಗುಡ್ಡದ ಕಡೆಗೆ ಓಡುತ್ತ ಬಂದ ಲಕ್ಕ "ಇಂಗ್ರೇಜರ ದಂಡು ಬಂತು! ಇಂಗ್ರೇಜರ ದಂಡು ಬಂತು! ರಾಯಣ್ಣಗೆ ಗುಂಡು ಹಾಕಿ ಕೊಂದರು! ಕೊಂದರು!" ಎಂದು ಹೂಲಿ ಎಬ್ಬಿಸಿದ. ಊಟ ಮಾಡುತ್ತಿದ್ದ ರಾಯಣ್ಣನ ಸೈನಿಕರನೇಕರು ಗಾಬರಿಯಿಂದ ಎದ್ದು ಅತ್ತಿತ್ತ ಓಡಿ ಅಡವಿಯಲ್ಲಿ ಮರೆಯಾದರು. ಗಜವೀರನೂ ಅವನ ಹಬಸಿ

ಸಿಪಾಯಿಗಳೂ ಹಾಗೆ ಪಲಾಯನ ಮಾಡದೆ, ತಮ್ಮ ನಾಯಕನನ್ನು ಹುಡುಕಿಕೊಂಡು ಹಳ್ಳದ ಕಡೆಗೆ ನುಗ್ಗುತ್ತಿದ್ದಂತೆ ನಮ್ಮ ಸೈನಿಕರು ಅವರನ್ನು ತಡೆದು ಗುಂಡು ಹಾರಿಸತೊಡಗಿದರು. ಅರ್ಧ ತಾಸಿನವರೆಗೂ ಆ ದಟ್ಟಡವಿಯಲ್ಲಿ ತುಬಾಕಿಗಳ ಆರ್ಭಟವೆ ಆರ್ಭಟ. ಮದ್ದುಗುಂಡುಗಳಿಂದ ಸುಸಜ್ಜಿತರಾಗಿದ್ದ ನಮ್ಮ ಸೈನಿಕರೆದುರು ಗಜವೀರನ ಅಶಿಕ್ಷಿತ ಸಿಪಾಯಿಗಳ ಆಟವೇನೂ ನಡೆಯಲಿಲ್ಲ. ಅವರಲ್ಲಿ ಅನೇಕರು ಅಲ್ಲಿಯೇ ಅಸು ನೀಗಿದರು. ಇನ್ನುಳಿದವರು ಓಡಿಹೋದರು.

## ೨೧ ಬಿಚ್ಚುಗತ್ತಿ ಚೆನ್ನಬಸಪ್ಪ

ಸೈನಿಕರನ್ನು ಕೂಡಿಸಿಕೊಂಡು ಬರಲೆಂದು ಅಂಬಡಗಟ್ಟಿಗೆ ಹೋಗಿದ್ದ ನನಗೆ ಲಿಂಗನಗೌಡರೂ ವೆಂಕನಗೌಡರೂ ಫಿತೂರಿಯಾಗಿ ರಾಯಣ್ಣನನ್ನು ಮೋಸದಿಂದ ಬಂಧಿಸಿದ ಸಮಾಚಾರ ತಿಳಿಯುತ್ತಲೂ ಹೃದಯಕ್ಕೆ ಬಲವಾದ ಪೆಟ್ಟು ಬಿದ್ದಂತಾಗಿ ಒಂದೆರಡು ತಾಸು ಹುಚ್ಚನಂತೆ ಕುಳಿತುಕೊಂಡಿದ್ದೆ-- ಆಗ ಮಧ್ಯರಾತ್ರಿಯ ಸಮಯವಿರಬಹುದು. ರಾಯಣ್ಣನ ಬಂಧನವಾದಾಗ ಆತನ ಸಂಗಡ ಡೋರಿಯ ಗುಡ್ಡದ ಮೇಲೆಯೇ ಇದ್ದ ಅಂಬಡಗಟ್ಟಿಯ ತಳವಾರ ನಿಂಗ ಇಲ್ಲಿಯವರಗೆ ಓಡಿ ಬಂದು ನನಗೆ ಆ ಸುದ್ದಿ ತಿಳಿಸಿದ್ದ.

"ಹಿಂಗ ಮೈಮರೆತು ಕುಂತರ ಹೆಂಗ ಚನಬಸಣ್ಣಾ? ಆ ಚಂಡಾಲರಂತೂ ನಮಗೆ ಕೈಕೊಟ್ಟು ಕುತ್ತಿಗೀ ಕೊಯ್ದಿಟ್ಟರು. ನಮ್ಮ ದಂಡಿನ ಪೈಕಿ ಮುಖ್ಯ ಮುಖ್ಯ ಜನರನ್ನೆಲ್ಲಾ ಹಿಡೀಲಿಕ್ಕೆ ಪರದೇಶಿಗಳು ಓಡಾಡ್ತಿದಾರಂತೆ. ನೀನಿಲ್ಲಿ ಇರೂದು ಇಲ್ಲಿಯ ಗೌಡರಿಗೂ ಗೊತ್ತಿರಬೇಕು. ಇಲ್ಲ್ಯಾ ಯಾರರ ಫಿತೂರಾಗಿ ನಿನ್ನ ಹಿಡುಕೊಟ್ಟಾರು. ವೈರಿಗಳ ಕೈಗೆ ಸಿಗಬಾರದಂತ ಮನಸಿದ್ದರೆ ಈಗಿಂದೀಗ ಎದ್ದು ಈ ಊರು ಬಿಟ್ಟು ಹೋಗಬೇಕು" ಎಂದ ನಿಂಗ.

ನನ್ನ ತಲೆ ಬಧಿರವಾಗಿತ್ತು. ಯಾವುದಕ್ಕೂ ಏನೂ ಉತ್ಸಾಹವಿರಲಿಲ್ಲ. ಕಿತ್ತೂರ ನಾಡಿನ ಗಂಡುಗಲಿ ರಾಯಣ್ಣನಂಥವನೇ ಬಂದಿಯಾದಮೇಲೆ ಅವನ ಜೊತೆಗಾರನಾದ ನಾನಾದರೂ ಹೊರಗೆ ಇದ್ದು ಮಾಡುವುದೇನಿದೆ? ನನ್ನ ಪ್ರೀತಿಯ ಗೆಳೆಯನಿದ್ದಲ್ಲಿ ನಾನಿರುವವನು. ಅವನು ಸೆರೆಮನೆಯಲ್ಲಿದ್ದರ ನಾನೂ ಅಲ್ಲಿಯೇ. ಅವನಿಗೆ ಗಲ್ಲಿನ ಶಿಕ್ಷೆಯಾದರೆ ನನಗೂ ಆಗಬೇಕು ಅವನ ಜೊತೆಯಲ್ಲಿಯೇ. ಕೂಡಿ ಬೆಳೆದವರು, ಕೂಡಿ ಆಡಿದವರು, ಕೂಡಿ ಲಢಾಯಿ ಮಾಡಿದವರು, ಕೂಡಿಯೇ ಸಾಯಬೇಕು.

"ನನ್ನೂ ಹಿಡಿದರೆ ಹಿಡಿಯಲೊಲ್ಲನ್ಯಾಕೆ? ರಾಯಣ್ಣನ ಸಂಗಡವೇ ಇರುವ ಸಂಧಿಯಾದರೂ ಸಿಕ್ಕೀತು!" ಎಂದೆ.

"ಛೀ! ಛೀ! ನೀನೂ ಯಾಕೆ ಸಿಗಬೇಕು ಅವರ ಕೈಯಾಗ? ಯಾರೂ ಸಿಗಬಾರದು, ಗುಡ್ಡ ಬೆಟ್ಟಗಳಲ್ಲಿ ಅಡಗಿಕೊಂಡು ಶತ್ರುಗಳಿಗೆ ನೀರು

ಕುಡಿಸಬೇಕು ಅಂತ ಅಪ್ಪಣೆ ಮಾಡಿ ಹೋಗ್ಯಾನ ನಮ್ಮ ದಳವಾಯಿ. ನಿನಗೂ ಮುದ್ದಾಂ ತಿಳಿಸಲಿಕ್ಕೆ ನನಗೆ ಹೇಳ್ಯಾನ," ಎಂದ ನಿಂಗ.

"ಹೌದೇನು ? ನೀ ಅವನ ಹತ್ತರನೇ ಇದ್ದಿಯಾ ?"

"ಹೌದಣ್ಣಾ. ರಾಯಣ್ಣನನ್ನ ಅವರು ಹಿಡಿದು ಹೆಡಮುರುಗೀ ಕಟ್ಟಿ ಒಗದಿದ್ದರು. ಅದನ್ನು ಬಿಡಿಸಲಿಕ್ಕಂತ ಗಜವೀರನೂ ನಾನೂ ಮತ್ತು ಹತ್ತಿಪ್ಪತ್ತು ಮಂದಿ ಅವನ ಸಮೀಪಕ್ಕ ಹೋಗಿದ್ದಿವಿ, ಗೌಡರ ದಂಡಿಗೂ ನಮ್ಮವರಿಗೂ ಕೈಕೈ ಹತ್ತಿದಾಗಲೇ ಸಮೀಪವಾಗಿದ್ದ ನನಗೆ ರಾಯಣ್ಣ ಇದೆಲ್ಲಾ ಹೇಳಿದ. ಚನಬಸೂ ಅಂತೂ ಪರದೇಶಿಗಳ ಕೈಯಾಗ ಸಿಗಬಾರ ದಂತ ಸ್ಪಷ್ಟ ಸ್ಪಷ್ಟ ಹೇಳ್ಯಾನ ರಾಯಣ್ಣ."

ನಿಂಗ ಆ ಸಂದೇಶ ತಿಳಿಸುತ್ತಲೂ ನನಗೆ ಸ್ವಲ್ಪ ಉತ್ಸಾಹ ಬಂದಂತಾ ಯಿತು. ರಾಯಣ್ಣ ಹೀಗೆ ಅಣತಿಯೀಯಬೇಕಾದರೆ ಅಂಥದೇನೋ ಮಹತ್ವದ ಕಾರಣವಿರಲೇಬೇಕು. ಅವನ ಬಂಧನವಾಗಿದ್ದರೂ ಸಹ ಅವನು ಇಷ್ಟಕ್ಕೇ ಆಸೆ ಬಿಟ್ಟಿಲ್ಲವೆನ್ನುವುದು ಈ ಮಾತಿನಿಂದ ಸ್ಪಷ್ಟವಾಗುತ್ತದೆ. ಅಲ್ಲವೆ ? ಚೆನಬಸೂ ಮತ್ತೆ ದಂಡು ಕಲೆ ಹಾಕಬೇಕು. ಧಾರವಾಡದ ಮೇಲೆ ದಾಳಿ ಮಾಡಿ ರಾಯಣ್ಣನನ್ನು ಸೆರೆಯಿಂದ ಬಿಡಿಸಲು ಪ್ರಯತ್ನಿಸಬೇಕು. ಅನಂತರ ಮತ್ತೆ ಎಲ್ಲರೂ ಸೇರಿಕೊಂಡು ದೊಡ್ಡ ಲಢಾಯಿ ಹೂಡಲು ಶಕ್ಯವಾದೀತು.

ಇದೇ ಅಲ್ಲವೇ ರಾಯಣ್ಣನ ಸಂದೇಶದ ಅರ್ಥ ?

ನನ್ನ ಮನಸ್ಸನ್ನು ಕವಿದುಕೊಂಡಿದ್ದ ನಿರಾಸೆ, ನಿರ್ವಿಣ್ಣತೆ ಮಾಯ ವಾಗಿ, ನಾನು ಎಂದಿನ ಚೆನಬಸಪ್ಪನಂತೆಯೇ ಆಗಿ, ಥಟ್ಟನೆ ಮೈಕೊಡವಿ ಮೇಲಕ್ಕೆದ್ದು, ಕತ್ತಿಯನ್ನು ಟೊಂಕದ ಪಟ್ಟಿಗೆ ಬಿಗಿದುಕೊಂಡು ನಿಂಗನನ್ನು ಕುರಿತು ಹೇಳಿದೆ :

"ನಮ್ಮ ದಳವಾಯಿ ಅಪ್ಪಣೆ ಕೊಟ್ಟಂತೆಯೇ ಮಾಡೋಣ ನಿಂಗಾ. ನೀನೂ ಬರ್ತೀಯಾ ನನ್ನ ಸಂಗಡ ?"

ನಮ್ಮ ವಿಶ್ವಾಸದ ಸಿಪಾಯಿಯಾಗಿದ್ದ ನಿಂಗನಿಗೂ ಹೊಸ ಹುರುಪು ಬಂದಂತಾಯಿತು.

"ಬರ್ತೀನಿ ಅಣ್ಣಾ. ಜರೂರ್ ಜರೂರ್ ಬರ್ತೀನಿ."

ಅಂಬಡಗಟ್ಟಿಯ ಐವತ್ತು ಜನರೂ ಸೇರಿಕೊಂಡು ಬೆಳಗಿನ ಜಾವದೊಳ

ಣಾಗಿ ಬಾಳಗುಂದ ಕೊಳ್ಳಕ್ಕೆ ಬಂದೆವು. ಗಜವೀರನನ್ನು ಭೆಟ್ಟಿಯಾಗಿ ಮುಂದಿನ ಕಾರ್ಯಕ್ರಮ ಗೊತ್ತು ಮಾಡಬೇಕೆಂಬುದು ನನ್ನ ವಿಚಾರವಾಗಿತ್ತು.

ಆದರೆ ಅಲ್ಲಿ ಗಜವೀರನೂ ಸಿಕ್ಕಲಿಲ್ಲ, ಅವನ ಸಂಗಡಿಗರೂ ಸಿಕ್ಕಲಿಲ್ಲ. ಅವರು ಎತ್ತ ಹೋದರೆಂಬುದೇ ಯಾರಿಗೂ ಗೊತ್ತಿರಲಿಲ್ಲ.

ಮತ್ತೆ ಅಲ್ಲಿಂದ ಹೊರಟು ಇಳಿಹೊತ್ತಿನ ವೇಳೆಗೆ ಸರದಾರ್ ವೀರಪ್ಪನವರೂ ಸವಾಯ್ ಮಲ್ಲಸರ್ಜ ದೊರೆಗಳೂ ಇದ್ದ ಗುಪ್ತಸ್ಥಳಕ್ಕೆ ಬಂದುದಾಯಿತು. ನಮ್ಮ ಸಾಂಕೇತಿಕ ಸಿಳ್ಳು ಕೇಳಿ ದೇವಸ್ಥಾನಕ್ಕೆ ಬಂದು ನಮ್ಮನ್ನು ಭೆಟ್ಟಿಯಾದವನೆಂದರೆ ಕರವೀರನೊಬ್ಬನೇ. ಅವನ ಬಾಡಿದ ಮೋರೆ ನೋಡಿದೊಡನೆಯೆ ಅಲ್ಲಿ ನಡೆದುದೆಲ್ಲವೂ ನನಗೆ ಗೊತ್ತಾಗಿ ಹೋಯಿತು. ನನ್ನನ್ನು ಅಪ್ಪಿಕೊಂಡು ಆತ ಚಿಕ್ಕಮಕ್ಕಳಂತೆ ಅಳತೊಡಗಿದ.

ದುಃಖದ ಆವೇಗ ಇಳಿದ ತರುವಾಯ ಆತ ಹೇಳಿದ :

"ರಾಯಣ್ಣನನ್ನು ಹಿಡುಕೊಂಡು ಬಂದ ಆ ವೈರಿಗಳು ಅವನ ಸಂಗಡ ಹಿಡಿದ ನಾಲ್ಕೈದು ಮಂದಿಯನ್ನು ಹೊಡೆದು ಬಡಿದು ಭಯಂಕರ ತ್ರಾಸ ಕೊಟ್ಟು, ಸರದಾರ್ ಸಾಹೇಬರೂ ದೊರೆಗಳೂ ಇರುವ ಈ ಜಾಗಾ ಎಲ್ಲೈದ ಅಂತ ತಿಳಕೊಂಡು, ಇವತ್ತು ನಸುಕಿನಾಗ ಇಲ್ಲಿಗೆ ಏಕಾಏಕಿ ಬಂದು ದಾಳಿ ಮಾಡಿದರು. ದಂಡಿನವರೆಲ್ಲ ಅಲ್ಲಿ ಇಲ್ಲಿ ಚದುರಿದ್ದರಿಂದ ನಾವ್ಯಾರೂ ಏನೂ ಮಾಡಲಿಕ್ಕಾಗಲಿಲ್ಲ. ನಾನೊಬ್ಬ ಹ್ಯಾಗೋ ತಪ್ಪಿಸಿಕೊಂಡೆ. ದೊರೆಗಳನ್ನೂ ಸರದಾರ್ ಸಾಹೇಬರನ್ನೂ ಹಿಡುಕೊಂಡು ಹೊರಟುಹೋದರು."

"ಗಜವೀರ ಎಲ್ಲೈದಾನ ಗೊತ್ತೈತೇನು ?"

"ಇಲ್ಲಸಾ. ಅವನಂತೂ ಈ ಕಡೆ ಬಂದಿಲ್ಲ."

ನನ್ನ ಸಂಗಡ ಬಂದಿದ್ದ ದಂಡಾಳುಗಳು ಬೆಳಗಿನಿಂದಲೂ ಗುಡ್ಡ ಬೆಟ್ಟ ತಿರುಗಿ ದಣಿದು ಹೋಗಿದ್ದರು. ಮಧ್ಯಾಹ್ನದ ಊಟವೂ ಆಗಿರಲಿಲ್ಲವಾದುದರಿಂದ ಎಲ್ಲರಿಗೂ ತುಂಬ ಹಸಿವೆಯಾಗಿತ್ತು. ಆದುದರಿಂದ ಆ ರಾತ್ರಿ ಅಲ್ಲಿಯೇ ವಸತಿ ಮಾಡಿದೆವು. ಕರವೀರ ಅಡುಗೆ ಮಾಡಿ ಎಲ್ಲರಿಗೂ ಬಡಿಸಿದ.

ಮುಂದಿನ ಕ್ರಮವೇನೆಂಬುದರ ಬಗೆಗೆ ರಾತ್ರಿಯಿಡೀ ಯೋಚಿಸಿದೆ. ಈ ಐವತ್ತು ಜನರನ್ನು ಕಟ್ಟಿಕೊಂಡು ನಾನೊಬ್ಬನೇ ಏನನ್ನೂ ಮಾಡುವಂತಿರಲಿಲ್ಲ. ರಾಯಣ್ಣನ ಸಂಗಡ ಯಾರು ಯಾರು ಸೆರೆ ಸಿಕ್ಕರೆಂಬುದು

ಇನ್ನೂ ಸರಿಯಾಗಿ ಗೊತ್ತಾಗಿರಲಿಲ್ಲ. ಒಂದೆರಡು ವಾರ ವೇಷ ಬದಲಿಸಿಕೊಂಡು ಎಲ್ಲ ಕೊಳ್ಳಗಳಲ್ಲೂ ಅಲೆದು ಗಜವೀರ ಮೊದಲಾದ ಪ್ರಮುಖರನ್ನು ಪತ್ತೆಮಾಡಿ, ಅವರೊಡನೆ ಸೇರಿ ವಿಚಾರ ಮಾಡಿದ ನಂತರ ಮುಂದಿನ ಕ್ರಮ ಕೈಗೊಳ್ಳುವುದೇ ಉಚಿತವೆಂದು ತೋರಿತು. ಕುಸುಗಲ್ಲಿನವರೆಗೂ ಹೋಗಿ, ಸಾಧ್ಯವಾದರೆ ಚಿಕ್ಕರಾಣಿಯವರನ್ನು ಕಂಡು, ಅವರ ಸಲಹೆಯನ್ನೂ ಕೇಳಿಕೊಳ್ಳುವುದೆಂದು ನಿಶ್ಚಯಿಸಿದೆ.

ಬೆಳಗ್ಗೆ ಗಂಜಿ ಸೇವಿಸಿದುದಾದ ಮೇಲೆ ದಂಡಾಳುಗಳನ್ನು ಕುರಿತು ಹೇಳಿದೆ:

"ಸದ್ಯಕ್ಕಂತೂ ನೀವು ಊರಿಗೆ ಹೋಗಿ ನಿಮ್ಮ ನಿಮ್ಮ ಕೆಲಸ ಮಾಡುತ್ತಾ ಇರ್ರಿ. ನಾನು ತಿಂಗಳೊಪ್ಪತ್ತಿನಲ್ಲಿ ಲಥಾಯಿಯ ತಯಾರಿ ಮಾಡಿ ನಿಮಗೆ ಸುದ್ದೀ ಕಳಿಸ್ತೀನಿ. ಆಮ್ಯಾಲ ಬಂದೀರಂತೆ."

"ನಾವಿಷ್ಟೆ ಮಂದಿ ಅಪರಾತ್ರಿಯೊಳಗೆ ಹೋಗಿ ಧಾರವಾಡ ಸೆರೆಮನೆ ಒಡೆದು ರಾಯಣ್ಣನನ್ನೂ ಮೊರೆಗಳನ್ನೂ ಬಿಡಿಸಿಕೊಂಡು ಬರಲಿಕ್ಕಾಗೂದಿಲ್ಲಂತೀಯಾ ಚನ್ನಬಸಣ್ಣಾ?" ಎಂದ ನಿಂಗ.

"ಅಲ್ಲಿ ಸಾವಿರಾರು ಮಂದಿಯ ದಂಡು ಐತಪಾ ನಿಂಗಣ್ಣಾ. ಹಗಲೂ ರಾತ್ರಿ ಪಹರೆ ಮಾಡುತಿರುತಾರೆ. ನಾವೂ ಅವರಿಗಿಂತ ಬಲವಾದ ದಂಡು ತಕ್ಕೊಂಡು ಹೋದರೆ ಮಾತ್ರ ನಮ್ಮ ಕೆಲಸ ಸಾಧಿಸಬಹುದು. ಹೀಗೆ ಐವತ್ತು ಅರವತ್ತು ಮಂದಿ ಹೋದರೆ ಆಗೂ ಮಾತಲ್ಲ ಅದು" ಎಂದು ಹೇಳಿದೆ.

"ನನ್ನ ತಲ್ಯಾಗ ಇನ್ನೊಂದು ಯಿಚಾರ ಬಂದೈತಿ ಚನ್ನಬಸಣ್ಣಾ" ಎಂದ ನಿಂಗ.

"ಮತ್ತೇನಪಾ?"

"ನಮ್ಮ ದಳವಾಯಿಗೆ ಮೋಸಾ ಮಾಡಿದ ಆ ಗೌಡರಿಬ್ಬರನ್ನೂ ಹಂಗೇ ಬಿಟ್ಟರೆ ಹೆಂಗ? ಹೆಂಗೂ ಈಗ ಐವತ್ತು ಮಂದಿ ಅದೀವಿ. ನೆಟ್ಟಗೆ ಅವರ ಊರುಗಳಿಗೆ ಹೋಗಿ ಅವರಿಬ್ಬರನ್ನೂ ತೀರಿಸಿಬಿಟ್ಟು ಅವರ ಮನಿಗಳಿಗೆ ಬೆಂಕಿ ಹಚ್ಚೂಣು?" ಎಂದ ನಿಂಗ.

ಅಂಬಡಗಟ್ಟಿಯ ಆ ವೀರರೆಲ್ಲರಿಗೂ ಆ ಯೋಜನೆ ಒಪ್ಪಿಗೆಯಾಯಿತು. "ತೋರಿಸೋಣ ಒಂದು ಕೈ!" ಎಂದು ನನಗೂ ಅನ್ನಿಸಿತು.

ಕತ್ತಲಾಗುವ ವೇಳೆಗೆ ಖೊದಾನಪುರಕ್ಕೆ ಬಂದು, ಊರ ಹೊರಗೇ ಅವಿತುಕೊಂಡಿದ್ದು, ಊರಿನ ವಿಷಯ ತಿಳಿದುಕೊಂಡು ಬರಲು ಒಬ್ಬ ಆಳನ್ನು ಕಳಿಸಿದೆವು. ಹಾಗೆ ಹೋದ ಆಳು ಒಂದು ತಾಸು ಕಳೆದರೂ ತಿರುಗಿ ಬರಲಿಲ್ಲ. ಅವನೆಲ್ಲಾದರೂ ವೈರಿಗಳ ಕೈಗೆ ಸಿಕ್ಕನೇನೋ ಎಂದು ಚಿಂತಿಸುತ್ತ ಈ ಬಾರಿ ಬೇರೆಯವರನ್ನು ಕಳಿಸದೆ ನಾನೇ ಹೋಗಿ ಅಗಸೆಯ ಬಾಗಿಲಿನ ಆಚೆಗಿದ್ದ ಗಿಡದ ಮರೆಯಲ್ಲಿ ನಿಂತು ನೋಡಿದೆ. ಅಗಸೆಯ ಬಾಗಿಲು ಪೂರ್ತಿಯಾಗಿ ಮುಚ್ಚಿಕೊಂಡಿತ್ತು. ಬಾಗಿಲಿನ ಹೊರಭಾಗದಲ್ಲಿ ನೂರಾರು ಮಂದಿ ಸಿಪಾಯಿಗಳು ಹಿರಿದ ಕತ್ತಿ ಹಿಡಿದುಕೊಂಡು ಶತಪಥ ಹಾಕುತ್ತಿದ್ದರು. ನಾವು ದಾಳಿ ಮಾಡಬಹುದೆಂದು ಮೊದಲೇ ಊಹಿಸಿಕೊಂಡು ವೈರಿಗಳು ಇಂಥ ಸಿದ್ಧತೆ ಮಾಡಿದ್ದುದು ಸ್ಪಷ್ಟವಿತ್ತು. ನಾವು ಮೊದಲು ಕಳಿಸಿಕೊಟ್ಟ ಆಳು ಎಚ್ಚರಿಕೆ ವಹಿಸದೆ ಹಾಗೇ ಬಂದು ಅವರ ಕೈಗೆ ಸಿಕ್ಕಿಬಿದ್ದಿರಬೇಕು.

ಅಲ್ಲಿ ಹೆಚ್ಚು ಹೊತ್ತು ಕಾಲಹರಣ ಮಾಡುವುದೂ ಅಪಾಯಕರವಾಗಿದ್ದುದರಿಂದ ನಾನು ಸದ್ದಿಲ್ಲದಂತೆ ಸರಿದುಕೊಂಡು ನಮ್ಮ ಗುಂಪು ಸೇರಿಕೊಂಡೆ. ಖೊದಾನಪುರದಂತೆಯೇ ನೇಗಿನಹಾಳದಲ್ಲೂ ಇಂಥದೇ ತಯಾರಿ ನಡೆದಿದ್ದುದು ಸ್ಪಷ್ಟವಾಗಿತ್ತು. ಕೆಲದಿನಗಳವರೆಗೆ ಸುಮ್ಮನಿದ್ದು, ಅನಂತರ ಚೆನ್ನಾಗಿ ಸಿದ್ಧತೆ ಮಾಡಿಕೊಂಡು ಫಿತೂರಿಗಳಿಗೂ ಪರದೇಶಿಗಳಿಗೂ ಕೂಡಿಯೇ ಕೈತೋರಿಸುವುದೆಂದು ನಿಶ್ಚಯಿಸಿಕೊಂಡು ಅಂಬಡಗಟ್ಟಿಯವರನ್ನೆಲ್ಲ ಅವರ ಊರಿಗೆ ಕಳಿಸಿಕೊಟ್ಟೆ.

ಅವರೇನೋ ತಮ್ಮ ಊರಿಗೆ ಹೋದರು. ನಾನು ಮಾತ್ರ ನಮ್ಮೂರಿಗೆ ಹೋಗುವಂತಿಲ್ಲ; ಸಂಗೊಳ್ಳಿಯಲ್ಲಿ ಕಾಲಿಡುವಂತಿಲ್ಲ. ನಾನು ತಪ್ಪಿಸಿಕೊಂಡಿದ್ದುದು ಗೊತ್ತಾಗುತ್ತಲೂ ಸರ್ಕಾರದ ಗೂಢಚಾರರು ಅಮಟೂರು, ಬೆಳವಡಿ, ಸಂಗೊಳ್ಳಿ, ಹೊಂಗಲ ಮೊದಲಾದ ಕಡೆಗಳಲ್ಲೆಲ್ಲ ನನ್ನನ್ನು ಹುಡುಕುತ್ತಿರಬೇಕು. ಈಗ ನಾನು ಅಲ್ಲಿಗೆ ಹೋದೆನೆಂದರೆ ಅವರ ಶಿಕಾರಿ ಬಹಳ ಸುಲಭವಾಗಿಯೇ ಸಿಕ್ಕಂತಾಗುತ್ತದೆ.

ಪ್ರೀತಿಯ ಮಗನ ಬಂಧನದ ಸುದ್ದಿ ಕೇಳಿ ತಾಯಿ ಕೆಂಚವ್ವ ಎಷ್ಟು ದುಃಖಿಸುತ್ತಿರುವಳೋ? ಒಮ್ಮೆ ಹೋಗಿ ಆಕೆಯನ್ನು ಕಂಡು ಸಮಾಧಾನ ಹೇಳಿಬರಲೇ? ಹಾಗೇ ನಮ್ಮೂರಿಗೂ ಹೋಗಿ ಹೆಂಡರುಮಕ್ಕಳನ್ನು ನೋಡಿ

ಅವರನ್ನೂ ಸಂತೈಸಿ ಬರಲೇ ? ಎಂದೂ ಅನ್ನಿಸುತ್ತಿತ್ತು. ಆದರೆ, ಈ ಸಮಯದಲ್ಲಿ ಅಂಥ ಮಾಯಾಪಾಶಕ್ಕೆ ಒಳಗಾಗುವುದು ಮೂರ್ಖತನವೆಂಬುದು ಚೆನ್ನಾಗಿ ಗೊತ್ತಿದ್ದುದರಿಂದ, ಹೊಯ್ದಾಡುತ್ತಿದ್ದ ಮನಸ್ಸನ್ನು ಬಿಗಿಹಿಡಿದುಕೊಂಡು ರಾತ್ರಿಯಿಡೀ ಹಾದಿತುಳಿದು ಗರಗಕ್ಕೆ ಬಂದು, ಮಡಿವಾಳಸ್ವಾಮಿಯ ಮತಕ್ಕೆ ಹೋಗಿ ಪ್ರಸಾದ ಸೇವಿಸಿ ಮಲಗಿಕೊಂಡೆ. ನಾವು ಬಂಡಾಯ ಹೂಡಿದ್ದ ಸ್ಥಳಗಳಿಂದ ಈ ಊರು ಬಲು ದೂರವಿದ್ದುದರಿಂದಲೂ, ಮಡಿವಾಳಸ್ವಾಮಿಯ ಮತಕ್ಕೆ ಪ್ರತಿದಿನವೂ ನನ್ನಂಥ ನೂರಾರು ಮಂದಿ ಭಕ್ತರು ಬಂದು ಹೋಗುತ್ತಿದ್ದುದರಿಂದಲೂ, ವೈರಿಗಳಿಗೆ ಸುಳಿವು ಸಿಕ್ಕದಂತೆ ಕೆಲವುದಿನ ಅಡಗಿಕೊಂಡಿರಲು ಅದೇ ಸರಿಯಾದ ಸ್ಥಳವಾಗಿತ್ತು.

# ೨೨ ಪಾರ್ವತಿ

ಬೈಲಹೊಂಗಲದಿಂದ ಕುಸುಗಲ್ಲಿಗೆ ಬಂದ ಬಳಿಕ ಚಿಕ್ಕರಾಣಿಯವರ ಪ್ರಕೃತಿ ದಿನದಿಂದ ದಿನಕ್ಕೆ ಕೆಡುತ್ತಲೇ ಹೋಯಿತು. ಯಾವ ವೈದ್ಯರ ಔಷಧದಿಂದಲೂ ಏನೂ ಉಪಯೋಗವಾಗಲಿಲ್ಲ. ನೆಲದಲ್ಲಿ ಬೇರುಬಿಟ್ಟ ಗಿಡವನ್ನು ಕಿತ್ತು ತಂದು ಬೇರೆ ಕಡೆ ನೆಟ್ಟಂತಾಯಿತು, ನಮ್ಮ ರಾಣಿಯವರ ಸ್ಥಿತಿ. ಬೈಲಹೊಂಗಲದಲ್ಲೂ ಅವರು ಸೆರೆಯಲ್ಲಿಯೇ ಇದ್ದರು; ನಿಜ. ಆದರೂ, ಅದು ನಮ್ಮ ನಾಡು, ಕಿತ್ತೂರ ನಾಡು. ಬಂದಿಯೇ ಆಗಿದ್ದರೂ ನಮ್ಮ ಸೀಮೆಯಲ್ಲೇ ಇದ್ದೇನಲ್ಲ–ಎಂಬ ಸಮಾಧಾನವಿತ್ತು. ಆದರೆ, ಈ ಕುಸುಗಲ್ಲ ಕೋಟೆ ಕಿತ್ತೂರ ನಾಡಿನಿಂದ ಬಲು ದೂರ, ಅಪರಿಚಿತ ಪ್ರದೇಶ. ನಮ್ಮವರೆನ್ನುವವರಾರೂ ಇಲ್ಲ ಸಮೀಪದಲ್ಲಿ. ನಾವು ಹೊಂಗಲದಲ್ಲಿದ್ದಷ್ಟು ದಿನವೂ ಕಲ್ಮಠದ ಸ್ವಾಮಿಗಳು ಬಂದು ಹೋಗುತ್ತಿದ್ದರು, ಆಗಾಗ. ಅವರ ಸಾಂತ್ವನದ ಮಾತುಗಳಿಂದ ರಾಣಿಯವರ ಜೀವಕ್ಕೆ ನೆಮ್ಮದಿ ಲಭಿಸುತ್ತಿತ್ತು. ಕುಸುಗಲ್ಲಿಗೆ ಬಂದ ಮೇಲೆ ಸ್ವಾಮಿಗಳು ಬರುವುದೂ ಕಟ್ಟಾಯಿತು. ಕಿತ್ತೂರನ್ನು ಬಿಟ್ಟು ಎಲ್ಲಿಗೂ ಹೋಗಕೂಡದೆಂದು ಅವರಿಗೆ ನಿರ್ಬಂಧ ವಿಧಿಸಲಾಗಿದೆಯಂತೆ. ನಮ್ಮ ರಾಜ್ಯವನ್ನು ಮತ್ತೆ ಕಟ್ಟುವುದಕ್ಕಾಗಿ ಸಂಗೊಳ್ಳಿ ರಾಯಣ್ಣ ನಡೆಸಿರುವ ಲಢಾಯಿಯ ಬಗೆಗೂ ನಮಗೇನೂ ಸುದ್ದಿ ತಿಳಿಯುವಂತಿಲ್ಲ. ರಾಣಿಯವರಿಗೆ ಅದೂ ಒಂದು ಚಿಂತೆಯೇ.

ಚೆನ್ನಮ್ಮ ಅವ್ವನವರು ತೀರಿಕೊಂಡು ವರ್ಷದ ಮೇಲಾಯಿತು. ಅವರ ಹಿಂದೆಯೇ ಜಾನಕೀದೇವಿ ಅವ್ವನವರೂ ಹೋಗಿಬಿಟ್ಟರು. ನಮ್ಮ ರಾಣೀ ಸಾಹೇಬರಿಗೆ ಅದೊಂದು ಕಳವಳ ಯಾವಾಗಲೂ.

"ಅತ್ತೆವ್ವನವರು ಹೋದರು, ವಾರಗಿತ್ತಿ ಹೋದಳು. ನಾನೊಬ್ಬಳು ಉಳಿದೀನಿ ಪಾಪಿ, ಭೂಮಿಗೆ ಭಾರವಾಗಿ!" ಎಂದು ಸಂತಾಪದಿಂದ ಉದ್ಗಾರ ತೆಗೆಯುತ್ತಾರೆ, ಮೇಲಿಂದ ಮೇಲೆ.

"ಹಿಂಗೆಲ್ಲಾ ಜೀವಕ್ಕೆ ತ್ರಾಸ ಮಾಡಿಕೋಬಾರದು ರಾಣೀಸಾಹೇಬ್!" ಎಂದು ನಾನೆಂದರೆ ಅವರು ಕ್ಷೀಣ ನಗು ಬೀರಿ ಹೇಳುತ್ತಾರೆ:

"ರಾಣೀಸಾಹೇಬ್ ? ಎಲ್ಲಿಯ ರಾಣಿ ? ಏನು ಕಥೆ ? ರಾಜರೇ ಹೋದ ರಂತೆ ಯಾವಾಗಲೋ. ರಾಜ್ಯವೂ ಹೋಯ್ತು. ನಾನು ಕಿತ್ತೂರಿಗೆ ಕಾಲಿಟ್ಟಂದಿನಿಂದಲೂ ಅಶುಭದ ಮೇಲೆ ಅಶುಭವೇ. ನನ್ನ ದೈವವೇ ಖೊಟ್ಟಿಯಿರಬೇಕು. ಅಥವಾ ಪೂರ್ವಜನ್ಮದಲ್ಲಿ ನಾನೇನೋ ಭಾರೀ ಪಾಪ ಮಾಡಿರಬೇಕು."

"ಎಲ್ಲಿಯ ಪಾಪ? ಎಲ್ಲಿಯ ಕಥೆ ? ಬಿಡಿರಿ."

"ಈ ಏಳೆಂಟು ವರ್ಷಗಳಲ್ಲಿ ನಡೆದದ್ದೆಲ್ಲಾ ನೋಡಿದರೆ ಖಂಡಿತವಾಗಿ ನಾನು ನತದೃಷ್ಟಳೆಂದೇ ಅನಿಸುತ್ತದೆ. ೯ ವರ್ಷದವಳಿದ್ದಾಗ ಕಿತ್ತೂರರಸರ ಕೈಹಿಡಿದೆ. ಇನ್ನೂ ಹುಡುಗಿಯಾಗಿದ್ದಾಗಲೇ, ಹನ್ನೊಂದು ವರ್ಷ ವಯಸ್ಸಿನವಳಿದ್ದಾಗಲೇ ಪತಿಯನ್ನು ನೀಗಿಕೊಂಡು ಕುಳಿತೆ. ಆ ಮೇಲೆ ಸಂಸ್ಥಾನವನ್ನೂ ಕಳೆದುಕೊಂಡೆ. ಅತ್ತೆಯವರೂ ಹೋದರು. ದೇವರು ನನ್ನನ್ನೂ ಯಾಕೆ ಕರೆದೊಯ್ಯಲೊಲ್ಲನೋ ?"

ವೀರಮ್ಮ ರಾಣಿಯವರು ಈ ರೀತಿ ಗೋಳಾಡುವುದು ಸಹಜವೇ ಆಗಿದೆ. ಅವರಿಗೀಗ ಆಗಿರುವ ವಯಸ್ಸಾದರೂ ಎಷ್ಟು? ಬಹಳವಾದರೆ ಹದಿನೇಳು ಇದ್ದೀತು. ಇಷ್ಟು ಚಿಕ್ಕವಯಸ್ಸಿನಲ್ಲಿಯೇ ಒಂದರ ಹಿಂದೊಂದರಂತೆ ಭಯಂಕರ ಆಘಾತಗಳುಂಟಾದರೆ ಯಾರಿಗಾದರೂ ಮನಸ್ಸು ಕೆಡುವುದು ಸ್ವಾಭಾವಿಕ. ಮೈನೆರೆಯುವ ಮೊದಲೇ ಗಂಡನನ್ನು ಕಳೆದುಕೊಂಡರು. ಪತಿರಾಯರ ಸಂಗಡ ಸರಸವಾಡುವ ಸಮಯವೇ ಒದಗಲಿಲ್ಲ. ಈಗ ನೋಡಿದರೆ ಅವರವರೆನ್ನುವವರು ಯಾರೂ ಉಳಿಯಲಿಲ್ಲ. ತಂದೆಯೇನೋ ಇದ್ದಾರೆ – ದೂರದ ದೇಶದಲ್ಲಿ. ಅವರು ಇಲ್ಲಿಗೆ ಬರುವಂತಿಲ್ಲ. ಇವರು ಅಲ್ಲಿಗೆ ಹೋಗುವಂತಿಲ್ಲ. ದತ್ತಕ ಮಗ ಇದ್ದೂ ಇಲ್ಲದಂತೆ. ಆ ದತ್ತಕವನ್ನೇ ಮನ್ನಿಸಲಿಲ್ಲ ಇಂಗ್ರೇಜರು. ಲಢಾಯಿ ನಡೆದದ್ದು, ರಾಜ್ಯ ಕೈಬಿಟ್ಟದ್ದು – ಈಗ ಇವರು ಸೆರೆಯಾಳಾಗಿ ಬಿದ್ದಿರುವುದು ಎಲ್ಲಾ ಆದದ್ದು ಆ ಒಂದು ದತ್ತಕದಿಂದಲೇ.

ಬೈಲಹೊಂಗಲದಲ್ಲಿರುವವರೆಗೂ ಸ್ವಲ್ಪ ಸ್ವಲ್ಪ ಊಟವನ್ನಾದರೂ ಮಾಡುತ್ತಿದ್ದರು. ಕುಸುಗಲ್ಲಿಗೆ ಬಂದ ಮೇಲೆ ಅದೂ ಕಡಿಮೆಯಾಯಿತು- ಉಂಡರೆ ಉಂಡರು, ಇಲ್ಲದಿದ್ದರಿಲ್ಲ. "ಅನ್ನದ ವಾಸನೆಯೇ ಇಲ್ಲ" ಎನ್ನುತ್ತಾರೆ. ನಾನೇ ಬಹಳ ಒತ್ತಾಯಮಾಡಿ ಸ್ವಲ್ಪ ಉಣ್ಣುವಂತೆ ಮಾಡುತ್ತೇನೆ. ನಾನೂ ಇಲ್ಲಿಗೆ ಬಾರದಿದ್ದರೆ ಏನಾಗುತ್ತಿತ್ತೋ ಯಾರು ಬಲ್ಲರು ? ನನ್ನೊಬ್ಬಳನ್ನು

ಬಿಟ್ಟರೆ, ಬೈಲಹೊಂಗಲದಲ್ಲಿದ್ದ ದಾಸ ದಾಸಿಯರಾರೂ ಇಲ್ಲಿ ಇಲ್ಲ. ಬೇರೆ ಯವರನ್ನೆಲ್ಲ ಅಲ್ಲಿಯೇ ಬಿಟ್ಟು, ಇಲ್ಲಿಗೆ ಬಂದ ಮೇಲೆ ಹೊಸದಾಗಿ ಕೆಲವರನ್ನು ನೇಮಿಸಿದ್ದಾರೆ. ಇವರೇನು ಕಿತ್ತೂರ ನಾಡಿನ ಜನರಲ್ಲ. ನಮ್ಮ ರಾಣಿಯವರ ಬಗ್ಗೆ ಇವರಿಗೆ ಆತ್ಮೀಯತೆಯೂ ಇಲ್ಲ. ಸಂಬಳಕ್ಕಾಗಿ ದುಡಿಯುವ ಈ ಜನ ರಿಂದ ನಮ್ಮ ರಾಣಿಯವರ ಕಷ್ಟ ಸುಖ ನೋಡಿಕೊಳ್ಳುವ ಕೆಲಸ ಹೇಗಾಗ ಬೇಕು ?

ಕಿಟಕಿಯ ಹತ್ತಿರ ಕುಳಿತುಕೊಂಡು, ಕಿತ್ತೂರಿನ ಕಡೆಗೆ ದೃಷ್ಟಿ ಹರಿ ಬಿಟ್ಟು ನಿಟ್ಟುಸಿರು ಬಿಡುತ್ತಾರೆ ರಾಣಿ. ಆಗಾಗ ಬಿಕ್ಕಿ ಬಿಕ್ಕಿ ಅಳುವುದೂ ಉಂಟು.

"ಎಂಥಾ ದೌಲತ್ತಿನ ರಾಜ್ಯ ಏನಾಗಿ ಹೋಯ್ತಲ್ಲ ಪಾರ್ವತಿ ? ಆನೆ, ಒಂಟೆ, ಕುದುರೆ, ತೋಫು, ಹತ್ತು ಸಾವಿರ ಸೈನಿಕರು, ಮುತ್ತಿನ ಪಲ್ಲಕ್ಕಿ, ಬೆಳ್ಳಿ ಕಾಪಿನ ಆಪ್ತಾಗಿರಿ ಎಲ್ಲಾ ಎಲ್ಲಾ ಹೋಯ್ತು. ಅರಮನೆ ಹೋಯ್ತು. ಮೇಲುಪ್ಪರಿಗೆ ಹೋಯ್ತು. ಬಂದೀವಾಸ...."

ಹೀಗೆ, ಆಗಾಗ ಅವರ ಬಡಬಡಿಕೆ ನಡೆದಿರುವುದುಂಟು.

ಅವರ ಉದಾಸೀನತೆಯನ್ನು ಹೋಗಲಾಡಿಸುವುದಕ್ಕಾಗಿ ನಾನು ಪರಿ ಪರಿಯಾಗಿ ಪ್ರಯತ್ನಿಸುತ್ತೇನೆ. ನನಗೆ ಗೊತ್ತಿರುವ ಕಥೆಗಳನ್ನೂ ಶಿವಶರಣರ ವಚನಗಳನ್ನೂ ಹೇಳಿ ಅವರ ಮನಸ್ಸನ್ನು ಮುದಗೊಳಿಸಲು ಹಾತೊರೆಯು ತ್ತೇನೆ. ಆದರೂ, ಯಾವುದರಿಂದಲೂ ಏನೂ ಉಪಯೋಗವಾಗುವಂತಿಲ್ಲ. ದಿನ ಕಳೆದ ಹಾಗೆಲ್ಲ ಅವರು ಹೆಚ್ಚು ಹೆಚ್ಚು ಉದಾಸೀನರಾಗುತ್ತಿದ್ದಾರೆ. ಹದಿನಾರು ಹದಿನೇಳರ ಹೊಸ ಹರಯದಲ್ಲಿ ಮೈ ತುಂಬಿಕೊಂಡು ಲಕ್ಷಣವಾಗಿರಬೇಕಾದ ವಯಸ್ಸಿನಲ್ಲಿ ನಮ್ಮ ರಾಣಿಯವರು ಎಲುಬಿನ ಗೂಡಾಗಿದ್ದಾರೆ. ಕೈಕಾಲು ಗಳೆಲ್ಲ ಕಡ್ಡಿಯಂತಾಗಿವೆ. ಗಲ್ಲಗಳು ಒಣಗಿಹೋಗಿವೆ. ಹತ್ತಿಪ್ಪತ್ತು ಹೆಜ್ಜೆ ನಡೆದರೂ ಆಯಾಸವಾಗುತ್ತದೆ.

ಮುಂದೇನು ಗತಿ ? ಇವರನ್ನುಳಿಸಿಕೊಳ್ಳುವುದು ಹೇಗೆ ? ಎಂದು ನಾನು ಚಿಂತಿಸುತ್ತಿದ್ದಂತೆಯೇ ಒಂದು ದಿನ ಮತ್ತೊಂದು ಬಲವಾದ ಆಘಾತ ಬಂದೊ ದಗಿತ್ತು. ತಿಂಗಳಿಗೊಮ್ಮೆ, ಎರಡು ತಿಂಗಳಿಗೊಮ್ಮೆ ಬಂದು ಹೋಗುವ ಇಂಗ್ರೇಜ ಸಾಹೇಬನೊಬ್ಬ ಅಂದು ಒಳ್ಳೆಯ ಆನಂದದಿಂದ ಕುಲುಕುಲು

ನಗುತ್ತ ಬಂದು ರಾಯಣ್ಣನನ್ನೂ ಸವಾಯಿ ಮಲ್ಲಸರ್ಜ ದೊರೆಯನ್ನೂ ಬಂಧಿಸಿ ಧಾರವಾಡದ ಸೆರೆಮನೆಯಲ್ಲಿಟ್ಟ ವಿಷಯ ತಿಳಿಸಿ, "ಇನ್ನಾದರೂ ಬಂಡಾಯದ ವಿಚಾರ ಬಿಟ್ಟು ಕೊಟ್ಟು ತಣ್ಣಗಿರ್ರಿ," ಎಂದು ರಾಣಿಯವರಿಗೆ ಉಪದೇಶ ಮಾಡಿ ಹೊರಟುಹೋದ.

ರಾಯಣ್ಣನೂ ಚಿಕ್ಕದೊರೆಯೂ ಕೂಡಿಕೊಂಡು, ರಾಜ್ಯವನ್ನು ಮತ್ತೆ ಗಳಿಸಿದರೂ ಗಳಿಸಬಹುದೆಂಬ ಸಣ್ಣ ಆಸೆಯೊಂದನ್ನಿರಿಸಿಕೊಂಡು ಬದುಕಿದ್ದ ನಮ್ಮ ರಾಣಿಯವರು ಈ ಘೋರವಾದ ವಾರ್ತೆ ತಿಳಿಯುತ್ತಲೂ ಸಿಡಿಲು ಬಡಿದ ಬಾಳೆಯ ಗಿಡ ಉರುಳುವಂತೆ ನೆಲ ಹಿಡಿದುಬಿಟ್ಟರು. ಅನ್ನ-ನೀರು ಯಾವುದೂ ಬೇಡವಾಯಿತು. ಅವರನ್ನು ಸಂತೈಸಿ ಒಂದು ತುತ್ತು ಅನ್ನ ಉಣ್ಣಿಸುವುದೇ ಮಹಾ ಪ್ರಯಾಸದ ಕೆಲಸವಾಯಿತು. ಅಂದು ಹಾಸಿಗೆ ಹಿಡಿದ ರಾಣಿಯವರು ಆನಂತರ ಏಳಲೇ ಇಲ್ಲ.

ಈ ನಡುವೆ ಬಿಚ್ಚುಗತ್ತಿ ಚೆನ್ನಬಸಪ್ಪ ಒಮ್ಮೆ ಬಂದು ಹೋದ. ಎಂಥದೋ ವೇಷ ಹಾಕಿಕೊಂಡು ಕೋಟೆಯೊಳಗೆ ಪ್ರವೇಶ ದೊರಕಿಸಿ ನಮ್ಮನ್ನು ಭೆಟ್ಟಿಯಾದ. ಮತ್ತೆ ದಂಡು ಕೂಡಿಸಿ ರಾಯಣ್ಣನನ್ನೂ ದೊರೆಯನ್ನೂ ಸೆರೆಯಿಂದ ಬಿಡಿಸಿ, ಆನಂತರ ನಮ್ಮನ್ನೂ ಬಿಡಿಸುವುದಾಗಿ ಆತ್ಮ ವಿಶ್ವಾಸದಿಂದಲೇ ಮಾತನಾಡಿದ. ರಾಣಿಯವರೇನೂ ಅನ್ನಲಿಲ್ಲ. ಇಂದಿನ ಪರಿಸ್ಥಿತಿಯಲ್ಲಿ ಅದೆಲ್ಲವೂ ಅಶಕ್ಯವೆಂದೇ ಅವರಿಗೆ ಮನವರಿಕೆಯಾದಂತಿತ್ತು.

ಚೆನ್ನಬಸಪ್ಪ ಬಂದ; ಹೋದ. ಮತ್ತೊಂದು ವಾರದೊಳಗಾಗಿ ರಾಣಿಯವರ ಪ್ರಕೃತಿ ಪೂರ್ಣವಾಗಿ ಕೆಟ್ಟು ಹೋಯಿತು.

ಬಂದೀವಾಸದ ವ್ಯವಸ್ಥೆಗಾಗಿ ಕುಸುಗಲ್ಲಿನಲ್ಲಿದ್ದ ಸರಕಾರದ ಅಧಿಕಾರಿಯನ್ನು ಕಂಡು ರಾಣಿಯವರ ತೀವ್ರ ಅಸ್ವಾಸ್ಥ್ಯದ ವಿಚಾರ ತಿಳಿಸಿ ನಾನು ಹೇಳಿದೆ:

"ಒಂದು ವಾರದಿಂದ ರಾಣಿಯವರು ಒಂದು ತುತ್ತು ಕೂಡಾ ಬಾಯಲ್ಲಿ ಹಾಕಿಲ್ಲ. ಈಗಂತೂ ಅವರಿಗೆ ಮಾತಾಡುವುದೂ ಕಷ್ಟವಾಗಿದೆ. ಅವರ ಜೀವ ಉಳಿಯಬೇಕಾದರೆ ಈಗಿಂದೀಗ ಏನಾದರೂ ಮಾಡಲಿಕ್ಕೆ ಬೇಕು."

"ಜೀವ ಉಳಿಯಬೇಕಾದರೆ ಎದ್ದು ಊಟಾ ಮಾಡಬೇಕು. ನಾನೇನು ಮಾಡಲಿ ನನ್ನ ತಲೆ?" ಎಂದು ಆತ ನಿಷ್ಠುರವಾಗಿ ಉತ್ತರವಿತ್ತ.

"ಕುಸುಗಲ್ಲಿನ ಹವೆ ಅವರಿಗೆ ಹಿಡಿಸುವುದಿಲ್ಲ. ಅದಕ್ಕೆ ಅವರಿಗೆ ನೆಟ್ಟ ಗಾಗಲೊಲ್ಲದು. ನಮ್ಮನ್ನು ಮತ್ತೆ ಹೊಂಗಲಕ್ಕಾದರೂ ಕಳಿಸಿರಿ."

"ಹೊಂಗಲಕ್ಕೆ ಕಳಿಸಬೇಕಂತೆ! ಮತ್ತೆ ಯಾರನ್ನಾದರೂ ಎಬ್ಬಿಸಿ ಬಂಡು ಮಾಡಿಸುವ ವಿಚಾರವಿರಬೇಕು?" ಎಂದ ಆ ಅಧಿಕಾರಿ.

ರಾಣಿಯವರ ಪ್ರಾಣವನ್ನುಳಿಸಿಕೊಳ್ಳಬೇಕಾದರೆ ಅವರನ್ನು ಕುಸುಗಲ್ಲಿನಿಂದ ಸ್ಥಳಾಂತರಿಸುವುದು ಅಗತ್ಯವಾಗಿತ್ತು. ಅಧಿಕಾರಿಯನ್ನು ಹೇಗಾದರೂ ಒಲಿಸಿಕೊಂಡು, ಧಾರವಾಡದ ಸಾಹೇಬನಿಗೆ ಪತ್ರ ಬರೆಯಿಸಿ ಆ ಕೆಲಸ ಸಾಧಿಸಬೇಕೆಂದು ವಿಚಾರ ಮಾಡಿ, ರಾಣಿಯವರ ಉಂಗುರವೊಂದನ್ನು ಅವನಿಗೆ ಲಂಚ ತಿತ್ತು, ನಮ್ಮ ಪರವಾಗಿ ಪ್ರಭಾವ ಬೀರಲು ಕೇಳಿಕೊಂಡೆ. ಹೊನ್ನಿಗೆ ಮರುಳಾಗದ ಅಣ್ಣಗಳಾರು?

"ರಾಣೀ ಸಾಹೇಬರನ್ನು ಮಾಲೇಗಾಂವಕ್ಕೆ ಕಳಿಸಬೇಕೆಂದು ಸರಕಾರದವರು ವಿಚಾರ ಮಾಡ್ತಿದ್ದಾರಂತ ಕೇಳಿದ್ದೀನಿ," ಎಂದು ಆತ ಹೇಳಿದ.

"ಅದೆಲ್ಲಿದೆಯಪ್ಪ?"

"ದೂರ....ಬಹಳ ದೂರ....ಪುಣ್ಯ ಪಟ್ಟಣ ದಾಟಿ ಹೋಗಬೇಕು. ಖಾನದೇಶ ಅಂತಾರ ಆ ಸೀಮೆಗೆ."

"ಅಯ್ಯೋ ಮಾರಾಯರೆ, ನಿಮ್ಮ ಕಾಲಿಗೆ ಬೀಳುತ್ತೇನೆ. ಅಷ್ಟು ದೂರ ಕಳಿಸಿದರೆ ನನ್ನ ರಾಣಿಯವರು ಉಳಿಯುವುದೇ ಶಕ್ಯವಿಲ್ಲ. ಕಿತ್ತೂರ ನಾಡಿನಲ್ಲೇ ಎಲ್ಲಾದರೂ ನಮ್ಮನ್ನಿಡಿಸಿ. ಈ ಕುಸುಗಲ್ಲೂ ಬೇಡ," ಎಂದು ಆತನಿಗೆ ಅಂಗಲಾಚಿ ಬೇಡಿಕೊಂಡೆ.

"ಆಗಲವ್ವ. ನನ್ನ ಕೈಲಾದಷ್ಟು ಪ್ರಯತ್ನ ಮಾಡ್ತೀನಿ. ಆದರೆ, ಕಲೆಕ್ಟರ್ ಸಾಹೇಬ ಏನು ನಮ್ಮ ಮಾವನ ಮಗ ಅಲ್ಲ. ಅವರ ಮನಸ್ಸಿಗೆ ಬಂದದ್ದು ಅವರು ಮಾಡುತ್ತಾರೆ," ಎಂದ ಅಧಿಕಾರಿ.

ಧಾರವಾಡದ ಸಾಹೇಬನಿಗೆ ಅವನು ಏನು ಬರೆದನೋ ಏನೋ. ಅಂತೂ ಎರಡು ದಿನಗಳೊಳಗಾಗಿಯೇ ನಮ್ಮನ್ನು ಕುಸುಗಲ್ಲಿನಿಂದ ಹೊರಡಿಸಿ ಧಾರವಾಡಕ್ಕೆ ಕರೆದುಕೊಂಡು ಬಂದು, ಉಳವೀ ಬಸವೇಶ್ವರನ ದೇವಸ್ಥಾನದ ಹತ್ತಿರವಿದ್ದ ಮನೆಯೊಂದರಲ್ಲಿ ಬಿಡಾರ ಮಾಡಿಸಿದರು. ಅದೇ ದಿನವೇ ಕಲೆಕ್ಟರ್ ಸಾಹೇಬ ಬಂದು ರಾಣಿಯವರನ್ನು ನೋಡಿ ಹೋದ.

ಮರುದಿವಸ ಮುಂಜಾನೆ ಇಂಗ್ರೇಜ ವೈದ್ಯನೊಬ್ಬ ಬಂದ. ರಾಣಿಯವರು ಮಾತ್ರ ಅವನಿಗೆ ತಮ್ಮ ಮೈಮುಟ್ಟಲೂ ಬಿಡಲಿಲ್ಲ. ಆತ ಕೆಲವು ಗುಳಿಗೆಗಳನ್ನು ನನ್ನ ಕೈಗೆ ಕೊಟ್ಟು ಪ್ರತಿದಿನವೂ ತಪ್ಪದೆ ನಾಲ್ಕು ನಾಲ್ಕು ಗುಳಿಗೆ ಕೊಡ ಬೇಕೆಂದು ಹೇಳಿ ಹೊರಟುಹೋದ.

ಆತ ಕೊಟ್ಟ ಗುಳಿಗೆ ಸೇವಿಸಲೂ ರಾಣಿಯವರು ಒಪ್ಪಲಿಲ್ಲ.

"ಆದಷ್ಟು ಬೇಗ ಶಿವನ ಪಾದ ಸೇರಿಕೊಳ್ತೀನಿ ಪಾರ್ವತೀ. ನನಗೆ ಔಷಧವೂ ಬೇಡ. ಏನೂ ಬೇಡ" ಎಂದರು.

"ಛೆ, ಛೆ. ಹಾಗಂದರೆ ಹೇಗೆ ರಾಣಿಸಾಹೇಬ್? ಇಷ್ಟು ದಿವಸ ಕುಸುಗಲ್ಲಿನ ಹವಾ ನಿಮಗಾಗುತ್ತಿರಲಿಲ್ಲ. ಆದಕ್ಕಿಂತ ಧಾರವಾಡದ ಹವಾ ತಂಪು, ಔಷಧ ಸರಿಯಾಗಿ ತಕ್ಕೊಂಡರೆ ನೀವು ಬೇಗ ನೆಟ್ಟಗಾಗ್ತೀರಿ. ಹಟ ಮಾಡಬೇಡಿರಿ. ತಗೊಳ್ರಿ" ಎಂದೆಲ್ಲ ಬಲವಂತ ಮಾಡಿ ಎರಡು ಗುಳಿಗೆ ತಿನ್ನಿಸಿದೆ.

ತಮ್ಮ ಬಲಹೀನ ಕೈಯಿಂದ ನನ್ನ ತಲೆಗೂದಲು ಸವರುತ್ತ, ರಾಣಿಯವರೆಂದರು :

"ಹಿಂದಿನ ಜನ್ಮದಲ್ಲಿ ನೀನೇ ನನ್ನ ತಾಯಿಯಾಗಿದ್ದೆಯೋ ಏನೋ! ಆದಕ್ಕೇ ಇಂಥ ಕಷ್ಟಕಾಲದಲ್ಲೂ ನೀನೊಬ್ಬಳು ಮಾತ್ರ ನನ್ನ ಸಂಗಡ ಇದ್ದೀ. ಮುಂದಿನ ಜನ್ಮದಲ್ಲಿ ನೀನು ನನ್ನ ಅಕ್ಕನಾಗಿಯೇ ಹುಟ್ಟಿ ಬಾ ಪಾರ್ವತೀ. ಆಗ ಶಕ್ಯವಾದರೆ ನಿನ್ನ ಉಪಕಾರ ತೀರಿಸುವೆನಂತೆ!"

ಅಷ್ಟು ಹೇಳುತ್ತಿದ್ದಂತೆಯೇ ಅವರಿಗೆ ಆಯಾಸವಾಗಿ ಕೆಮ್ಮು ಬಂದಿತು. ಕೆಮ್ಮುತ್ತಿದ್ದಂತೆಯೇ ಅವರು ಮೇಲುಸಿರು ಬಿಡತೊಡಗಿದರು. ನಾನು ಗಾಬರಿಗೊಂಡು ಸೇವಕರನ್ನು ಕೂಗಿ, ತಕ್ಷಣವೇ ವೈದ್ಯರನ್ನು ಕರೆದು ತರಲು ಹೇಳಿದೆ. ಮುಂಜಾನೆ ಬಂದಿದ್ದ ಆ ಇಂಗ್ರೇಜ ವೈದ್ಯನೇ ಪುನಃ ಬಂದು ಪ್ರಜ್ಞಾಶೂನ್ಯ ಸ್ಥಿತಿಯಲ್ಲಿದ್ದ ರಾಣಿಯವರ ನಾಡಿ ಹಿಡಿದು ನೋಡಿ, ನಮಗಾರಿಗೂ ಅರ್ಥವಾಗದ ಭಾಷೆಯಲ್ಲಿ ಏನೇನೋ ಪುಟುಪುಟಿಸಿ ಕತ್ತು ಅಲುಗಾಡಿಸಿ, ಮತ್ತೆ ನಾಲ್ಕು ಗುಳಿಗೆಗಳನ್ನು ತೆಗೆದುಕೊಟ್ಟು, ಅವುಗಳನ್ನು ನೀರಿನಲ್ಲಿ ಕರಗಿಸಿ ಕೊಡುವಂತೆ ಹೇಳಿ ಹೊರಟು ಹೋದ.

ರಾತ್ರಿ ರಾಣಿಯವರಿಗೆ ಪ್ರಜ್ಞೆಯೇನೋ ಮರಳಿತು. ಗುಳಿಗೆಗಳನ್ನು ಕರಗಿಸಿದ ನೀರನ್ನು ನಾನು ಒತ್ತಾಯದಿಂದ ಕುಡಿಸಿದೆ. ಆದರಿಂದ ಅವರಿಗೆ

ಗುಣವಾಗುವ ಬದಲು ಇನ್ನಷ್ಟು ಕೆಡುಕೇ ಆದಂತೆ ಕಾಣಿಸತೊಡಗಿತು. ಮತ್ತೆ ಬೆಳಗಾಗುವಷ್ಟರಲ್ಲಿಯೇ ಅವರು ಪ್ರಜ್ಞಾಶೂನ್ಯರಾಗಿದ್ದರು. ವೈದ್ಯ ಕೊಟ್ಟ ಗುಳಿಗೆಗಳಲ್ಲಿ ವಿಷ ಬೆರೆತಿದ್ದರೂ ಇರಬಹುದೆಂದು ಆಗ ನನಗೆ ಅನುಮಾನ ಬರತೊಡಗಿತು. ಕಿತ್ತೂರ ಸಂಸ್ಥಾನದ ಹಕ್ಕುದಾರಳಾಗಿ ಉಳಿದಿದ್ದವರೆಂದರೆ ವೀರಮ್ಮ ರಾಣಿಯೊಬ್ಬರೇ. ಅವರನ್ನೂ ಮುಗಿಸಿಬಿಟ್ಟರೆ ನಿಶ್ಚಿಂತೆಯಾಗುವುದೆಂದು ಯೋಚಿಸಿ ಇಂಗ್ರೇಜರು ಇವರಿಗೆ ವಿಷವನ್ನೂ ತಿನ್ನಿಸುವುದು ಶಕ್ಯವಿತ್ತು. ಎಂಥ ನೀಚ ಕೃತ್ಯಕ್ಕೂ ಅವರು ಹೇಸಿ ಕೊಳ್ಳುವವರಲ್ಲ ಎನ್ನುವುದಂತೂ ನಮಗೆಲ್ಲ ಯಾವಾಗಲೋ ಸ್ಪಷ್ಟವಾಗಿತ್ತು.

ಆಗ ನಾನು ಪಶ್ಚಾತ್ತಾಪದ ಬೆಂಕಿಯಲ್ಲಿ ಬೇಯತೊಡಗಿದೆ. ರಾಣಿಯವರು ಬೇಡವೆಂದರೂ ಅವರ ಅಪ್ಪಣೆಯನ್ನು ಪಾಲಿಸದೆ, ಗುಳಿಗೆಗಳನ್ನು ಒತ್ತಾಯದಿಂದ ತಿನ್ನಿಸಿ ಅವರ ಮರಣವನ್ನು ಎಳೆದು ತಂದೆನೋ ಏನೋ! ಈ ಗುಳಿಗೆಗಳ ಬಗ್ಗೆ ನನಗೆ ಮೊದಲೇ ಯಾಕೆ ಸಂಶಯ ಬರಲಿಲ್ಲ? ಶಿವ ಶಿವಾ! ಎಂಥ ಪ್ರಮಾದ ಜರುಗಿತಲ್ಲ ನನ್ನಿಂದ ?

ಗುಳಿಗೆಗಳಲ್ಲಿ ವಿಷವಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷೆ ಮಾಡಿಯೇ ತೀರುವುದೆಂದುಕೊಂಡು, ಎರಡು ಗುಳಿಗೆಗಳನ್ನು ಹಾಲಿನಲ್ಲಿ ಕರಗಿಸಿ ಬೆಕ್ಕಿಗೆ ಕುಡಿಸಿದೆ. ಏಳೆಂಟು ತಾಸುಗಳೊಳಗಾಗಿ ಆ ಬೆಕ್ಕು ಮೂಲೆಯೊಂದರಲ್ಲಿ ಬಿದ್ದು ನರಳತೊಡಗಿತು. ಮತ್ತೆ ಎರಡು ದಿನಗಳವರೆಗೆ ಅದು ಜೀವದಿಂದಿದ್ದಿತಾದರೂ ಬಿದ್ದ ಸ್ಥಳದಿಂದ ಮೇಲಕ್ಕೇಳದೆ, ಅನ್ನವನ್ನೂ ಮುಟ್ಟದೆ ಹಾಗೆಯೇ ಒದ್ದಾಡುತ್ತಲಿತ್ತು.

ರಾಣಿಯವರಿಗೂ ಮತ್ತೆ ಪ್ರಜ್ಞೆ ಬರಲಿಲ್ಲ. ಇಂಗ್ರೇಜರು ವಿಷ ಹಾಕಿದ ವಿಷಯವೂ ಅವರಿಗೆ ಗೊತ್ತಾಗಲಿಲ್ಲ. ಗೊತ್ತಾಗದಿದ್ದುದೂ ಒಳ್ಳೆಯದೇ ಆಯಿತು. ಈಗಾಗಲೇ ಅನೇಕ ಹೊಡೆತಗಳಿಂದ ಪೂರ್ತಿಯಾಗಿ ಗಾಸಿಗೊಂಡಿದ್ದ ಆ ಕೋಮಲ ಜೀವಕ್ಕೆ ಇನ್ನೊಂದು ಅಸಹ್ಯಕರವಾದ ಆಘಾತವಾಗುವುದು ತಪ್ಪಿತು.

ಸೋಮವಾರ ಅರುಣೋದಯವಾಗುತ್ತಿದ್ದಂತೆ ಅವರ ಪ್ರಾಣ ಪಕ್ಷಿ ಹಾರಿಹೋಯಿತು.

# ೨೩ ಬಿಚ್ಚುಗತ್ತಿ ಚೆನ್ನಬಸಪ್ಪ

ಏಳೆಂಟು ತಿಂಗಳುಗಳಿಂದ ಕತ್ತರಿಯ ಸಂಪರ್ಕವಿಲ್ಲದೆ ನಿರಾತಂಕವಾಗಿ ಬೆಳೆದಿದ್ದ ತಲೆಗೂದಲು, ಎದೆಯವರೆಗೆ ಇಳಿಬಿದ್ದ ಗಡ್ಡ, ಮುಸಲ್ಮಾನ್ ಫಕೀರರ ಕರಿಯ ಕಫನಿ, ಎಡಗೈಯಲ್ಲಿ ಜೋಳಿಗೆ, ಬಲಗೈಯಲ್ಲಿ ಫಕೀರರ ದಂಡ–ಈ ವೇಷದಲ್ಲಿ ಸಂಗೊಳ್ಳಿಗೆ ಬಂದ ನನ್ನನ್ನು ಯಾರೂ ಗುರುತು ಹಿಡಿಯಲಿಲ್ಲ. ನನ್ನನ್ನು ಚೆನ್ನಾಗಿ ಬಲ್ಲ ಕೆಂಚವ್ವನೂ ಸಹ ನಾನು ಫಕೀರನಾಗಿರಬೇಕೆಂದೇ ಬಗೆದು ಮೊರದಲ್ಲಿ ಜೋಳ ತಂದು ನನ್ನ ಜೋಳಿಗೆಗೆ ಹಾಕಿದಳು. ಮುಸಲ್ಮಾನೀ ಭಾಷೆಯಲ್ಲಿ ಏನೇನೋ ಪುಟಪುಟಿಸಿ, ನಾನು ಅತ್ತಿತ್ತ ನೋಡಿ, ಸಮೀಪದಲ್ಲಿ ಯಾರೂ ಇಲ್ಲದಿದ್ದುದನ್ನು ಮನವರಿಕೆ ಮಾಡಿಕೊಂಡು, ಕೆಂಚವ್ವನಿಗೆ ಮಾತ್ರ ಕೇಳಿಸುವಂತೆ ಪಿಸುದನಿಯಲ್ಲಿ ಹೇಳಿದೆ :

"ನನ್ನ ಗುರುತಾಗಲಿಲ್ಲೇನ ಚಿಗವ್ವಾ? ನಾ ನಿನ್ನ ಮಗಾ ಚೆನಬಸೂ."

ನನ್ನ ಅಣ್ಣನಂತಿದ್ದ ರಾಯಣ್ಣನ ನೆನಪು ಬಂದು, ಕೆಂಚವ್ವನ ಮುಖ ದುಃಖದಿಂದ ಬಿಗಿದು, ಕಣ್ಣುಗಳಿಂದ ಅಶ್ರುಗಳು ಹೊರಚಿಮ್ಮಿದವು. ಬೀದಿಯಲ್ಲೆಲ್ಲ ದೃಷ್ಟಿಯೋಡಿಸಿ, ಯಾರೂ ಇಲ್ಲದಿದ್ದುದನ್ನು ಕಂಡು ಆಕೆ ಲಗುಬಗೆಯಿಂದ ಹೇಳಿದಳು :

"ಒಳಗೆ ಬಾರೋ ನನ್ನ ಮಗನ! ಎಷ್ಟು ದಿನಾ ಆತಲ್ಲ ನೀ ಭೆಟ್ಟಿಯಾಗಿ !"

ನನ್ನನ್ನು ಮನೆಯೊಳಗೆ ಸೇರಿಸಿ, ಹೊರಬಾಗಿಲು ಮುಚ್ಚಿ ಅಗುಳಿ ಹಾಕಿ, ಪಡಸಾಲೆಯಲ್ಲಿ ಕುಸಿದು ಕುಳಿತು ಕೆಲಹೊತ್ತು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು ಕೆಂಚವ್ವ. ಅತ್ತಷ್ಟೂ ಸಮಾಧಾನವಾಗುವುದೆಂಬುದನ್ನು ಬಲ್ಲ ನಾನು ಆಕೆಯನ್ನು ಸಂತೈಸುವ ಗೊಡವೆಗೆ ಹೋಗದೆ ಸುಮ್ಮನಿದ್ದೆ.

ನಡುಹಗಲಿನ ಸಮಯವಾದುದರಿಂದ ಮನೆಯಲ್ಲಿ ಬೇರೆ ಯಾರೂ ಇರಲಿಲ್ಲ. ಸುಗ್ಗಿಯ ದಿನಗಳಾದುದರಿಂದ ಎಲ್ಲರೂ ಹೊಲದಲ್ಲಿಯೇ ಇರಲು ಸಾಕು. ಬೀದಿಗಳಲ್ಲಿ ಜನರ ಸುಳಿದಾಟವಿಲ್ಲದಿರಲೂ ಅದೇ ಕಾರಣವಾಗಿತ್ತು. ರಾಯಣ್ಣನ ಬಂಧನದ ಸುದ್ದಿ ಕೇಳಿಬಂದಂದಿನಿಂದ ಕೆಂಚವ್ವನ ಮನಸ್ಸಿಗೆ

ಆಘಾತವಾಗಿ ಆಕೆ ಅದೇ ಚಿಂತೆಯಲ್ಲಿ ಹಾಸಿಗೆ ಹಿಡಿದಿದ್ದಳೆಂದು ಕೇಳಿದ್ದೆ. ಇಷ್ಟು ದಿನಗಳವರೆಗೂ ಗೂಢಚಾರರ ಕಣ್ಣುತಪ್ಪಿಸಿ ಇತ್ತಕಡೆ ಬರಲು ಶಕ್ಯವಾಗಿರಲಿಲ್ಲ. ಇತ್ತೀಚಿಗಷ್ಟೇ ನಾನು ಫಕೀರನ ವೇಷ ಹಾಕಿಕೊಂಡು ತಿರುಗುತ್ತಿದ್ದೆ. ಕಿತ್ತೂರು ಬೈಲಹೊಂಗಲಗಳಲ್ಲೂ ಸಹ ಅದೇ ವೇಷದಲ್ಲಿ ಅನೇಕ ಸಲ ಅಲೆದಾಡಿ, ಗೂಢಚಾರರು ನನ್ನನ್ನು ಗುರುತಿಸದಿದ್ದುದನ್ನು ಕಂಡುಕೊಂಡು ಇದೀಗ ಸಂಗೊಳ್ಳಿಗೆ ಬಂದಿದ್ದೆ.

ಎಂಟು ಹತ್ತು ತಿಂಗಳ ಅವಧಿಯಲ್ಲಿಯೇ ಮುಪ್ಪಿನ ಮುದುಕಿಯಂತೆ ಒಣಗಿ ಹೋಗಿದ್ದ ಕೆಂಚವ್ವನನ್ನು ಕಂಡು ನನಗೆ ಆಶ್ಚರ್ಯವೇನೂ ಆಗಲಿಲ್ಲ. ಪ್ರೀತಿಯ ಮಗ ಇಂಥ ಭಯಂಕರ ಸಂಕಟಕ್ಕೆ ಸಿಕ್ಕಿಕೊಂಡರೆ ಯಾವ ತಾಯಿಗಾದರೂ ಬದುಕು ಬೇಡವಾಗುವುದು ಸಹಜ. ಕೆಂಚವ್ವನ ತಲೆಗೂದ ಲೆಲ್ಲ ಬೆಳ್ಳಗೆ ಹಂಜೀಬುಟ್ಟಿಯಾಗಿತ್ತು. ಕೈ ಕಾಲುಗಳು ಹತ್ತೀ ಕಟ್ಟಿಗೆಯಂತೆ ಕೃಶವಾಗಿದ್ದವು.

ದುಃಖದ ಆವೇಗ ಕಡಿಮೆಯಾದ ಬಳಿಕ ಕೆಂಚವ್ವ ನನ್ನ ಹತ್ತಿರ ಬಂದು ಕುಳಿತು, ನನ್ನ ಮುಖದ ಮೇಲೂ ತಲೆಯ ಮೇಲೂ ಅಕ್ಕರೆಯಿಂದ ಕೈಯಾಡಿಸುತ್ತ ಮಾತನಾಡಿದಳು.

"ನೀನೂ ಎಷ್ಟು ಸೊರಗೀಯಲ್ಲಪ್ಪಾ ನನ್ನ ಮಗನೆ? ಗುಡ್ಡಾ ಬೆಟ್ಟಾ ಸುತ್ತಿ ಉಪವಾಸ ಮಾಡಿ, ಹೆಂಗಿದ್ದವ ಹೆಂಗಾಗಿ ಹೋದಿಯಲ್ಲ?"

"ಆದರಾಗ್ಲಿ ಬಿಡವ್ವ. ನಂದೇನು ದೊಡ್ಡದಲ್ಲ. ನಾನೊಬ್ಬ ಸ್ವತಂತ್ರ ವಾಗಿಯಾದರೂ ಇದೀನಿ. ಆದರ, ನನ್ನ ಗೆಳೆಯ ರಾಯಣ್ಣ ಧಾರವಾಡದ ಕಿಲ್ಲೇದಾಗ ಕೈದಿಯಾಗಿ ಬೀಳುವ ಪ್ರಸಂಗ ಬಂತಲ್ಲ? ಅವಗೆಷ್ಟು ದುಃಖ ಆಗ್ತಿರಬಹುದು?"

ಮತ್ತೆ ಕೆಂಚವ್ವನ ಕೊರಳು ಬಿಗಿಯಿತು. ಆದರೂ, ತನ್ನ ಉಮ್ಮಳ ವನ್ನು ಹತ್ತಿಕ್ಕಿಕೊಂಡು ಆಕೆಯೆಂದಳು :

"ಏನೇನ ಆಗೊದಿತ್ತೋ ಅದೆಲ್ಲಾ ಆಗಲಿಕ್ಕೇ ಬೇಕಲ್ಲ ಚನಬಸೂ? ಪರದೇಶಿಗಳ ವಿರುದ್ಧ ನೀವು ಬಂಡು ಹೂಡಿದಾಗಲೇ ನನಗೆ ಅನಿಸಿತ್ತು-ಗೆದ್ದರೆ ದಳವಾಯಿಗಳಾಗಿ ಮೆರೀತೀರಿ, ಸೋತರೆ ಸೆರೆಯಾಳಾಗತೀರಿ ಅಂತ. ಏಳೆಂಟು ತಿಂಗಳವರೆಗೆ ಸರ್ಕಾರಕ್ಕೆ ಮಣ್ಣು ತಿನ್ನಿಸಿದ ರಾಯಣ್ಣ ಅವರ

ಕೈಯಾಗ ಸಿಕ್ಕಮ್ಯಾಲ ಅವರು ಸೇಡು ತೀರಿಸಿಕೊಳ್ಳೂದೂ ಸಹಜ. ನನ್ನ ಮಗನ್ನ ನೋಡಿದ್ದಿಯಾ ಆ ಮ್ಯಾಲ? ಈಗ ಹೆಂಗದಾನ ಅವ?"

"ಆರಾಮ ಅದಾನವ್ವ. ನಾ ಸ್ವತಾ ಅವನ್ನ ನೋಡಿಲ್ಲ. ನೋಡ ಬೇಕಂತ ಎಷ್ಟು ಪ್ರಯತ್ನ ಮಾಡಿದರೂ ಶಕ್ಯ ಆಗಲಿಲ್ಲ. ರಾಯಣ್ಣನನ್ನಿಟ್ಟ ಸೆರೆಮನೆಯ ಸುತ್ತ ಮುತ್ತ ಬಿಗಿಯಾದ ಪಹರೆ ಇಟ್ಟಿದ್ದಾರ. ಧಾರವಾಡದ ಕಿಲ್ಲೇ ವಶಪಡಿಸಿಕೊಂಡರೆ ಮಾತ್ರ ರಾಯಣ್ಣನ ಭೆಟ್ಟಿಯಾಗೂದು ಶಕ್ಯವಾದೀತು. ಅದಕ್ಕೂ ಪ್ರಯತ್ನಮಾಡಿ ನೋಡಿವಿ. ಆದರೆ, ನಮ್ಮ ಮಂದಿಯೆಲ್ಲಾ ಎಲ್ಲೆಲ್ಲ್ಯೋ ಚದುರಿ ಹೋಗಿದಾರ. ಸಾವಿರಾರು ಮಂದಿಯ ದಂಡು ತೋಫು-ತುಬಾಕಿ ಕೂಡಿಸೂದು ಶಕ್ಯ ಆಗಲಿಲ್ಲ. ಏನ್ಮಾಡೂದು ಹೇಳು."

"ಕೊಲ್ಲಾಪುರದ ರಾಜಾಸಾಬ ನಿಮ್ಮ ಸಹಾಯಕ್ಕೆ ದಂಡು ಕಳಿಸ್ತಾನ ಅಂತಿದ್ದಿರಲ್ಲ?"

"ಅದೂ ಸುಳ್ಳಾತು ಅವ್ವಾ. ಈಗ ಅವನ ಪರಿಸ್ಥಿತೀನೇ ನೆಟ್ಟಗಿಲ್ಲ. ಇಂಗ್ರೇಜರು ಅವನ ಮ್ಯಾಲೂ ಕಾವಲು ಇಟ್ಟಾರಂತೆ. ತನ್ನ ಗಾದೀ ಉಳಿಸಿ ಕೊಂಡು ಇರೂದ ರಗಡಾಗೈತಿ ಅವಗ. ಇನ್ನ ನಮ್ಮ ಸಹಾಯಕ್ಕೆ ಹೆಂಗ ಬಂದಾನು?"

"ಸರದಾರ್ ವೀರಪ್ಪನವರು ಎಲ್ಲಿದ್ದಾರ?"

"ಅವರು ಸೆರೆಮನೆಯಲ್ಲೇ ತೀರಿಕೊಂಡರಂತವ್ವ. ನನಗೂ ಮೊನ್ನೆ ಗೊತ್ತಾತು........"

"ಈರಮ್ಮ ರಾಣಿಯೂ ತೀರಿಕೊಂಡರಂತಲ್ಲ ಧಾರವಾಡದಾಗ?"

"ಹೌದವ್ವ. ಅವರೂ ಹೋಗಿಬಿಟ್ರು. ಪರದೇಶಿಗಳು ಅವರಿಗೆ ವಿಷಾ ಹಾಕಿ ಕೊಂದರಂತ ಸುದ್ದಿ ಐತಿ."

"ಇದ್ದರೂ ಇರಬಹುದು. ನಿಮ್ಮ ಆ ಗೆಳೆಯ ಗಂಗಾಧರಪ್ಪ ಎಲ್ಲಿದಾನ?"

"ಅವನೂ ಅಲ್ಲೇ ಇದಾನ ಸೆರೆಮನೆಯೊಳಗ."

"ಅ ಮಟ್ಟೂರಿಗೆ ಹೋಗಿದ್ದಿಯಾ ಚೆನಬಸೂ? ಹೆಂಡತಿ ಮಕ್ಕಳನ್ನ ನೋಡಿ ಎಷ್ಟು ದಿನ ಆತು?"

"ಕುಲಕರ್ಣಿಯ ಬಣವೀ ಸುಟ್ಟು ಊರು ಬಿಟ್ಟ ಮ್ಯಾಲ ಅಮಟೂರಿಗೆ

ಹೋಗಲಿಕ್ಕೇ ಆಗಿಲ್ಲವ್ವ. ಹೋಗಿದ್ದರ ನಾನೂ ಸಿಗುತಿದ್ದಿನಿ ಪರದೇಶಿಗಳ ಕೈಯಾಗ. ಸಿಕ್ಕಿದ್ದರೂ ನನಗೇನ ದುಃಖ ಆಗ್ತಿರಲಿಲ್ಲ. ಸೆರೆಮನೆಯೊಳಗ ರಾಯಣ್ಣನ ಸಂಗಡವೇ ಇರ್ತಿದ್ದಿನಿ. ಆದರ, ರಾಯಣ್ಣನೇ ಬೇಡ ಅಂದ. ನೀ ಸಿಗಬಾರದು ಚೆನಬಸೂ, ಅಂತ ಹೇಳಿ ಕಳಿಸಿದ. ಆವನ ಮಾತು ನಾ ಎಂದು ಮೀರಿದ್ದಿನಿ ಹೇಳು ಚಿಗವ್ವಾ? ಅದಕ್ಕಂತೇ ಹಿಂಗ, ಆ ಸೋಗು ಈ ಸೋಗು ಹಾಕಿಕೊಂಡು ತಿರುಗಿಕೊಂತ ಇದ್ದೀನಿ."

ಒಂದೆರಡು ಕ್ಷಣ ಮೌನವಾಗಿದ್ದು ಕೆಂಚವ್ವ ಮತ್ತೆ ಕೇಳಿದಳು:

"ಇನ್ನೂ ಎಷ್ಟು ದಿವಸ ರಾಯಣ್ಣನ್ನ ಸೆರೆಯಾಗಿಡತಾರ ಚೆನಬಸೂ? ಅವಗೇನು ಶಿಕ್ಷಾ ಮಾಡುತಾರೋ?"

ಕೆಂಚವ್ವನ ಪ್ರಶ್ನೆಗೆ ಒಡನೆಯೇ ಉತ್ತರವೀಯದೆ ಒಂದೆರಡು ಕ್ಷಣ ನಾನು ತಲೆ ತಗ್ಗಿಸಿ ಕುಳಿತುಕೊಂಡಿದ್ದೆ. ಆ ತಾಯಿಯ ಜೀವಕ್ಕೆ ಆಘಾತವಾಗದಂತೆ ಬಹಳ ನಯವಾಗಿ ರಾಯಣ್ಣನಿಗಾದ ಶಿಕ್ಷೆಯ ಸಮಾಚಾರ ತಿಳಿಸಬೇಕಾಗಿತ್ತು. ಆ ಸುದ್ದಿ ನನಗೆ ಗೊತ್ತಾದಂದಿನಿಂದ ಈ ಎರಡು ದಿನಗಳ ಅವಧಿಯಲ್ಲಿ ನನ್ನ ತಳಮಳವನ್ನು ಹತ್ತಿಕ್ಕಿಕೊಂಡು ಎದೆಯನ್ನು ಕಲ್ಲಿನಂತೆ ಗಟ್ಟಿಗೊಳಿಸಲು ಪ್ರಯತ್ನಿಸಿದ್ದರೂ ಸಹ, ರಾಯಣ್ಣನ ತಾಯಿಯೆದುರು ಆ ವಿಚಾರ ತಿಳಿಸುವ ಸಮಯ ಬಂದಾಗ ನನ್ನ ಧೈರ್ಯವೆಲ್ಲ ಕರಗಿ ನೀರಾಗಿ ನನ್ನ ಕೊರಳೂ ಬಿಗಿದು ಬಂದಿತು.

ನನ್ನ ಮುಖವನ್ನೇ ದಿಟ್ಟಿಸುತ್ತಲಿದ್ದ ಕೆಂಚವ್ವನಿಗೂ ಅನುಮಾನ ಬಂದಿರಬೇಕು. ಗದ್ಗದ ಸ್ವರದಲ್ಲಿ ಆಕೆ ಕೇಳಿದಳು:

"ಹಿಂಗ್ಯಾಕ ಗಪ್ಪ ಕುಂತಿಯೋ ಚೆನಬಸೂ? ಈಗಾಗಲೇ ಏನಾರ ಆಗಿಹೋಗೈತ್ಯೋ ಏನ? ಯಾಕ ಹೇಳವೊಲ್ಲಿ?"

"ಚಿಗವ್ವಾ, ಹೆಂಗ ಹೇಳಲಿ? ಯಾವ ಮಾರಿಯಿಂದ ಹೇಳಲಿ?" ಎನ್ನುತ್ತ, ಕೆಂಚವ್ವನ ಪಾದಗಳ ಮೇಲೆ ತಲೆಯಿರಿಸಿ, ಬಿಕ್ಕುತ್ತ ಬಿಕ್ಕುತ್ತ ಹೇಳಿದೆ:

"ನನ್ನಣ್ಣ ರಾಯಣ್ಣಗ ಗಲ್ಲಿನ ಶಿಕ್ಷಾ ಆಗೈತಿ ಅವ್ವಾ. ನಾಡದು ಮುಂಜಾನೆ ಅಂವರೆ ನಂದಗಡದಾಗ ಗಲ್ಲಿಗೇರಸತಾರ. ನಿಮಗ ಈ ಕೆಟ್ಟ ಸುದ್ದೀ ತಿಳಿಸಿ ನಂದಗಡಕ್ಕ ಕಳಿಸುವ ಪಾಪದ ಕೆಲಸ ನಾನೇ ಮಾಡಬೇಕಾತಲ್ಲ ಅವ್ವಾ......"

ರಾಯಣ್ಣ ನನ್ನ ತಬ್ಬಿಕೊಳ್ಳುತ್ತಿದ್ದಂತೆಯೇ ನನ್ನನ್ನೂ ತಬ್ಬಿಕೊಂಡು ವಾತ್ಸಲ್ಯದಿಂದ ನನ್ನ ತಲೆಯ ಮೇಲೆ ಕೈಯಾಡಿಸುತ್ತ ಎಷ್ಟೋ ಹೊತ್ತು ಮೌನವಾಗಿ ಕುಳಿತಿದ್ದಳು ಕೆಂಚವ್ವ. ಮತ್ತೆ ಆಕೆ ಅಳಲಿಲ್ಲ. ಕಣ್ಣೀರು ಸುರಿಸಲಿಲ್ಲ. ಆ ತಾಯಹೃದಯದ ಶೋಕವೆಲ್ಲಾ ಹೆಪ್ಪುಗಟ್ಟಿ ಮಹಾ ಮೌನದ ರೂಪ ತಳೆದಂತಿತ್ತು.

ಎರಡು ತಾಸುಗಳವರೆಗೆ ಹಾಗೆಯೇ ಆಕೆಯ ಸನ್ನಿಧಿಯಲ್ಲಿ ಕುಳಿತಿದ್ದು ಅನಂತರ ಅಮಟೂರಿಗೆ ಹೋಗಿ ಬರುವುದಾಗಿ ಹೇಳಿ ಎದ್ದು ಹೊರಟೆ. ಆಗಲೂ ಆಕೆ ಮಾತನಾಡಲಿಲ್ಲ. ಮೌನವಾಗಿಯೇ ಕತ್ತು ಅಲುಗಾಡಿಸಿ ಸಮ್ಮತಿ ಸೂಚಿಸಿದಳು.

ಅಮಟೂರಿನಲ್ಲೂ ನನ್ನನ್ನು ಯಾರೂ ಗುರುತಿಸಲಿಲ್ಲ. ನಮ್ಮ ಹೊಲದಲ್ಲಿ ಅದೇ ದಿವಸ ಜೋಳದ ರಾಶಿ ಸಿದ್ಧವಾಗಿತ್ತು. ನನ್ನ ಹೆಂಡತಿ ಮಕ್ಕಳೂ ಕಣದಲ್ಲಿಯೇ ಗುಡಿಸಲು ಹಾಕಿಕೊಂಡು ಬಿಡಾರ ಹೂಡಿದ್ದರು. ಮಬ್ಬುಗತ್ತಲು ಪಸರಿಸಿದ ತರುವಾಯ ಸಾವಧಾನದಿಂದ ಹೋಗಿ ಹೆಂಡತಿಯೆದುರು ನಿಂತಾಗ ಅವಳೂ ನನ್ನನ್ನು ಒಮ್ಮೆಲೆ ಗುರುತಿಸಲಿಲ್ಲ. ನನ್ನ ಧ್ವನಿ ಕೇಳಿ, ಗುರುತು ಹಿಡಿದು, ಆಕೆ ಅಳುತ್ತಳುತ್ತ ನನ್ನ ಕಾಲುಗಳ ಮೇಲೊರಗಿದಳು. ಮಕ್ಕಳೂ ಧಾವಿಸಿ ಬಂದು ಅಪ್ಪಿಕೊಂಡರು. ಹತ್ತು ತಿಂಗಳುಗಳ ದೀರ್ಘ ವನವಾಸದ ತರುವಾಯ ಆ ರಾತ್ರಿ ಕುಟುಂಬದವರೊಡನೆ ಕುಳಿತು ಊಟ ಮಾಡಿದೆ. ಬೆಳಗಾಗುವುದರೊಳಗಾಗಿಯೇ ನಾನು ಅಲ್ಲಿಂದ ಹೊರಟುಬಿಡುವುದು ಅಗತ್ಯವಾಗಿತ್ತು. ನಾನು ರಾಯಣ್ಣನ ಮುಖ್ಯ ಸಹಕಾರಿಯಾಗಿದ್ದುದರಿಂದ ಪರದೇಶಿಗಳು ನನ್ನನ್ನು ಹಾಗೆಯೇ ಬಿಡುವಂತಿರಲಿಲ್ಲ. ಎಂತಲೇ, ಇನ್ನೂ ಅನೇಕ ವರ್ಷಗಳವರೆಗೆ ನಾನು ಊರನ್ನೂ ಮನೆಯನ್ನೂ ತೊರೆದು ದೇಶಾಂತರವಾಸಿಯಾಗಿರಬೇಕಾದುದು ಅನಿವಾರ್ಯವಾಗಿತ್ತು.

"ಎಲ್ಲಿರುವವರು ? ಏನು ಮಾಡುವವರು ? ಯಾವುದಾದರೂ ದೂರದ ಊರಿಗೆ ಹೋಗಿ ಕೂಲಿನಾಲಿ ಮಾಡಿ ದುಡಿದುಕೊಂಡು ಇರೂಣಲ್ಲ, ಎಲ್ಲರೂ ಕೂಡಿ ?" ಎಂದಳು ನನ್ನ ಪತ್ನಿ.

"ಹಂಗೇ ಮಾಡೂಣಂತ. ಸದ್ಯಕ್ಕಂತೂ ನಾ ನಂದಗಡಕ್ಕೆ ಹೋಗ್ತೀನಿ. ಅಲ್ಲಿ ಯಾರೂ ನನ್ನ ಗುರ್ತಿಸದಿದ್ದರೆ ಅಲ್ಲೇ ಮನೆ ಮಾಡಿ ನಿಮ್ಮನ್ನು

ಕರಕೊಂಡು ಹೋಗ್ತೀನಿ. ಅಲ್ಲಿ ಅನುಕೂಲ ಆಗದಿದ್ದರೆ ಮೈಸೂರು ಸೀಮೆಯ ಕಡೆ ಹೋಗಲಿಕ್ಕೆ ಬಂದೀತು" ಎಂದಿಷ್ಟೆ ಹೇಳಿ ಹೆಂಡತಿಯನ್ನು ಸಂತೈಸಿದೆ.

ಬೆಳವಡಿಗೂ ಹೋಗಿ ರಾಯಣ್ಣನ ಮಾವನನ್ನೂ ಹೆಂಡತಿಯನ್ನೂ ಕಂಡು ಅವರಿಗೂ ಸುದ್ದಿ ತಿಳಿಸಿ ಹೋಗಲೇ? ಎಂದೂ ಅನ್ನಿಸಿತ್ತು. ಆದರೆ, ನಿಂಗವ್ವನ ತಂದೆ ಅಪ್ಪಣ್ಣ ವಿಚಿತ್ರ ಮನುಷ್ಯ. ನಾನು ಈಗಲೂ ಅವನನ್ನು ನಂಬುವಂತಿರಲಿಲ್ಲ. ರಾಯಣ್ಣ ಹೂಡಿದ್ದ ಬಂಡಾಯಕ್ಕೆ ಅಪ್ಪಣ್ಣನ ಸಹಾನುಭೂತಿ ಎಂದೂ ಇರಲಿಲ್ಲ. ಅಳಿಯನ ಪುಂಡಾಟಿಕೆಯ ಬಗೆಗೆ ಆತ ಅವರಿವರೆದುರು ಜೇಷ್ಟೆ ಮಾಡಿ ನಗುತ್ತಿದ್ದನೆಂಬುದು ನಮಗೂ ಗೊತ್ತಾಗಿತ್ತು. ಇನ್ನು, ನಿಂಗವ್ವನ ಮನಸ್ಸು ಹೇಗಿತ್ತೆಂಬುದು ಯಾರಿಗೂ ತಿಳಿಯುವಂತಿರಲಿಲ್ಲ. ಗಂಡನಿಗೆ ಗಲ್ಲಿನ ಶಿಕ್ಷೆಯಾದುದನ್ನು ಕೇಳಿ ಆಕೆಗೆ ದುಃಖವಾಗುವುದಂತೂ ಸ್ಪಷ್ಟವಾಗಿತ್ತು. ತವರುಮನೆಯಲ್ಲಿ ಒಂದು ರೀತಿಯಿಂದ ಬಂದಿಯಾಗಿಯೇ ಕಾಲ ಕಳೆಯುತ್ತಿದ್ದ ಆ ಹೆಣ್ಣು ಹೆಂಗಸು ಈ ಸಂದರ್ಭದಲ್ಲಿ ಅತ್ತು ಅತ್ತು ಗೋಳಾಡುವುದಕ್ಕಿಂತ ಹೆಚ್ಚಿಗೇನನ್ನೂ ಮಾಡಲಾರಳು.

ರಾಯಣ್ಣನ ಬಗೆಗಂತೂ ಅಪ್ಪಣ್ಣನಲ್ಲಿ ಸ್ವಲ್ಪವೂ ಸದಭಿಪ್ರಾಯವಿರಲಿಲ್ಲ. ಅವನ ಪುಂಡಾಟಿಕೆಗೆ ತಕ್ಕ ಪ್ರಾಯಶ್ಚಿತ್ತ ಲಭಿಸಿತೆಂದೇ ಅಪ್ಪಣ್ಣ ಅನ್ನಬಹುದೋ ಏನೋ. ಈಗ ನಾನು ಅಲ್ಲಿಗೆ ಹೋದರೆ ಅವನು ನನ್ನನ್ನು ಹಿಡಿದುಕೊಡಲೂ ಹಿಂಜರಿಯಲಿಕ್ಕಿಲ್ಲ.

ಬೆಳವಡಿಗೆ ಹೋಗುವ ಯೋಚನೆ ತ್ಯಜಿಸಿ ನಾನು ನೇರವಾಗಿ ಬಾಳಗುಂದ ಗುಡ್ಡಕ್ಕೆ ಹೊರಟೆ. ಗಜವೀರ ಸಿಕ್ಕಿದರೆ ಅವನನ್ನೂ ಕರೆದುಕೊಂಡು ನಂದಗಡಕ್ಕೆ ಹೋಗುವ ವಿಚಾರವಿತ್ತು. ಆದರೆ, ಗುಡ್ಡದಲ್ಲಿ ನಾನೆಷ್ಟು ಹುಡುಕಿದರೂ ಗಜವೀರನ ಭೆಟ್ಟಿಯಾಗಲಿಲ್ಲ. ಅವನನ್ನು ಪುಣೆಯ ಕಡೆಯ ಸಂಸ್ಥಾನಿಕರಾರೋ ಕರೆದುಕೊಂಡು ಹೋದರೆಂದು ಸುದ್ದಿ ತಿಳಿಯಿತು, ಅಷ್ಟೆ.

ಬಾಳಗುಂದದ ಗುಡ್ಡದಿಂದ ಹೊರಟವನು ಎಲ್ಲಿಯೂ ನಿಲ್ಲದೆ ನೆಟ್ಟಗೆ ನಂದಗಡಕ್ಕೆ ಬಂದೆ. ಮರುದಿವಸದ ಬೆಳಗಿನಲ್ಲಿಯೇ ರಾಯಣ್ಣನಿಗೂ ಇನ್ನೂ ಆರುಮಂದಿ ಸಂಗಡಿಗರಿಗೂ ಗಲ್ಲಿನ ಶಿಕ್ಷೆಯಾಗುವುದಿತ್ತು. ಊರಿನಲ್ಲಿ ಪ್ರವೇಶಿಸುತ್ತಿದ್ದಂತೆ ಒಂದು ಕಡೆಗೆ ಸಿದ್ಧಗೊಳಿಸಲ್ಪಟ್ಟಿದ್ದ ಏಳು ನೇಣುಗಂಬ

ಗಳು ಕಾಣಿಸಿದುವು. ಸುತ್ತಲೂ ಬಂದೂಕಿನ ಸಿಪಾಯಿಗಳು ಕಾವಲು ಮಾಡುತ್ತಿದ್ದರು.

ರಾಯಣ್ಣನನ್ನೂ ಸಂಗಡಿಗರನ್ನೂ ಸರ್ಕಾರದವರು ರಾತ್ರಿಯಲ್ಲಿಯೇ ಧಾರವಾಡದಿಂದ ಸಾಗಿಸಿಕೊಂಡು ಬಂದು ಯಾವುದೋ ಗುಪ್ತಸ್ಥಳದಲ್ಲಿ ಬಿಡಾರ ಮಾಡಿದಂತಿತ್ತು. ಬೆಳಗಾಗುತ್ತಿದ್ದಂತೆಯೇ ಓಲೆಕಾರರು ಊರಲ್ಲೆಲ್ಲ ತಿರುಗಿ ಗಲ್ಲಿನ ಶಿಕ್ಷೆಯ ಬಗೆಗೆ ಡಂಗುರ ಸಾರಿದರು. ನಂದಗಡದ ಸುತ್ತಲಿನ ಪ್ರದೇಶದಲ್ಲಿಯೇ ರಾಯಣ್ಣನ ಅನೇಕ ಚಟುವಟಿಕೆಗಳು ನಡೆದಿದ್ದುದರಿಂದ ಆ ಸೀಮೆಯ ಜನರಿಗೆ ಅಂಜಿಕೆ ಹುಟ್ಟಿಸುವ ಉದ್ದೇಶದಿಂದಲೇ ಆತನನ್ನು ನಂದಗಡದಲ್ಲಿ ಗಲ್ಲಿಗೇರಿಸುವ ಹಂಚಿಕೆ ಹೂಡಿರಬೇಕು ಪರದೇಶಿಗಳು.

ತಾಯಿ, ಹೆಂಡತಿ, ಮಗ ಎಲ್ಲರನ್ನೂ ಕರೆದುಕೊಂಡು ಸಿದ್ದಣ್ಣ ಅಂತ್ಯದರ್ಶನಕ್ಕಾಗಿ ಮುನ್ನಾದಿನವೇ ನಂದಗಡಕ್ಕೆ ಬಂದಿರಬೇಕು. ನಸುಕು ಹರಿಯುತ್ತಲೂ ವಧಾಸ್ಥಾನದ ಬಳಿ ಹೋದ ನನಗೆ ದೂರದಿಂದಲೇ ಅವರು ಕಾಣಿಸಿಕೊಂಡರು. ನಾನು ಅವರ ಹತ್ತಿರ ಹೋಗಿ ಅವರನ್ನು ಮಾತನಾಡಿಸುವುದು ಗಂಡಾಂತರಕಾರಿಯಾಗಿದ್ದುದರಿಂದ ಅವರಿಗೆ ಗೋಚರವಾಗದಂತೆ ತುಸು ದೂರದಲ್ಲಿಯೇ ನಿಂತುಕೊಂಡಿದ್ದೆ.

ಮೂಡಲಲ್ಲಿ ಹೊಂಬಣ್ಣದ ಬೆಳಕು ಹರಡುತ್ತಿದ್ದಂತೆ ನೂರಾರು ಮಂದಿ ಸಶಸ್ತ್ರ ಸೈನಿಕರ ಕಾವಲಿನಲ್ಲಿ ರಾಯಣ್ಣನೂ ಸಂಗಡಿಗರೂ ಗಂಭೀರವಾಗಿ ಅಡಿಯಿಡುತ್ತ ಬರುತ್ತಿದ್ದುದು ಕಾಣಿಸಿತು. ತಮ್ಮ ನಾಯಕನ ಜೊತೆಯಲ್ಲಿಯೇ ವೀರಸ್ವರ್ಗಕ್ಕೇರಲು ತಯಾರಾಗಿ ಬಂದಿದ್ದ ನಮ್ಮ ಬಂಧುಗಳಾರೆಂಬುದು ಆಗ ನನಗೆ ತಿಳಿಯಿತು. ನಮ್ಮೆಲ್ಲರಿಗೂ ಪ್ರಿಯರಾಗಿದ್ದ ಆ ಆರು ಮಂದಿ ಬಂಟರು: ಬಾಳನಾಯಕ, ಬಸಲಿಂಗಪ್ಪ, ಕಲಬಸಪ್ಪ, ಭೀಮಪ್ಪ, ಕೆಂಚಪ್ಪ ಮತ್ತು ಅಪ್ಪಾಜಿ....ಅವರೆಲ್ಲರಿಗೂ ದೂರದಿಂದಲೇ ಕೈಮುಗಿದು, ಅಶ್ರುತರ್ಪಣವಿತ್ತು, ಧಾವಿಸಿ ಹೋಗಿ ಅವರನ್ನೆಲ್ಲ ಅಪ್ಪಿಕೊಳ್ಳಬೇಕೆಂಬ ಬಯಕೆಯನ್ನು ಬಲು ಕಷ್ಟದಿಂದ ಅದುಮಿಹಿಡಿದು ಕಲ್ಲಿನ ಕಂಬದಂತೆ ನಿಂತುಕೊಂಡಿದ್ದೆ.

ಮಗನ ಮುಖ ಕಾಣಿಸುತ್ತಲೂ ಅವನ ಕಡೆಗೆ ನುಗ್ಗಿದ ಕೆಂಚವ್ವನನ್ನು ಸಿಪಾಯಿಗಳು ನಿಷ್ಠುರತೆಯಿಂದಲೇ ಅತ್ತ ತಳ್ಳಿದರು. ಸೈನಿಕರ ಬಿಚ್ಚುಗತ್ತಿಗಳ ನಡುವೆ ನಡೆದು ಬರುತ್ತಿದ್ದ ರಾಯಣ್ಣ ತಾಯಿಯತ್ತ ದೃಷ್ಟಿ ತಿರುಗಿಸಿ

ಅಲ್ಲಿಂದಲೇ ಕೈಯೆತ್ತಿ ವಂದಿಸಿ, ಮತ್ತೆ ಧೀರಗತಿಯಿಂದ ಮುಂದೆ ನಡೆದ. ಅಷ್ಟರಲ್ಲಿಯೇ, ಹುಚ್ಚಿಯಂತೆ ಕಾಣಿಸುತ್ತಿದ್ದ ಬ್ರಾಹ್ಮಣಿಯೊಬ್ಬಳು ವಿಕಟಾಟ್ಟ ಹಾಸ ಮಾಡುತ್ತ ಜನಜಂಗುಳಿಯಲ್ಲಿ ನುಗ್ಗಿ ಬಂದಳು; ರಾಯಣ್ಣನಿಗೆ ಕಾಣಿಸು ವಂತೆ ಎದೆ ಎದೆ ಬಡಿದುಕೊಂಡು ಹುಚ್ಚು ಹುಚ್ಚಾಗಿ ನಗುತ್ತ ಅವಳು ಕೂಗಿ ಕೊಂಡಳು.

"ನಾನ್ಯಾರು ಗೊತ್ತಾತೇನೋ ರಾಯಾ? ನಾನೇ ನೋಡೋ ನಂದ ಗಡದ ಚಂಡಿ–ಚಾಮುಂಡಿ. ನನ್ನ ಗಂಡನ್ನ ಕೊಂದು ನನ್ನ ರಂಡಿಮುಂಡಿ ಯಾಗಿ ಮಾಡಿದ್ದಿ ನೀ. ಈಗ ನಿನ್ನ ಹೆಂಡತಿಯೂ ನನ್ನಂಗೇ ರಂಡಿಮುಂಡಿ ಯಾಗತಾಳ....ನನ್ನ ಕಣ್ಣೆದುರಿಗೇ ನೀ ಗಲ್ಲಿಗೇರುತೀ ಅಂತ ಆಗಲೇ ನಾ ಹೇಳಿದ್ದಿನಿ.... ನೆನಪೈತ್ಯೇನೋ ರಾಯಾ? ನಾ ಹೇಳಿದಂಗs ನೀ ಇದೇ ನಂದ ಗಡದಲ್ಲೇ ನನ್ನ ಕಣ್ಣೆದುರಿಗೇ ಫಾಸೀ ಹೋಗುತಿದೀಯೋ ಪುಂಡ ರಾಯಾ! ಇಂದಿಗೆ ಸಮಾಧಾನ ಆತು ನನಗ........"

ರಾಯಣ್ಣನ ಕಡೆಗೆ ಓಡಿಬರುತ್ತಿದ್ದ ಆ ಬ್ರಾಹ್ಮಣಿಯನ್ನೂ ಸೈನಿಕರು ಅತ್ತ ತಳ್ಳಿದರು. ಅಲ್ಲಿ ನೆರೆದ ಜನಸಂದಣಿಯಲ್ಲಿ ರಾಯಣ್ಣನ ಅಭಿಮಾನಿ ಗಳೂ ಇದ್ದಿರಲೇಬೇಕು. ಅವರಲ್ಲೊಬ್ಬ ಆ ಬ್ರಾಹ್ಮಣಿಗೆ ಎರಡು ಏಟು ಬಿಗಿದು ದರದರನೆ ಎಳೆದೊಯ್ದು ದೂರಬಿಟ್ಟು ಬಂದ. ಬಾಪು ಬಂಡಾರಿಯ ಕ್ರೂರ ಕೃತ್ಯದ ಪರಿಣಾಮವಾಗಿ ಆಕೆಯ ಗಂಡ ಜೀವಕ್ಕೆರವಾಗಿದ್ದ. ನಿಜವಾಗಿ ಆ ಕೊಲೆಯಲ್ಲಿ ರಾಯಣ್ಣನ ಅಂಗವೇನೂ ಇರಲಿಲ್ಲ. ಆದರೂ ಬಂಡಾರಿ, ನಮ್ಮ ಜೊತೆಗೇ ಇದ್ದುದರಿಂದ ದಂಡಿನ ನಾಯಕನಾದ ರಾಯಣ್ಣನಿಗೂ ಆ ಹೆಣ್ಣು ಮಗಳ ಶಾಪ ಬಡಿದುಕೊಂಡಿತ್ತು. ರಾಯಣ್ಣನ ಅಂತ್ಯಸಮಯದಲ್ಲಿ ಆಕೆ ಯನ್ನು ಈ ಅವತಾರದಲ್ಲಿ ನೋಡಿ ನನ್ನ ಮೈಯೆಲ್ಲ ಮುಳ್ಳು ಚುಚ್ಚಿದಂತೆ ಅನುಭವವಾಯಿತು.

ರಾಯಣ್ಣನೂ ಇತರರೂ ವಧಾಸ್ಥಾನದ ಬಳಿ ಬಂದಿದ್ದರು. ನಾನೂ ಸ್ವಲ್ಪ ಸಮೀಪದಲ್ಲಿ ಬಂದು ನಿಂತುಕೊಂಡಿದ್ದೆ.

"ನಿನ್ನ ಕೊನೆಯ ಇಚ್ಛೆಯೇನಾದರೂ ಇದ್ದರೆ ಹೇಳು ರಾಯಣ್ಣಾ" ಎಂದ ಅಧಿಕಾರಿ.

"ನನ್ನ ಹಡೆದವ್ವ ಬಂದಾಳ ನನ್ನ ನೋಡಲಿಕ್ಕೆ. ನನ್ನ ಅಣ್ಣ ಅತ್ತಿಗೆ– ..........